# ಕಸ್ತೂರಿ





ಜುಲೈ, ೧೯೬೨

ಬೆಲೆ : ೭೫ ನ.ಪೈ.

ಇಂದಿನ ವಿಶ್ವಕ್ಕೊಂದು ಬೆಳಕಿಂಡಿ

ಕಸ್ತೂರಿ

PHILLIPS ಫಿಲಿಪ್ಸ್ ಸೈಕಲ್‌ಗಳು

## ನಿಮಗಾಗಿಯೇ ತಯಾರಿಸಲ್ಪಟ್ಟಿವೆ

ನಾಜೋಕಾಗಿ ಕಾಣುವ ಫಿಲಿಪ್ಸ್ ಸೈಕಲ್ ಇಂದಿನ ನಿಮ್ಮಂತಹ ಉತ್ಸಾಹೀ ತರುಣರ ಅವಶ್ಯಕತೆಗಾಗಿ ತಯಾರಿಸಲ್ಪಟ್ಟಿವೆ. ಹದವಾದ ಉಕ್ಕಿನಿಂದ ತಯಾರಿಸಲ್ಪಟ್ಟಿದ್ದು, ಅತ್ಯಂತ ಒರಟಾದ ಉಪಯೋಗಕ್ಕೂ ಹೊಂದಿಕೊಳ್ಳುವ ಶಕ್ತಿಯನ್ನೂ, ನಯವನ್ನೂ ಹೊಂದಿವೆ. ಸುಮಾರು 70 ವರ್ಷಗಳಿಂದ ವಿಶ್ವದಲ್ಲೆಲ್ಲಾ ಪ್ರಸಿದ್ಧವಾಗಿದೆ. ಟಿ. ಐ. ಸೈಕಲ್ಸ್‌ನ ಅತ್ಯಾಧುನಿಕ ಫ್ಯಾಕ್ಟರಿಯಲ್ಲಿ ತಯಾರಾದ ಈ ಸೈಕಲ್‌ಗಳು ನಿಷ್ಕೃಷ್ಟ ತಯಾರಿಕೆಯಾಗಿವೆ.

ಟಿ. ಐ. ಸೈಕಲ್ಸ್ ಆಫ್ ಇಂಡಿಯಾ, ಅಂಬತ್ತೂರು, ಮದರಾಸು




WT/TIC/PH/1605

# ಕಸ್ತೂರಿ

**ಕನ್ನಡ ಡೈಜೆಸ್ಟ್**

ಪ್ರತಿ ತಿಂಗಳ ೧ ನೇ ದಿನಾಂಕ
ಪ್ರಕಟವಾಗುವುದು.

ಮುಖ್ಯ ಸಂಪಾದಕರು :
ರಂಗನಾಥ ದಿವಾಕರ

ಸಹಾಯಕ ಸಂಪಾದಕರು :
ಪಿ. ವಿ. ಆಚಾರ್ಯ

ಪ್ರಕಾಶಕರು :
ಲೋಕ ಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ

ಕಚೇರಿ :
ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ

ಮುದ್ರಕರು :
ಸಂಯುಕ್ತ ಕರ್ನಾಟಕ ಮುದ್ರಣಾಲಯ
ಹುಬ್ಬಳ್ಳಿ

ಮುಖಚಿತ್ರ :
ನಮ್ಮ ಹಳ್ಳಿಯ ವರ್ತಕ ಶಿಖಾಮಣಿ
ಎ. ಎಸ್. ಆರ್. ಮೂರ್ತಿ

ಚಂದಾ ದರ :

| | |
|---|---|
| ವಾರ್ಷಿಕ(ಅಂಚೆಸೇರಿ). | ರೂ.೮·೦೦ |
| ಅರ್ಧ ವರ್ಷ — | ರೂ. ೪·೫೦ |
| ಬಿಡಿಸಂಚಿಕೆ — | ರೂ. ೦·೭೫ |

**Kasturi, July 1962**


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗೂ ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ **ಲೇಖಗಳ ಸಂಗಡವೇ** ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು. ಲೇಖಗಳು ಅಕಸ್ಮಾತ್ತಾಗಿ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖ ಪ್ರಕಟವಾದರೆ "ಕಸ್ತೂರಿ" ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗದೆ.

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವದು. ಅದು ಚಂದಾದಾರರಿಗೆ ಆಯಾ ತಿಂಗಳ ೫ನೇ ದಿನಾಂಕದೊಳಗೆ ತಲುಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ



ಪುಸ್ತಕ ವಿಭಾಗ

ಕಸ್ತೂರಿ



ಸಂಚಿಕೆ ೧೧ ಜುಲೈ, ೧೯೬೨ ವರ್ಷ ೬

ಶ್ರೀ ರಾಮಕೃಷ್ಣ ಪರಮಹಂಸರ
ಒಂದು ಕಥಾಪ್ರಸಂಗ

# ದೇವರಲ್ಲಿ ಪ್ರೀತಿ

ಕೆ. ರಮೇಶ ಪೈ

ಚಾತಕ ಪಕ್ಷಿಯದೊಂದು ವಿಶಿಷ್ಟ ಗುಣ— ಕೇವಲ ಮಳೆಯ ಹನಿಯಿಂದ ಮಾತ್ರವೇ ಅದು ಸಂತೃಪ್ತವಾಗುತ್ತದೆ. ನೀರಡಿಕೆಯಿಂದ ಪಕ್ಷಿಯೊಳಗೆ ಹುದುಗಿಕೊಂಡಿರುವ ಪ್ರಾಣಪಕ್ಷಿಯೇ ಹಾರಿಹೋಗುವಂತಿದ್ದರೂ ಅದು ತನ್ನ ಕೊಕ್ಕನ್ನು ಮೇಲಕ್ಕೆತ್ತಿ ವ್ಯೋಮದಿಂದ ಬೀಳುವ ನೀರಿನ ಹನಿಯನ್ನೇ ಕುಡಿಯುತ್ತದೆ ವಿನಾ ಬೇರಾವ ಮೂಲದಿಂದ ಬರುವ ನೀರನ್ನದು ಸುತಾರಾಂ ಕುಡಿಯಲೊಲ್ಲದು. ಈ ಭೂಮಿಯಲ್ಲಿ ಗಂಗೆ, ಯಮುನೆಯೂ ಸಪ್ತಶರಧಿಗಳೂ ಹರಡಿಕೊಂಡಿವೆ. ಅಂತಿದ್ದರೂ ಭೂಮಿಯ ನೀರನ್ನದು ಸ್ಪರ್ಶಿಸದು.

ಒಮ್ಮೆ ರಾಮ ತನ್ನನುಜ ಲಕ್ಷ್ಮಣನನ್ನು ಒಡವೆರೆದು ಪಂಪಾಸರೋವರಕ್ಕೆಂದು ಹೋಗಿದ್ದನು. ಅಲ್ಲಿ ಲಕ್ಷ್ಮಣನು ನೀರಡಿಕೆಯಿಂದ ಗಂಟಲೊಣಗಿ ಬಳಲುತ್ತಿರುವ ಕಾಗೆಯೊಂದನ್ನು ಕಂಡನು. ಆ ಕಾಗೆ ಮತ್ತೊಮ್ಮೆ ಮಗುದೊಮ್ಮೆ ಎಂಬಂತೆ ಪುಷ್ಕರಿಣಿಯ ತಟಕ್ಕೆ ಹೋಗುತ್ತಿತ್ತು. ಆದರೆ ಅಲ್ಲಿನ ನೀರನ್ನು ಕುಡಿಯುತ್ತಲೇ ಇರಲಿಲ್ಲ.

ಲಕ್ಷ್ಮಣನು ಬೆರಗಾಗಿ ರಾಮನನ್ನು ಕೇಳಿದನು: "ಅಣ್ಣ, ಏನಿದರ ಕತೆ ?" ಎಂದು.

ಅದಕ್ಕೆ ರಾಮನು, "ತಮ್ಮಾ, ಈ ಕಾಗೆ ಪರಮಾತ್ಮನಲ್ಲಿ ಅಪಾರ ಭಕ್ತಿ, ವಿಶ್ವಾಸವಿಟ್ಟಿರು

ತ್ತದೆ. ಹಗಲೆನ್ನದೆ, ರಾತ್ರಿಯೆನ್ನದೆ ಅದು ರಾಮನ ನಾಮವನ್ನು ಸದಾ ಭಜಿಸುತ್ತಿರುತ್ತದೆ. ಆದರ ಗಂಟಲೀಗ ಬಾಯಾರಿಕೆಯಿಂದ ಪೂರ್ಣ ಎಂಬಂತೆ ಒಣಗಿ ಹೋಗಿದೆ. ಹಾಗಿದ್ದರೂ ನೀರು ಕುಡಿಯಹೋದರೆ, ಆ ಹೊತ್ತಿಗೆ ತಾನು ರಾಮನ ಆ ದಿವ್ಯನಾಮವನ್ನು ಉಚ್ಚರಿಸುವ ಕಾರ್ಯ ದಲ್ಲಿ ಸೋತುಹೋದೇನು ಎನ್ನುವ ಭೀತಿ ಯಿಂದ ಅದು ನೀರನ್ನು ಕುಡಿಯಲಿಕ್ಕನೇ ಹೋಗುವುದಿಲ್ಲ" ಎಂಬುದಾಗಿ ಉತ್ತರವಿತ್ತನು.

ಮತ್ತೊಂದು ಬಾರಿ, ಲಂಕೆಯಿಂದ ಹನು ಮಂತ ಮೂರ್ತಿ ಹಿಂತೆರಳಿ ಬಂದಾಗ ರಾಮ ಚಂದ್ರ ಅವನೊಡನೆ ಉತ್ಸುಕನಾಗಿ, "ಏನು ನೀನು ಸೀತೆಯನ್ನು ಕಂಡೆಯೇನು? ಹಾಗಿದ್ದಲ್ಲಿ ಅವಳನ್ನು ನೀನು ಹೇಗೆ ಕಂಡೆ? ಯಾವ ಸ್ಥಿತಿ ಯಲ್ಲಾಕೆ ನಿಜವಾಗಿ ಇದ್ದಳು?" ಎಂದು ಮುಂತಾಗಿ ಪ್ರಶ್ನಿಸಿದನು.

ಅದಕ್ಕೆ ಆಂಜನೇಯ, ಇದ್ದುದನ್ನು ಇದ್ದಂತೆ ವರ್ಣಿಸುತ್ತ, "ಓ ರಾಮಾ, ನಾನು ಸೀತೆಯ ದೇಹ ಮಾತ್ರ ಅಲ್ಲಿ ಬಿದ್ದಿರುವುದನ್ನು ಕಂಡೆನು. ಅವಳು ತನ್ನ ಆತ್ಮವನ್ನಾಗಲಿ, ಮನಸ್ಸನ್ನಾಗಲಿ ತನ್ನ ದೇಹದಲ್ಲಿ ಇರಗೊಡಲು ಬಿಡಲಿಲ್ಲ. ಅವೆರ ಡನ್ನೂ ನಿನ್ನ ಪಾದಪದ್ಮಗಳಲ್ಲಾಕೆ ಚೆಲ್ಲಿದ್ದಳು. ಆದುದರಿಂದ ಲಂಕೆಯಲ್ಲಿ ಅವಳ ಶರೀರ ಮಾತ್ರ ವನ್ನು ಕಾಣಲು ನಾನು ಸಮರ್ಥನಾದೆ. ಆ ಹೊತ್ತಿಗೆ ಮೃತ್ಯುರಾಜನು ಅಲ್ಲಿ ಹೊಂಚು ಹಾಕು ತ್ತಿರುವುದನ್ನು ನಾನು ಕಂಡೆನು. ಆದರೆ ಅವ ನಿಂದೇನು ಸಾಧ್ಯವಾದೀತು? ಅಲ್ಲಿ ಅವಳ ದೇಹ ಮಾತ್ರವಿತ್ತು! ಅದರಲ್ಲಿ ಮನಸ್ಸೂ ಇದ್ದಿರಲಿಲ್ಲ; ಆತ್ಮವೂ ಮಾಯವಾಗಿತ್ತು; ಅವೆರಡೂ ಎಲ್ಲೋ ಲೀನವಾಗಿದ್ದಂತೆ ತೋರಿತೆನಗೆ" ಎಂಬುದಾಗಿ ಹೇಳಿದನು.

ನೀನು ಯಾವುದಾದರೊಂದು ಆದರ್ಶವನ್ನು ಗಟ್ಟಿಯಾಗಿ ಹಿಡಿದುಕೊಂಡು ಅದನ್ನು ಕುರಿತು ಯೋಚನೆ, ಚಿಂತನೆ, ಧ್ಯಾನ ಮಾಡುವುದೇ ಆದರೆ, ನೀನು ಅದರ ಪ್ರಾಕೃತಿಕ ಗುಣಲಕ್ಷಣ ಗಳನ್ನು ಪೂರ್ಣವಾಗಿ ಅಳೆಯಬಲ್ಲೆ. ನೀನು ದೇವರನ್ನು ಕುರಿತು ಹಗಲೆನ್ನದೆ ರಾತ್ರಿಯೆನ್ನದೆ ಚಿಂತಿಸುತ್ತಿರು, ಆಗ ನೀನು ದೇವರ ಪ್ರಾಕೃತಿಕ ಸ್ವರೂಪ, ಮೂಲ ಸ್ವಭಾವಗಳನ್ನು ತಿಳಿಯಲು ಬಲ್ಲೆ. ಇದು ಸತ್ಯ.

ಒಂದು ಉಪ್ಪಿನ ಗೊಂಬೆ ಆಳ ಅಳೆಯಲೆಂದು ಸಮುದ್ರವನ್ನು ಹೊಕ್ಕಿತು. ಹಾಗೆ ಹೋದ ಗೊಂಬೆ ಆ ಮಹಾ ಶರಧಿಯೊಳಗೆ ಕರಗಿ ಅದ ರೊಂದಿಗೆ ಒಂದಾಗಿ ಹೋಯಿತು.

ಪುಸ್ತಕಗಳ, ಮಹಾ ಗ್ರಂಥಗಳ ಅಂತಿಮ ಗುರಿಯೇನು ಮತ್ತೆ? ಪರಮಾತ್ಮನನ್ನು ಪಡೆಯು ವುದು, ಅವನ ದಿವ್ಯ ಸಾನ್ನಿಧ್ಯವನ್ನು ಹೊಂದು ವುದು ಅಷ್ಟೆ!

ಒಮ್ಮೆ ಒಬ್ಬ ಮನುಷ್ಯ ಸಾಧುಪೋರ್ವನ ಬಳಿ ಯಲ್ಲಿದ್ದ ಪುಸ್ತಕವನ್ನು ಬಿಚ್ಚಿ ನೋಡಿದನು. ಅವ ನಿಗೆ ಕಂಡದ್ದೇನು? ಪುಸ್ತಿಕೆಯ ಪ್ರತಿ ಓಲೆಯಲ್ಲೂ 'ರಾಮ' 'ರಾಮ' ಎಂದು ಬರೆದಿರುವ ಎರಡು ಅಕ್ಕರೆಯ ಅಕ್ಷರಗಳಿಂದ ಕೂಡಿಕೊಂಡಿರುವ ಅಮೃತ ಸಮಾನವಾದ ಶಬ್ದರಾಶಿಗಳು. ಅದರಲ್ಲಿ ರಾಮನ ಹೊರತಾಗಿ ಬೇರಾರಿಗೂ ಪ್ರವೇಶ ವಿರಲಿಲ್ಲ.

ಮನುಷ್ಯ ದೇವರನ್ನು ಪ್ರೀತಿಸುತ್ತಿರುವುದೇ ಆದಲ್ಲಿ ಒಂದು ಚಿಕ್ಕ ವಿಷಯ, ಘಟನೆ ಕೂಡಾ ಅವನ ಆಧ್ಯಾತ್ಮಿಕ ಚಿಂತನೆಯನ್ನು ಕೆಣಕಿಸದೆ, ಜಾಗೃತಗೊಳಿಸದೆ ನಿಲ್ಲದು. ಮತ್ತವನು ರಾಮನ ಆ ನಾಮವನ್ನು ಚಿರಂತನವಾಗಿ ಸ್ಮರಿಸುತ್ತ ಇದ್ದಲ್ಲಿ ಅವನಿಗೆ ಕೋಟಿ ಬಾರಿ ಸಂಧ್ಯಾವಂದನೆ ಮಾಡಿದ ಫಲ ಬಾರದಿರದು.

ಆಕಾಶದಲ್ಲಿ ಮೋಡಗಳು ಉದಿಸಿ ಬಂದುವೆಂ ದರೆ ನವಿಲುಗಳ ರಾಗ ಭಾವಗಳು ಜಾಗೃತವಾಗ ಲಾರಂಭಿಸುತ್ತವೆ. ಅವು ಗರಿಗೆದರಿ ಕುಣಿಯು ತ್ತವೆ, ಹಾರುತ್ತವೆ, ನಲಿಯುತ್ತವೆ.

ರಾಧೆಗೂ ಇದೇ ರೀತಿಯ ಅನುಭವವಾಗು ತ್ತಿತ್ತು, ಮೋಡಗಳು ಕಾಣಿಸತೊಡಗಿದುವೆಂ ದರೆ ಅವಳಿಗೆ ಕೃಷ್ಣನ ನೆನಪು ಕ್ಷಣಕ್ಷಣಕ್ಕೂ

ಆಗುತ್ತಿತ್ತು.

ಚೈತನ್ಯದೇವರೊಮ್ಮೆ ಹಳ್ಳಿಯ ಮಾರ್ಗವಾಗಿ ಹಾದು ಹೋಗುತ್ತಿದ್ದರು. ಅಲ್ಲಿ ಮೃದಂಗಗಳು ಅದೇ ಸ್ಥಳದ ಮಣ್ಣಿನಿಂದ ಮಾಡಲ್ಪಡುತ್ತಿದ್ದವು ಎಂಬುದನ್ನು ಕೇಳಿದಾಗ ಅವರಿಗೆ ಎಲ್ಲಿಲ್ಲದ ಆನಂದವಾಯಿತು. ಏಕೆಂದರೆ ಆ ವಾದ್ಯವನ್ನು ಹರಿಯ ಕೀರ್ತನೆಗಾಗಿ ಉಪಯೋಗಿಸುತ್ತಾರೆಂದು ಅವರಿಗೆ ಗೊತ್ತಿತ್ತು.

ಆದರೆ ಯಾರಿಗೆ ಈ ರೀತಿಯ ಧರ್ಮಜಾಗೃತಿಯಾದೀತು? ಐಹಿಕ ಸುಖಗಳನ್ನು ಬದಿಗೊತ್ತಿದ ಮಹಾತ್ಯಾಗಿಯೊಬ್ಬನಿಗೆ ಸಾಧ್ಯವಾದೀತು. ಲೌಕಿಕ ವಿಷಯಗಳಲ್ಲಿರುವ ಆಸಕ್ತಿಯ ಊಟೆ ಬತ್ತಿ ಹೋಗಬೇಕು. ಆ ಹೊತ್ತಿಗೆ ಒಂದು ಚಿಕ್ಕ ಸೂಚನೆಯಾದರೂ ಅವನ ಅಧ್ಯಾತ್ಮದ ಕುರಿತಾದ ಚಿಂತನೆಯನ್ನು ಎಚ್ಚರಿಸಬಹುದದು. ಎಷ್ಟೇ ಪ್ರಯತ್ನಪಟ್ಟರೂ ಒಂದು ಒದ್ದೆಯಾದ ಬೆಂಕಿ ಪೆಟ್ಟಿಗೆಯನ್ನು ಗೀರಿ ಬೆಂಕಿಯ ಕೆಂಗಿಡಿಯನ್ನು ನೀನು ಹಾರಿಸುವಂತಿದೆಯೆ? ಇಲ್ಲ. ಆದರೆ ಅದಕ್ಕೆ ಅಂಟಿಕೊಂಡಿದ್ದ ನೀರು ತೀವ್ರ ಆರಿ ಅದು ಪೂರ್ಣವಾಗಿ ಒಣಗಿ ಹೋಯಿತೆಂದರೆ ಒಂದು ಅತಿ ಸರಳ ತಿಕ್ಕುವಿಕೆಯೂ ಬೆಂಕಿಯನ್ನು ಕೊಡಬಲ್ಲುದು.

ಸುಖ, ದುಃಖ ಈ ದೇಹಕ್ಕೆ ಇದ್ದೇ ಇದೆ. ಆದರೆ ಯಾವಾತನು ದೇವರನ್ನು ಸಂಪೂರ್ಣ ಅರಿತುಕೊಂಡಿದ್ದಾನೋ ಅವನು ತನ್ನ ತನು, ಮನ, ಜೀವ, ಆತ್ಮಗಳೆಲ್ಲವನ್ನು ಅವನಿಗೇ ಅರ್ಪಿಸುತ್ತಾನೆ.

ಮತ್ತೆ ಇನ್ನೊಂದು ಸಂದರ್ಭದಲ್ಲಿ ರಾಮ-ಲಕ್ಷ್ಮಣರು ಸ್ನಾನಕ್ಕೆಂದು ಪಂಪಾ ಸರೋವರಕ್ಕೆ ಬಂದಿದ್ದರು. ತಾವು ಧರಿಸಿದ್ದ ಬಿಲ್ಲುಗಳನ್ನು ತೆಗೆದು ನೆಲದ ಮೇಲೆ ಎಸೆದುಬಿಟ್ಟರು. ನೀರಿನಿಂದ ಮೇಲಕ್ಕೆದ್ದು ಬಂದಾಗ ಬಿಲ್ಲಿನ ತುದಿ ರಕ್ತಸಿಕ್ತವಾಗಿರುವುದನ್ನು ಲಕ್ಷ್ಮಣ ಕಂಡ. ಬೆರಗಾಗಿ ರಾಮನೊಡನೆ, "ಅಣ್ಣ, ಅಣ್ಣ, ನೋಡಿಲ್ಲಿ! ನಾವು ಯಾವುದೋ ಬಡ ಜೀವವನ್ನು ತೊಂದರೆಗೆ ಗುರಿಪಡಿಸಿದೆವು" ಎಂದು ನಡೆದ ಸಂಗತಿ ತಿಳಿಸಿದನು. ಕೂಡಲೇ ಲಕ್ಷ್ಮಣ ಅಲ್ಲಿನ ಭೂಮಿಯನ್ನು ಅಗೆದ. ನೋಡುತ್ತಾನೆ, ಅಲ್ಲೊಂದು ಮಂಡೂಕ, ಇನ್ನೇನು, ಪ್ರಾಣ ಹೋಗುವ ಸ್ಥಿತಿಯಲ್ಲಿರುವುದನ್ನು ಲಕ್ಷ್ಮಣ ಕಂಡು ಮರುಗಿದನು.

ರಾಮನೂ ಚಿಂತೆಯಿಂದ ತುಂಬಿದವನಾಗಿ ದುಃಖದ ದನಿಯಲ್ಲಿ ಆ ಕಪ್ಪೆಗೆ, "ನೀನೇಕೆ ಕೂಗಲಿಲ್ಲ, ಮತ್ತೆ? ನಾವಾಗ ನಿನ್ನನ್ನು ರಕ್ಷಿಸುವ ಪ್ರಯತ್ನವಾದರೂ ಮಾಡುತ್ತಿದ್ದೆವು. ಸರ್ಪವೊಂದರ ದವಡೆಯಲ್ಲಿದ್ದಾಗ ನೀನು ಬಹಳಷ್ಟು ಬೊಬ್ಬಿಡುತ್ತಿ. ಆದರೆ ಈಗ ಮತ್ತೇಕೆ ಸುಮ್ಮಗಿದ್ದೆ?" ಎಂದು ಕುಶಲವಾಗಿ ಕೇಳಿದನು.

ಅದಕ್ಕೆ ಕಪ್ಪೆ ಈ ರೀತಿಯಾಗಿ ಮಾರ್ನುಡಿಯಿತು.

"ಓ, ಪ್ರಭುವೆ! ಯಾವಾಗ ಸರ್ಪದ ಬಾಯಿಗೆ ಸಿಲುಕುವೆನೋ ಆವಾಗ ನಾನು, 'ರಾಮಾ, ನನ್ನನ್ನು ರಕ್ಷಿಸು! ಓ ರಾಮಾ! ನನ್ನನ್ನು ರಕ್ಷಿಸು!' ಎಂಬುದಾಗಿ ನಿನ್ನಲ್ಲಿ ಮೊರೆಯಿಡುತ್ತೇನೆ. ಆದರೆ ಈ ಬಾರಿ ಅಂಥ ಆ ರಾಮನೇ ನನ್ನನ್ನು ಕೊಲ್ಲುತ್ತಿರುವುದನ್ನು ಕಂಡು ಬೊಬ್ಬಿಡದೆ ನಾನು ಸುಮ್ಮನಾದೆ. ನಿನ್ನನ್ನು ಬಿಟ್ಟರೆ ನನ್ನನ್ನು ಕಾಯುವವರು ಮತ್ತಾರು?"

ದೇವರಲ್ಲಿ ಪ್ರೀತಿಯೆಂದರೆ ಆ ಕಾಗೆಯಂತೆಯೂ ಈ ಕಪ್ಪೆಯಂತೆಯೂ ಇರಬೇಕಾದುದು ಅವಶ್ಯ.



ಆಧುನಿಕ ಕಲಾಪ್ರಪಂಚದ ಪ್ರಮುಖ

# ಕೆ. ಎಸ್. ಕುಲಕರ್ಣಿ



ಪ್ರೊ ಜಿ. ವಿ. ಕುಲಕರ್ಣಿ

ಮುಂಬಯಿಯ ಸುಪ್ರಸಿದ್ಧ ಜಹಾಂಗೀರ್ ಆರ್ಟ್ ಗ್ಯಾಲರಿಯಲ್ಲಿ ಕಳೆದ ವರ್ಷ ಡಿಸೆಂಬರ್ ೨೦ ರಿಂದ ಒಂದು ವಾರ ಶ್ರೀ ಕುಲಕರ್ಣಿಯವರ ಒಕ್ಕೈ ಪ್ರದರ್ಶನ (one man show) ಇದೆ ಎಂಬ ಸುದ್ದಿ ತಿಳಿದೊಡನೆಯೇ ನನಗೆ ಅವರನ್ನು ಕಾಣಬೇಕೆಂಬಾಸೆಯಾಯ್ತು. ಒಂದೆರಡು ದಿನಗಳ ಹಿಂದೆ ಅವರ ಭಾವಚಿತ್ರ 'ಟೈಮ್ಸ್' ಪತ್ರಿಕೆಯ ಸಂಜೆಯ ಸಂಚಿಕೆಯಲ್ಲಿ ಪ್ರಕಟವಾಗಿತ್ತು. ಅದರಲ್ಲಿ ಈ ಅಂತಾರಾಷ್ಟ್ರೀಯ ಖ್ಯಾತಿಯ ಕಲಾವಿದರು ಬೆಳಗಾವಿಯವರೆಂದು ಬರೆದಿತ್ತು.

ಪ್ರದರ್ಶನದ ಮೊದಲನೆಯ ದಿನ ನಾನು ಜಹಾಂಗೀರ್ ಆರ್ಟ್ ಗ್ಯಾಲರಿಗೆ ಹೋದೆ. ಅಲ್ಲಿದ್ದ ಚಿತ್ರಗಳೆಲ್ಲ ಆಧುನಿಕ ರೀತಿಯಲ್ಲಿ ಬಿಡಿಸಿದ ನವ್ಯ ಚಿತ್ರಕಲಾಕೃತಿಗಳಾಗಿದ್ದವು. ಕೆಲ ಪ್ರೇಕ್ಷಕರ ಪ್ರಶ್ನೆಗಳಿಗೆ ಉತ್ತರ ಕೊಡುತ್ತ ಕುಲಕರ್ಣಿ ನಿಂತಿದ್ದರು. ಅವರ ಹತ್ತಿರ ಹೋಗಿ ಕನ್ನಡದಲ್ಲಿಯೆ ಮಾತನಾಡಿಸೋಣ, ಉತ್ತರ ಕೊಟ್ಟರೆ ಕೊಡಲಿ ಎಂದುಕೊಂಡು— "ನಮಸ್ಕಾರ, ತಾವು ಬೆಳಗಾವಿಯವರೇನು?" ಎಂದೆ. "ಹೌದು. ತಮ್ಮದು ಯಾವ ಊರು?" ಎಂದರು. ಅವರ ಬಾಯಿಯಿಂದ ಬಂದ ಈ ಉತ್ತರ ನನಗೆ ಇಮ್ಮಡಿ ಹರ್ಷ ತಂದಿತು. ಇದಕ್ಕೆ ಕಾರಣವಿಷ್ಟೇ: ಚಿತ್ರಕಲೆಯಲ್ಲಿ ವಿಶ್ವಖ್ಯಾತಿ ಗಳಿಸಿದ ಕನ್ನಡ ಕಲಾವಿದರಲ್ಲಿ ಶ್ರೀ ಕೃಷ್ಣ ಹೆಬ್ಬಾರ, ಆಲಮೇಲಕರ, ಡಿ. ಜಿ. ಕುಲಕರ್ಣಿ, ದಂಡಾವತಿಮಠ, ವ್ಯಂಗ್ಯ ಚಿತ್ರಕಾರ ಆರ್. ಕೆ. ಲಕ್ಷ್ಮಣ ಇವರ ಪರಿಚಯ ನನಗಿತ್ತು; ಈಗ ಶ್ರೀ ಕೆ. ಎಸ್. ಕುಲಕರ್ಣಿಯವರೂ ಕನ್ನಡಿಗರೆಂದು ತಿಳಿಯಿತು.

ಪ್ರದರ್ಶನದ ಕಾಲಕ್ಕೆ ನಾನು ಎರಡು ಸಲ ಶ್ರೀ ಕುಲಕರ್ಣಿಯವರನ್ನು ಭೆಟ್ಟಿಯಾದೆ. ಒಮ್ಮೆ ನಾನು ಕೇಳಿದೆ—

"ನವ್ಯ ಕಾವ್ಯದಂತೆ, ನವ್ಯ ಕಲೆಯೂ ಅನೇಕ ಸಲ ಅರ್ಥವಾಗದೇ ಹೋಗುತ್ತದೆ, ಇದರ ಬಗ್ಗೆ ತಮ್ಮ ವಿವರಣೆ ಏನು?"

"ಹೌದು. ಗೋಕಾಕರು ನವ್ಯಕಾವ್ಯ ಬರೆಯುತ್ತಾರಲ್ಲ— ಎಷ್ಟು ಜನರಿಗೆ ಅರ್ಥವಾಗುತ್ತದೆ? ಕೇವಲ ಭಾವನೆಯಿಂದ ಕೂಡಿದ್ದ ಕಲೆ ಇಂದು ಬುದ್ಧಿಗಮ್ಯವಾಗತೊಡಗಿದೆ. ಹೊಸ ಪ್ರಯೋಗದ ಹಂಬಲು ಕಂಡುಬರುತ್ತಿದೆ. ಚಿತ್ರವೆಂದರೆ ಇಂದು ಗೋಡೆಯನ್ನಲಂಕರಿಸುವ ವಸ್ತುವಲ್ಲ.

ನಿಮ್ಮ ಇಚ್ಛೆಯನ್ನೋ ಅತೃಪ್ತ ಬಯಕೆಯನ್ನೋ ಚಿತ್ರವು ತೃಪ್ತಗೊಳಿಸುವುದೆಂಬ ಅರ್ಥದಿಂದ ನೋಡಿದರೆ, ನೀವು ನಿಜವಾಗಿಯೂ ಅದರೆಡೆ ನೋಡಿದಂತೆಯೇ ಅಲ್ಲ. ಕಲಾವಿದನಿಗೆ ಚಿತ್ರವನ್ನು ಬರೆಯಲು ಪ್ರೇರೇಪಿಸುವ ಶಕ್ತಿ ವಸ್ತುವನ್ನು ನಿರೂಪಿಸುವ ವಿಷಯವಲ್ಲ; ತನ್ನೊಳಗೇ ಅಭಿವ್ಯಕ್ತಿಗಾಗಿ ಹಾತೊರೆಯುತ್ತ ಕುಳಿತಿದ್ದ ಒಂದು ಅತೃಪ್ತ ಬಯಕೆ. ಇದು ಜನತೆ ಹಾಗೂ ರೂಪಗಳ ಸಂಬಂಧ ಪಡೆದು ಒಂದು ಪ್ರತೀಕವನ್ನು ಸಂಕಲ್ಪಿಸಿ, ನಮ್ಮ ಸುತ್ತಲಿನ ಜಗತ್ತಿನಲ್ಲಿಯ ಸೌಂದರ್ಯವನ್ನು ಶೋಧಿಸುವುದು. ದೃಗ್ಗೋಚರವಾದ ಸತ್ಯದ ಆಳವನ್ನು ಶೋಧಿಸುವ ಕೆಲಸ ಅನಂತಮುಖವಾದದ್ದು" ಎಂದರು.

ನಡುವೆ ನಾನು ತಡೆದು ಕೇಳಿದೆ—

"ಈ ಸತ್ಯದ ಅರ್ಥ ನಮಗೆ ತಿಳಿಯುವ ಬಗೆಯೆಂತು ?"

ಈ ಸತ್ಯದ ಅನುಭವ ನಿಮಗೂ ಆಗಬೇಕಾದರೆ ನಿಮ್ಮ ಅಂತರಂಗವನ್ನು ಚಿತ್ರದ ಎದುರು ತೆರೆದಿಡಬೇಕು. ಆಗ ಚಿತ್ರವೇ ನಿಮ್ಮೊಡನೆ ಮಾತನಾಡುತ್ತದೆ."

"ಹಾಗಾದರೆ ಚಿತ್ರಕಲೆ ಎಂದರೆ ಏನು?" ಎಂದೆ.

"ಕಣ್ಣಿಗೆ ಕಾಣುವುದನ್ನು ಕೇವಲ ನಕಲು ಮಾಡುವುದು ಇಂದು ಚಿತ್ರಕಲೆ ಎಂದೆನಿಸಿಕೊಳ್ಳುವುದಿಲ್ಲ. ಇದನ್ನು ಛಾಯಾಚಿತ್ರಗಳೇ ಹೆಚ್ಚು ಯಶಸ್ವಿಯಾಗಿ ಮಾಡಬಲ್ಲವು."

ಕೆಲ ನಿಮಿಷಗಳಲ್ಲೆ ನಾವು ಪಳಗಿದ ಸ್ನೇಹಿತರಂತೆ ಕಲೆಗೆ ಸಂಬಂಧಿಸಿದ ನಾನಾ ವಿಷಯಗಳ ಚರ್ಚೆಯಲ್ಲಿ ಮುಳುಗಿಬಿಟ್ಟೆವು.

ಗುರುದೇವ ರವೀಂದ್ರನಾಥರ ಚಿತ್ರಕಲೆಯ ಬಗ್ಗೆ ಚರ್ಚಿಸಿದಾಗ ಅವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ, "ನನಗೆ ರವೀಂದ್ರರ ಕಲೆಯ ಬಗ್ಗೆ ವಿಶೇಷ ಗೌರವ-ಆದರಗಳಿವೆ. ಅವರ ಕೆಲ ಚಿತ್ರಗಳು ತಾಂತ್ರಿಕ ದೃಷ್ಟಿಯಿಂದ ದೋಷಯುಕ್ತವಾಗಿರಬಹುದು, ಕೆಲವನ್ನು ಚಿತ್ರಿಸುವಲ್ಲಿ ಯೋಗ್ಯ ಕಾಗದದ, ಸಲಕರಣೆಯ ಉಪಯೋಗವಾಗದಿರಬಹುದು, ಆದರೆ ಅವರಲ್ಲಿದ್ದ ಪ್ರತಿಭೆ ಅಗಾಧವಾದದ್ದು. ಅವರಿಗೆ ಚಿತ್ರಕಲೆಯಲ್ಲಿ ತರಬೇತಿ ದೊರೆತಿದ್ದರೆ ಇನ್ನೂ ಮಹಾಕೃತಿಗಳು ಬರಬಹುದಾಗಿತ್ತು. ಜೀವನದ ಆಳವಾದ ಅನುಭವ, ಹೃದಯಂಗಮತೆ, ಅನುಕಂಪನೆ ಹಾಗೂ ದರ್ಶನಗಳ ಹಿನ್ನೆಲೆ ಪಡೆದ ಆ ಮಹಾ ಜೀವಕ್ಕೆ ಚಿತ್ರಕಲೆಯೂ ಅಭಿವ್ಯಕ್ತಿಯ ಒಂದು ಮುಖವಾಗಿ ಪರಿಣಮಿಸಿದ್ದು ಅಚ್ಚರಿಯೇನಲ್ಲ" ಎಂದರು.

ಭಾರತದ ಚಿತ್ರಕಲಾವಿದರಲ್ಲಿ ಶ್ರೀ ಕುಲಕರ್ಣಿಯವರಷ್ಟು ವಿಶ್ವಪರ್ಯಟನ ಕೈಕೊಂಡವ



ನೀರು ತರುವವಳು

ರನ್ನು ಕಾಣುವುದು ವಿರಳ. ಕುಲಕರ್ಣಿಯವರು ೧೯೫೦, ೧೯೫೪, ೧೯೫೮-೫೯ ಹೀಗೆ ಮೂರು ಸಲ ವಿದೇಶ ಪ್ರಯಾಣ ಕೈಕೊಂಡರು. ಅಮೇರಿಕಾ, ಫ್ರಾನ್ಸ್, ಗ್ರೀಸ್, ಹಾಲಂಡ್, ಸ್ವಿಝರಲಂಡ್, ಪೋಲಂಡ್, ಸ್ಪೇನ್, ಥೈಲಂಡ್ ಮತ್ತು ಯುರೋಪಿನ ಎಲ್ಲ ದೇಶಗಳು ಇದಲ್ಲದೆ ದಕ್ಷಿಣ ಅಮೇರಿಕೆ ಹಾಗೂ ಜಪಾನ್‌ಗಳಿಗೆ ಭೆಟ್ಟಿಕೊಟ್ಟರು ಅಲ್ಲಿಯ ಪ್ರಮುಖ ಕಲಾಸಂಸ್ಥೆಗಳನ್ನು ಸಂದರ್ಶಿಸಿದರು. ೧೯೪೮ ರಿಂದ ೬೦ ರ ವರೆಗೆ ಇವರು ಒಟ್ಟು ಹದಿನೇಳು ಏಕ್ಮೇ ಪ್ರದರ್ಶನಗಳನ್ನು ಏರ್ಪಡಿಸಿದ್ದಾರೆ. ಎಂಟು ಸಲ ದಿಲ್ಲಿಯಲ್ಲಿ, ಎರಡು ಸಲ ನ್ಯೂಯಾರ್ಕಿನಲ್ಲಿ, ಕೈರೋ ವಾಶಿಂಗಟನ್, ಸ್ಯಾನ್‌ಫ್ರಾನ್ಸಿಸ್ಕೊ, ಟೋಕಿಯೊ, ಕಲಕತ್ತಾ. ಮುಂತಾದ ಕಡೆಗಳಲ್ಲಿ ನಡೆದ ಪ್ರದರ್ಶನಗಳನ್ನು ಹೆಸರಿಸಬೇಕು. ಪ್ರದರ್ಶನಕ್ಕೆ ಇಟ್ಟ ಒಂದು ಚಿತ್ರವೂ ತಿರುಗಿ ಕಲಾವಿದರಿಗೆ ಉಳಿದಿಲ್ಲ;—ಎಲ್ಲವನ್ನು ಚಿತ್ರ ರಸಿಕರು ಕೊಂಡು ಸಂಗ್ರಹಿಸಿದ್ದಾರೆ.

ದೇಶವಿದೇಶಗಳ ಅಸಂಖ್ಯಾತ ಪತ್ರಿಕೆಗಳು ಇವರ ಚಿತ್ರಕಲೆಯನ್ನು ಮುಕ್ತಕಂಠದಿಂದ ಹೊಗಳಿವೆ.

"ಶ್ರೀ ಕುಲಕರ್ಣಿಯವರ ಕೃತಿಯೊಂದಿಗೆ ಇಂದಿನ ಭಾರತೀಯ ಚಿತ್ರಕಲೆ ಒಂದು ಹೆಜ್ಜೆಯನ್ನು ಮುಂದಿಟ್ಟಿದೆ. ಜಾಮಿನಿರಾಯ ಮುಂತಾದ ಕಲಾವಿದರ ಅಲಂಕಾರಮಯವಾದ ಎರಡು ಅಳತೆಯುಳ್ಳ (two- dimentional) ಚಿತ್ರಗಳನ್ನು ಬಹಳ ಹಿಂದೆ ಬಿಟ್ಟು ನಿಜವಾದ ರೂಪ ಹಾಗೂ ಅಭಿವ್ಯಕ್ತಿಯನ್ನು ಸಾಧಿಸಲು ಇವರ ಕಲೆ ಮುನ್ನಡೆದಿದೆ" ಎಂದು 'ವಾಶಿಂಗಟನ್ ಪೋಸ್ಟ್' ಪತ್ರಿಕೇ ಬರೆಯಿತು.

ಕಲೆಗಾಗಿಯೇ ಮೀಸಲಾದ ಭಾರತದ ಶ್ರೇಷ್ಠ ತ್ರೈಮಾಸಿಕ 'ಮಾರ್ಗ' ಪತ್ರಿಕೆಯು "ಶ್ರೀ ಕೆ. ಎಸ್. ಕುಲರ್ಣಿಯವರು ಅತ್ಯಂತ ಸೂಕ್ಷ್ಮಗ್ರಾಹಿಯಾದ ಚಿತ್ರಕಲಾವಿದರು . . . . ನವ್ಯ ಕಲೆಯಲ್ಲಿ ಅತ್ಯಂತ ವಿರಲವಾಗಿ ಕಾಣುವ ಗೀತಮಯತೆಯು ಇವರ ಕೃತಿಗಳಲ್ಲಿ ತುಂಬಿದೆ. ಕಾವ್ಯವು ಇವರಿಗೆ ಅತ್ಯಂತ ಸ್ವಾಭಾವಿಕವಾಗಿದ್ದಂತೆ ತೋರುತ್ತದೆ. ಇವರ ಕೃತಿಗಳು ಮನದಿಂದ ಹೊರಟಷ್ಟೇ ಸುಲಭವಾಗಿ ಇವರ ಹೃದಯದಿಂದಲೂ ಹೊರಡಬಲ್ಲವು. ಬಣ್ಣಗಳ ಸೂಕ್ಷ್ಮ ಉಪಯೋಗದಿಂದ ಇವರ ಕಲಾಮಯತೆ ಮೃದುವಾಗಿದೆ. ಆಕೃತಿ ಹಾಗೂ ರೇಖೆಗಳು ಒಟ್ಟಿನಲ್ಲಿಯ ಚಿತ್ರದ ಸಂಗೀತಕ್ಕೆ ತಾವಾಗಿಯೇ ತಾಳಹಾಕುತ್ತವೆ," ಎಂದಿದೆ.

ಶ್ರೀ ಕೃಷ್ಣರಾವ್ ಶ್ಯಾಮರಾವ್ ಕುಲಕರ್ಣಿ

ಯವರು ೭ ಎಪ್ರಿಲ್ ೧೯೧೮ ರಂದು ಬೆಳಗಾವಿಯಲ್ಲಿ ಜನಿಸಿದರು. ಇವರ ತಂದೆ ಸಾಂಗಲಿ ಸಂಸ್ಥಾನದಲ್ಲಿ ಕಾರಕೂನರಾಗಿದ್ದರು. ಇವರು ಪ್ರಾಥಮಿಕ ಶಿಕ್ಷಣ ಮಾತ್ರ ಶಾಲೆಯಲ್ಲಿ ಪಡೆದು ಇಂಗ್ಲೀಷನ್ನು ಖಾಸಗಿಯಾಗಿ ಕಲಿತರು. ತಂದೆಯವರಿಂದ ಕನ್ನಡವನ್ನೂ ತಾಯಿಯವರಿಂದ ಮರಾಠಿ ಭಾಷೆಯನ್ನೂ ಕಲಿತರು. ಹನ್ನೊಂದು ವರ್ಷದ ಬಾಲಕನಾಗಿದ್ದಾಗ ತಂದೆಯನ್ನು ಕಳೆದುಕೊಂಡು ನಿರ್ಗತಿಕನಾಗಿ, ಮುಂದೆ ಉಪಜೀವನಕ್ಕೋಸುಗ ಸೈನ್‌ಬೋರ್ಡ್ ಬರೆಯುವ ವೃತ್ತಿಯನ್ನು ಅನುಸರಿಸಿ ರಾತ್ರಿ ಕೆಲಸ ಮಾಡುತ್ತ ಹಗಲು ಕಲಾಶಾಲೆಯಲ್ಲಿ ವ್ಯಾಸಂಗ ಮಾಡಿದ ದಿನಗಳನ್ನೇ ತನ್ನ ಜೀವನದ ನಾಂದಿಯನ್ನಾಗಿಟ್ಟುಕೊಂಡ ಕಲಾವಿದನು ಇಂದು ಗಳಿಸಿದ ಖ್ಯಾತಿಯನ್ನು ಹಾಗೂ ಮನ್ನಣೆಯನ್ನು ಕಂಡರೆ ಯಾರಿಗಾದರೂ ಅಚ್ಚರಿಯಾಗದೇ ಇರದು. ಕೆಲ ಕಾಲ ಪುಣೆಯಲ್ಲಿದ್ದರು. ಆ ಮೇಲೆ ಮುಂಬೈಯ ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ ಸೇರಿ ಉಚ್ಚ ಶಿಕ್ಷಣ ಪಡೆವಾಗ ಇವರಿಗೆ ಭಿತ್ತಿಚಿತ್ರಣಕ್ಕಾಗಿ ಇದ್ದ ಮುಂಬೈ ಸರಕಾರದ ವಿಶೇಷ ವಿದ್ಯಾರ್ಥಿ ವೇತನ ದೊರೆಯಿತು. ೧೯೪೭ ರಲ್ಲಿ ಲಂಡನ್ನಿನಲ್ಲಿ ನಡೆದ ಅಂತಾರಾಷ್ಟ್ರೀಯ ಚಿತ್ರಕಲಾ ಸ್ಪರ್ಧೆಯಲ್ಲಿ ಇವರಿಗೆ ಕಂಚಿನ ಪದಕವು ದೊರೆಯಿತು. ಭಾರತದಲ್ಲಿ ದೊರೆತ ಅನೇಕ ಪಾರಿತೋಷಕಗಳಲ್ಲಿ ೧೯೫೫ ರಲ್ಲಿ ದೊರೆತ ಲಲಿತಕಲಾ ಅಕಾಡೆಮಿಯ ಪಾರಿತೋಷಕ ಮಹತ್ವದ್ದು. ೧೯೫೦-೫೧ ರಲ್ಲಿ ಅಮೇರಿಕೆಯಲ್ಲಿ ನಡೆದ ಅಂತಾರಾಷ್ಟ್ರೀಯ ಕಲಾಸಮ್ಮೇಲನದಲ್ಲಿ ಇವರು ಭಾರತವನ್ನು ಪ್ರತಿನಿಧಿಸಿದ್ದರು. ಪಾರ್ಲಿಮೆಂಟ್ ಭವನದ ಮೇಲಿನ ಅಶೋಕಚಕ್ರ ಹಾಗೂ ಮೂರು ಸಿಂಹದ ಮಾಡೆಲ್ಲನ್ನು ಇಬ್ಬರು ಕಲಾವಿದರ ಸಹಾಯದಿಂದ ಶ್ರೀ ಕುಲಕರ್ಣಿಯವರೇ ನಿರ್ಮಿಸಿದರು. ಮಹಾತ್ಮಾ ಗಾಂಧಿಯವರ ಬೃಹತ್ ವರ್ಣಚಿತ್ರವನ್ನು ಪಂಜಾಬ ಸರಕಾರಕ್ಕಾಗಿ, ಹಾಗೂ ಪಾರ್ಲಿಮೆಂಟ್ ಭವನಕ್ಕಾಗಿ ಮೋತೀಲಾಲ ನೆಹರೂ ಅವರ ವರ್ಣಚಿತ್ರ, ಬಿಡಿಸಿದ್ದಾರೆ. ೧೯೫೦ ರಲ್ಲಿ ಅಂತಾರಾಷ್ಟ್ರೀಯ ಮಕ್ಕಳ ಕಲಾಸ್ಪರ್ಧೆಯಲ್ಲಿ ಇವರು ನ್ಯಾಯಾಧೀಶರಲ್ಲಿ ಒಬ್ಬರಾಗಿದ್ದರು.

ಕೆ. ಎಸ್. ಕುಲಕರ್ಣಿಯವರಿಗೆ ಯಶಸ್ಸು "ತಲೆಗೇರಿಲ್ಲ." ಮಿತ್ರತ್ವ ಅವರಿಗೆ ಬಲು ಸುಲಭ. ನನಗೂ ಅವರಿಗೂ ಪರಿಚಯವಾದ ಕೆಲ ನಿಮಿಷಗಳಲ್ಲಿ ಅವರ ತೋಳು ನನ್ನ ಹೆಗಲ ಮೇಲಿತ್ತು. ಮರಾಠಿಯ ನಡುವೆ ಇದ್ದರೂ ನಿರಾತಂಕವಾಗಿ ಕನ್ನಡವನ್ನೇ ಮಾತಾಡಿದರು. ನನ್ನನ್ನು ಕೂಡಿಸಿಕೊಂಡು ತಮ್ಮ ಕಾರಿನಲ್ಲಿ ಎಲ್ಲೆಲ್ಲೋ ಕರೆದೊಯ್ದರು ಕೂಡ.

ಕೈರೋ



ಪಾಶ್ಚಾತ್ಯ ಕಲೆಯ ಹಾಗೂ ಜೀವನದ ರೀತಿಯ ಪರಿಣಾಮ ಇವರ ಮೇಲೆ ಆಗದೆ ಬಿಡಲಿಲ್ಲ. ಪಿಕಾಸೋನ ಪ್ರಭಾವ ಇವರ ಮೇಲಾಯಿತು. ಇವರ ಎಷ್ಟೋ ಚಿತ್ರಗಳಲ್ಲಿ ಇಂದಿಗೂ ಕ್ಯೂಬಿಸ್ಟ್ ಸಂಪ್ರದಾಯದ ಛಾಯೆಯನ್ನು ಕಾಣುತ್ತೇವೆ. ಪಾಶ್ಚಾತ್ಯ ಆಹ್ವಾನವನ್ನು ಎದುರಿಸಿಯೂ ಕೂಡ ಇವರಲ್ಲಿದ್ದ ಆಧ್ಯಾತ್ಮಿಕ ಪ್ರಶಾಂತತೆ ಕದಡಲಿಲ್ಲ. ಇವರ ಪ್ರತಿಯೊಂದು ಚಿತ್ರದಲ್ಲಿಯೂ ಭಾರತೀಯತೆಯು ಎದ್ದು ಕಾಣುತ್ತದೆ. ಭಾರತದ ಪುರಾತನ ಶಿಲ್ಪದ ಬೆಡಗನ್ನು, ಜಾನಪದ ಕಲೆಯ ಜೀವಂತತೆಯನ್ನು ತಮ್ಮ ರೇಖೆಗಳಲ್ಲಿ ಪಡೆದಿದ್ದಾರೆ. ಬಾಲ್ಯದಲ್ಲಿ ಹಳ್ಳಿಯಲ್ಲಿ ಕಳೆದ ದಿನಗಳ ಸ್ಮೃತಿಗಳಿಂದಲೂ ಕುಲಕರ್ಣಿ ಮನೆತನದಲ್ಲಿ ಬೆಳೆದದ್ದರಿಂದ ರಕ್ತಗತವಾಗಿ ಬಂದ ಹಳ್ಳಿಯ ಗಡಸುತನದ ಪ್ರಭಾವದಿಂದಲೂ ಒಕ್ಕಲಿಗ ಇವರ ಚಿತ್ರಗಳಲ್ಲಿ ಪ್ರಮುಖ ಪಾತ್ರ ಪಡೆಯುತ್ತಾನೆ. ಅವನ ವಾದ್ಯಮೇಳ, ಸುಗ್ಗಿಯ ಕುಣಿತ, ಗೊಲ್ಲನ ಕೊಳಲಿಗೆ ಕಿವಿಗೊಟ್ಟು ಅದರ ಮಂತ್ರಮುಗ್ಧ ಸ್ವರಕ್ಕೆ ಮರುಳಾಗಿ ಆನಂದಪರವಶವಾಗುವ ರೀತಿ, ಎತ್ತಿನ ಬಂಡಿಯ ಸವಾರಿ, ಮುಂತಾದ ಚಿತ್ರಗಳು ಬಹಳ ಆಕರ್ಷಕವಾಗಿವೆ.

ಪ್ರಮುಖ ನವ್ಯ ಚಿತ್ರ ಕಲಾವಿದರಾದ ಶ್ರೀ ಕೃಷ್ಣ ಹೆಬ್ಬಾರ ಹಾಗೂ ಶ್ರೀ ಹುಸೇನ ಇವರಿಗಿಂತ ಶ್ರೀ ಕುಲಕರ್ಣಿಯವರ ಚಿತ್ರಗಳಲ್ಲಿ ವಿಡಂಬನೆಯು ಹೆಚ್ಚಿನ ಪಾತ್ರ ಪಡೆಯುತ್ತದೆ. ಯಂತ್ರಯುಗದಲ್ಲಿ ಹೊಡೆತ ತಿಂದ ಎತ್ತು ಹಾಗೂ ಭಾರತದ ಒಕ್ಕಲಿಗನ ಸ್ಥಿತಿಯನ್ನು ಇವರು ವಿಡಂಬನೆಯ ಮೂಲಕ ತೋರಿಸಿದ್ದಾರೆ. ಪಾಶ್ಚಾತ್ಯ ಪ್ರಭಾವವಿದ್ದರೂ ಭಾರತೀಯತೆಯ ಪ್ರಜ್ಞೆ ಇವರ ಜೀವನದಲ್ಲಿ ಬೆರೆತಿರುವುದರಿಂದ, ತಾನೊಬ್ಬ ಭಾರತೀಯ ಕಲಾವಿದನೆಂದು ತೋರಿಸಲು ಇವರು ಪ್ರಯತ್ನಪಡಬೇಕಾಗಿಲ್ಲ.

ಶ್ರೀ ಕುಲಕರ್ಣಿಯವರು ದಿಲ್ಲಿಯಲ್ಲಿಯ ತ್ರಿವೇಣಿ ಕಲಾಮಂದಿರದ ಡೈರೆಕ್ಟರರಾಗಿ ಕೆಲಸ ಮಾಡುತ್ತಿದ್ದಾರೆ. ದೇವೀ ಪ್ರಸಾದ ರಾಯ ಚೌಧುರಿಯವರಂತೆ ಇವರೂ ಚಿತ್ರ ಕಲೆಯೊಡನೆ ಮೂರ್ತಿ ಶಿಲ್ಪದ ಮೇಲೂ ಪ್ರಭುತ್ವ ಪಡೆದ ಕೆಲವೇ ಕಲಾವಿದರಲ್ಲಿ ಸೇರಿದ್ದಾರೆ. ೧೯೫೫ ರಲ್ಲಿ ಭಾರತೀಯ ಔದ್ಯೋಗಿಕ ಪ್ರದರ್ಶನದ ಮಹಾದ್ವಾರದಲ್ಲಿ ನಿಲ್ಲಿಸಿದ ಪ್ರಚಂಡ ಮೂರ್ತಿ ಇವರದೇ ಕೃತಿ. ಅವರಿಗೆ ಸಕಲ ಕಲೆಗಳಲ್ಲೂ ಅಪರಿಮಿತ ಅಭಿರುಚಿ ಇದೆ. ಅವರ ತ್ರಿವೇಣಿ, ಕಲಾಮಂದಿರ ಚಿತ್ರಕಲೆಯನ್ನಲ್ಲದೆ ನಾಟ್ಯ ಸಂಗೀತಗಳನ್ನೂ ಪ್ರಚಾರಗೊಳಿಸುವ ಧ್ಯೇಯವನ್ನಿಟ್ಟುಕೊಂಡಿದೆ. ಇನ್ನೂ ೪೫ ರೊಳಗಿರುವ ಅವರ ಕಲಾಭ್ಯುದಯಕ್ಕೆ ಅರ್ಧ ಜೀವಮಾನವೇ ಎದುರಿಗಿದೆ. *



ಬಟ್ಟೆ ಹೊಲಿಸಲು ಬಂದವನು ಹೇಳುತ್ತಿದ್ದನು: "ಅಲ್ಲಯ್ಯಾ, ಪಕ್ಕದ ಅಂಗಡಿಯವನು ಒಂದು ಸೂಟಿಗೆ ಆರು ಗಜ ಎಂದು ಹೇಳಿದ. ನೀನು ಏಳು ಗಜ ಬೇಕು ಎನ್ನುತ್ತಿದ್ದಿಯಲ್ಲಯ್ಯಾ?"

"ಇರಬಹುದು ಸ್ವಾಮಿ, ಆದರೆ.." "ಪಕ್ಕದಅಂಗಡಿ ಯವನ ಮಗನಿಗೆ ಇನ್ನೂ ಮೂರೇ ವರ್ಷವಲ್ಲಾ...?"

ಗಂಡ: "ನಮ್ಮ ಮಗನಿಗೆ ನೋಡಿರುವ ಹೆಣ್ಣು ಎಲ್ಲ ರೀತಿಯಲ್ಲಿಯೂ ಸರಿಯಾಗಿದೆ. ಆದರೆ, ಗಂಡಿಗಿಂತಲೂ ಹೆಣ್ಣೇ ಒಂದು ವರ್ಷ ದೊಡ್ಡವಳು!"

"ಹಾಗಾದರೆ ಅಷ್ಟು ಅವಸರವೇಕೆ?" ಹೆಂಡತಿ ಉತ್ತರ ಕೊಟ್ಟಳು "ಗಂಡಿಗೆ ಇನ್ನೊಂದು ವರ್ಷವಾದ ಮೇಲೆ ಮಾಡಿದರೆ ಆಗುವುದಿಲ್ಲವೆ?"

—ಎಂ. ಎಸ್. ಶ್ರೀಧರ ಮೂರ್ತಿ

ಮನಾಲಿಯಲ್ಲಿ ಜರುಗಿದ ಭೇಟ್ಟಿಯ ಕಥೆ

# ಜವಾಹರಲಾಲರು ಮತ್ತು ಉಪ್ಪು



ಪಂ. ರಾಮನಾಥ ಕಾಲಿಯಾ

ಏಪ್ರಿಲ, ಜೂನ್ ತಿಂಗಳಲ್ಲಿ ನಡೆದ ಸಂಗತಿ ಇದು. ಪ್ರಧಾನ ಮಂತ್ರಿ ಶ್ರೀ ನೆಹರೂರವರು ವಿಶ್ರಾಂತಿಗಾಗಿ ಮನಾಲಿಗೆ ತೆರಳಿದ್ದರು. ಜವಾಹರಲಾಲರೂ ವಿಶ್ರಾಂತಿ ತೆಗೆದುಕೊಳ್ಳುತ್ತಾರೆ ಎಂಬ ಸಮಾಚಾರ ಬಹಳಷ್ಟು ಜನರಿಗೆ ಆಶ್ಚರ್ಯದ ಮಾತು ಮಾತ್ರವಲ್ಲ, ರಹಸ್ಯಮಯವಾದದ್ದೂ ಆಗಿತ್ತು.

ನಾನು ಮನಾಲಿಯ ಫಾರೆಸ್ಟ್ ರೆಸ್ಟ್ ಹೌಸ್‌ನ ಜಗಲಿಯ ಮೇಲೆ ಬೆತ್ತದ ಖುರ್ಚಿಯಲ್ಲಿ ಕುಳಿತು ನೆಹರೂಜಿಯವರ ಹಾದಿ ಕಾಯುತ್ತಿದ್ದೆ. ಅಷ್ಟರಲ್ಲಿ ಅವರು ಬಂದು "ಹೇಳಿ, ಏನು ದಯಮಾಡಿಸಿದಿರಿ?" ಎಂದು ಕೇಳಿದರು.

"ನಿಮ್ಮೊಂದಿಗೆ ಒಂದಿಷ್ಟು ಅಗತ್ಯದ ಮಾತಾಡಬೇಕಿತ್ತು. ಅದಕ್ಕಾಗಿಯೆ ಬಂದೆ"

ಆ ಮೇಲೆ ಬಹಳ ಹೊತ್ತಿನ ವರೆಗೆ ಮಾತುಕತೆ ನಡೆದವು. ನಡುವೆಯೆ ಪ್ರಧಾನಮಂತ್ರಿಗಳೆದ್ದು ತಮ್ಮ ಕೋಣೆಗೆ ಹೋಗಿ ಪೆನ್ ಮತ್ತು ರ್‍ಯಾಟಿಂಗ್ ಪ್ಯಾಡ್ ತಂದುಕೊಂಡು ಕೆಲವು ಮಾತುಗಳನ್ನು ಬರೆದುಕೊಳ್ಳತೊಡಗಿದರು.

"ಹೌದು. ಉಪ್ಪಿನ ವಿಚಾರದಲ್ಲಿ ಏನೋ ಹೇಳುತ್ತಿದ್ದಿರಲ್ಲ?" ನೆಹರೂ ಕೇಳಿದರು.

ನಾನು ನಮ್ರತೆಯಿಂದಲೇ ಹೇಳಿದೆ. "ಪಂಡಿತಜಿ, ಈ ದೇವಭೂಮಿ ದೇವತೆಗಳ ನಾಡಾಗಿದೆ. ಇಲ್ಲಿಯ ಸಾದಾ ಸರಳ ನಿವಾಸಿಗಳು, ಅವರ ಮುಗುಳ್ನಗು ಸೂಸುವ ಮುಖಗಳು, ಆರಕ್ತ ಗಲ್ಲ, ಶಾಂತ ಸ್ವಭಾವ— ಈ ಜನರೇ ನಮಗೆಲ್ಲ ಸ್ವಾದಿಷ್ಟ ಚೆರಿ ಹಣ್ಣುಗಳು, ಸೇಬು ಮುಂತಾದವುಗಳನ್ನು ಕಳಿಸುತ್ತಾರೆ. ಆದರೆ ನಿಸರ್ಗದ ವಿಚಿತ್ರ ಆಟವನ್ನು ನೋಡಿ. ಇಲ್ಲಿ ಎರಡೂ ಹೊತ್ತು ಹೊಟ್ಟೆತುಂಬ ಅನ್ನ ಕಾಣುವ ಒಂದು ಮನೆಯೂ ಇರಲಿಕ್ಕಿಲ್ಲ. ಪಂಡಿತಜೀ, ನನ್ನ ಮಾತಿನಲ್ಲಿ ವಿಶ್ವಾಸವಿಡಿ. ಈ ಜನರಿಗೆ ರೊಟ್ಟಿ ಮತ್ತು ಉಪ್ಪು ಕೂಡ ಸಿಗುತ್ತಿಲ್ಲ. ಕಳೆದ ವರ್ಷ ಇದೇ ಜೂನ್ ತಿಂಗಳಲ್ಲಿ ಪಾರ್ಲಿಮೆಂಟಿನ ಚುನಾವಣೆಯ ಸಂಬಂಧದಲ್ಲಿ ನಾನು ಹಿಂದುಸ್ತಾನ-ತಿಬೇಟ್ ರಸ್ತೆಯಲ್ಲಿರುವ ಸರಾಹನ ಎಂಬ ಊರಿನಲ್ಲಿದ್ದೆ. ದೇಶದಲ್ಲೆಲ್ಲ ಚುನಾವಣೆಗಳು ಮಾರ್ಚ್-ಎಪ್ರಿಲ್ ತಿಂಗಳಲ್ಲಿ ಮುಗಿದುಹೋಗಿದ್ದವು. ಆದರೆ ಈ ಎದುರಿನ ಪರ್ವತಗಳ ಮೇಲೆ ಬರ್ಫ ಬಿದ್ದಿದ್ದ ಕಾರಣದಿಂದ ಜೂನ್ ಜುಲೈ ವರೆಗೆ ಇಲ್ಲಿ ಮತದಾನ ನಡೆಯುತ್ತಲೇ ಇತ್ತು. ಆ ಸಮಯದಲ್ಲಿ ಒಬ್ಬಾಕೆ

ಹಿಂದೀ 'ನವನೀತ' ದಿಂದ

ತನ್ನ ಹಳ್ಳಿಯ ಭಾಷೆಯಲ್ಲಿ ತುಂಬ ಕಾತರ ಸ್ವರದಿಂದ ನನಗೆ ಹೇಳಿದಳು : "ನನ್ನ ಪರಿವಾರ ದಲ್ಲಿ ಹತ್ತು ಜನರಿದ್ದಾರೆ. ಎತ್ತು-ಆಕಳು ಇತ್ಯಾದಿ ೧೫ ಪಶುಗಳಿವೆ. ಇವರೆಲ್ಲರಿಗೆ ಕೂಡಿ ಮೂರು ತಿಂಗಳಿಗೆ ಕೇವಲ ಐದು ಸೇರು ಉಪ್ಪು ದೊರೆಯುತ್ತದೆ. ಅಷ್ಟನ್ನು ಕೂಡ ಡಿಪೋದಿಂದ ತರಲು ಮೂರು ದಿನ ಹಿಡಿಯುತ್ತದೆ. ಹೋಗಲು ಒಂದಿಷ್ಟು ತಡವಾದರೆ ಮೂರು ತಿಂಗಳ ವರೆಗೂ ಉಪ್ಪಿಲ್ಲದೆಯೆ ಕಳೆಯಬೇಕಾಗುವುದು."

"ಏನನ್ನುತ್ತಿದ್ದೀರಿ ನೀವು ?" ಪ್ರಧಾನ ಮಂತ್ರಿಗಳು ಆವೇಶದಿಂದ ಕೇಳಿದರು.

"ನಿಜವನ್ನೆ ಹೇಳುತ್ತಿದ್ದೇನೆ ಪಂಡಿತಜಿ." ನಾನು ನಿಧಾನವಾಗಿ ನನ್ನ ಮಾತುಗಳನ್ನು ಮುಂದುವರಿಸಿದೆ.

ಈಗ ಭಾವುಕ ಜವಾಹರರ ಕಣ್ಣುಗಳು ಹನಿಗೂಡತೊಡಗಿದವು. "ಆದರೆ ನೀವು ಈ ಮಾತನ್ನು ಈ ಮೊದಲೇ ದಿಲ್ಲಿಯಲ್ಲೇಕೆ ಹೇಳ ಲಿಲ್ಲ? ನೀವು ನನ್ನ ಬಳಿ ಬರಬಹುದಿತ್ತಲ್ಲ. ನಿಮ್ಮ ನ್ನಾರು ತಡೆಯುವವರು ?" ಎಂದರವರು.

"ನಾನು ದಿಲ್ಲಿಯಲ್ಲಿ ನಿಮ್ಮ ಮನೆಗೆ ಬರಬಹು ದಿತ್ತು. ಆದರೆ ಈ ಮಾತುಗಳನ್ನು ಇಲ್ಲಿಯೇ ಹೇಳಬೇಕಿತ್ತು. ಈಗ ನೀವು ನಿಮ್ಮ ಕಣ್ಣುಗ ಳಿಂದ ಸತ್ಯಸ್ಥಿತಿಯನ್ನು ನೋಡಬಹುದು, ಕಿವಿ ಗಳಿಂದ ಕೇಳಬಹುದು. ನಮ್ಮ ರಾಷ್ಟ್ರದ ಈ ನಾಗರಿಕರಿಗೆ ಸ್ವರಾಜ್ಯದಲ್ಲೆಷ್ಟು ಪಾಲು ಸಿಕ್ಕಿದೆ? ಇವರಾರು? ಪಂಡಿತಜಿ, ಕಾಲ ಬದಲಾಗಲು ವೇಳೆ ಹಿಡಿಯುವುದಿಲ್ಲ. ಅಂತಾರಾಷ್ಟ್ರೀಯ ಜಗ ತ್ತಿನ ರಾಜನೀತಿಯಲ್ಲಿ ಒಂದಿನಿತು ಬದಲಾವಣೆ ಯಾದರೂ ಸಾಕು, ಬಂಧುಗಳು ದ್ರೋಹಿಗಳಾಗು ತ್ತಾರೆ, ಮಿತ್ರರು ಶತ್ರುಗಳಾಗುತ್ತಾರೆ. ಕೇವಲ ನಾಲ್ಕೇ ದಿನಗಳ ರಸ್ತೆ. ನಮ್ಮ ಸೈನ್ಯಗಳೇನಾ ದರೂ ಚೀನದಲ್ಲಿ ಪ್ರವೇಶ ಮಾಡಬಯಸಿದರೆ.."

ನಾನು ಒಂದಿಷ್ಟು ತಡೆದು ಅವರ ಅಂತರಂಗದ ಅಂದಾಜು ಮಾಡಿಕೊಳ್ಳುತ್ತ ಹೇಳಿದೆ: "ಆದರೆ ಪಂಡಿತಜಿ, ನಮ್ಮ ಸೈನ್ಯಗಳು ಇಲ್ಲಿಗೆ ಬರುವ ದಂತೂ ಆಯಿತು. ಆದರೆ ನನ್ನಂತರಂಗದಲ್ಲಿ ಯಾವುದೊ ಧ್ವನಿ ಹೇಳುತ್ತಿದೆ, ಈ ಬರ್ಫಾಚ್ಛಾ ದಿತ ಪರ್ವತಗಳಾಚೆ ಇರುವ ನಮ್ಮ ಪಂಚಶೀಲ ಮಿತ್ರರು ತಮ್ಮ ಪ್ರಯೋಗ ಶಾಲೆಗಳಲ್ಲಿ ಈ ಶ್ವೇತವರ್ಣ ರಕ್ತವರ್ಣವಾಗುವಂತೆ ಮಾಡುವ ಉಪಾಯಗಳನ್ನು ಯೋಜಿಸುತ್ತಿದ್ದಾರೆ ಎಂದು. ಪರಮಾತ್ಮ ಇಂಥ ದಿನವನ್ನು ತರದಿರಲಿ"

ಪ್ರಧಾನ ಮಂತ್ರಿಗಳು ತುಂಬ ಗಂಭೀರರಾಗಿ ಕೇಳಿದರು. "ಈ ಅನಿಷ್ಟ ಪರಿಸ್ಥಿತಿಗೆ ಯಾರು ಹೊಣೆ? ಇದರಲ್ಲಿ ನಮ್ಮ ದೋಷವೇನು ? ಈ ಚಿತ್ರದಲ್ಲಿ ನಾವೆಂತು ಸಮಾವೇಶವಾಗುತ್ತೇವೆ?"

ಸ್ವರಾಜ್ಯ ಪ್ರಾಪ್ತಿಯ ಮೊದಲು ಗೋಮಾ ಎಂಬ ಹೆಸರಿನ ಉಪ್ಪಿನ ಗಣಿ ಆಗಿನ ಮಂಡಿ ರಾಜನ ಆಸ್ತಿಯಾಗಿತ್ತು. ೧೯೪೮ರ ನಂತರ ಸಂಸ್ಥಾನಗಳ ವಿಲಿನೀಕರಣವಾಗಲು ಮಂಡಿ ಸಂಸ್ಥಾನ ಹಿಮಾಚಲ ಪ್ರದೇಶದಲ್ಲಿ ಸೇರಿತು. ಕೆಲ ಕಾಲ ಹಿಮಾಚಲ ಪ್ರದೇಶದಲ್ಲಿ ಅಲ್ಲಿಯ ಮಂತ್ರಿಮಂಡಳವಿತ್ತು. ಆ ಮೇಲೆ ಈ ಸಮಸ್ತ ಪ್ರದೇಶ ಕೇಂದ್ರದಾಧೀನವಾಯಿತು. ಈಗ ಈ ಉಪ್ಪಿನ ಗಣಿ ನಿಮ್ಮ ಕೇಂದ್ರ ಸರಕಾರದ ಆಧೀನದಲ್ಲಿದೆ ಪಂಡಿತಜಿ. ರಾಜನ ಶಾಸನ ಕಾಲದಲ್ಲಿ ಉಪ್ಪಿನ ಅಗತ್ಯವಿರುವವರು ೪೦-೫೦ ಹರದಾರಿ ದೂರದಿಂದಲೂ ಇಲ್ಲಿಗೆ ಬರುತ್ತಿದ್ದರು. ರಾಜಾಜ್ಞೆಯಂತೆ ಅವರು ದಿನವಿಡೀ ಗಣಿಯಿಂದ ಉಪ್ಪು ತೆಗೆಯುತ್ತಿದ್ದರು. ಆ ಉಪ್ಪೆಲ್ಲ ಸರಕಾರ ದ್ದಾಗುತ್ತಿತ್ತು. ಆದರೆ ಹೋಗುವಾಗ ಅವ ರಿಗೆ ಕೂಲಿಯ ರೂಪದಲ್ಲಿ ಅವರು ಹೊತ್ತು ಕೊಂಡು ಹೋಗುವಷ್ಟು ಉಪ್ಪು ಸಿಗು ತ್ತಿತ್ತು. ಅದಕ್ಕಾಗಿ ಅವರೇನೂ ಕೊಡ ಬೇಕಾಗುತ್ತಿರಲಿಲ್ಲ. ಗುಡ್ಡಗಾಡಿನ ಜನ ಧರ್ಮ ಪರಾಯಣರಾಗಿರುವುದರಿಂದ ಅವರು ಕಪಟ-ಮೋಸಗಳನ್ನು ಮಾಡುತ್ತಿರಲಿಲ್ಲ. ಹೀಗೆ ಮನುಷ್ಯರಿಗಷ್ಟೆ ಅಲ್ಲ, ಪಶುಗಳಿಗೂ ಸಾಕಷ್ಟು ಉಪ್ಪು ದೊರೆಯುತ್ತಿತ್ತು. ಪಾಕಿಸ್ತಾನವಾದ ನಂತರ ಪಂಜಾಬ ಮತ್ತು ದೇಶದ ಇತರ ಪ್ರದೇಶಗಳಿಗೆ ರಿಪ್ಯಾಡಾ ಗಣಿಯಿಂದ ಉಪ್ಪು ಬರುವುದು ನಿಂತಿತು. ಕಾಶ್ಮೀರದಿಂದಲೂ ಗೋಮಾ ಉಪ್ಪಿಗೆ ಬೇಡಿಕೆ ಬಂತು. ಹಿಮಾಚಲ ಪ್ರದೇಶದ ಮಂತ್ರಿಮಂಡಳ ಮಾಡಿದ ವ್ಯವ ಸ್ಥೆಯ ಮಾತನ್ನು ಬಿಡಿ. ಕೇಂದ್ರದ ಶಾಸನ ಬಂದ ಬಳಿಕ ಆದ ಉಪ್ಪಿನ ವಿತರಣಾ ವ್ಯವಸ್ಥೆ

ಯಿಂದ ಬಡಬಗ್ಗರು ಗೋಳಿಡುವಂತಾಗಿದೆ"

"ಏನೆಂದಿರಿ? ಕೇಂದ್ರದ ಶಾಸನದಿಂದ ಪರಿಸ್ಥಿತಿಸುಧಾರಿಸಬೇಕಿತ್ತು. ಅದು ಹೇಗೆ ಕೆಟ್ಟಿತು?"

"ಕೇಂದ್ರವು ಇಡೀ ದೇಶದ ವ್ಯವಸ್ಥೆಯನ್ನು ಮಾಡಬೇಕಾಗಿದೆ. ಗೋಮಾ ಮತ್ತು ದುರಂಗ ಮುಂತಾದೆಡೆಗಳಲ್ಲಿ ಉತ್ಪಾದನೆಯಾಗುವ ಉಪ್ಪಿನ ವಿತರಣೆಯ ಕಾಲಕ್ಕೆ ಹಿಮಾಚಲ ಪ್ರದೇಶಕ್ಕೆ ಪ್ರಥಮ ಪ್ರಾಶಸ್ತ್ಯವಿದೆ. ಹಾಗೆ ಇರಬೇಕಾದ್ದು ನ್ಯಾಯ. ಆ ಮೇಲೆ ಪಂಜಾಬ, ಕಾಶ್ಮೀರಕ್ಕೆ ಪಾಲು ಸಿಗುತ್ತದೆ. ಕಾಶ್ಮೀರದ ಹೆಸರಿನಲ್ಲಿ ಪೇಟೆಯಲ್ಲಿ ಉಪ್ಪು ತುಂಬಿದ ಟ್ರಕ್ಕುಗಳು ಪಠಾಣಕೋಟೆಗೆ ಹೋಗುತ್ತವೆ."

"ನೀವೇನನ್ನುತ್ತಿದ್ದೀರಿ ಇದನ್ನು? ಸ್ಪಷ್ಟ ಹೇಳಿರಿ ನೋಡೋಣ. ಮತ್ತೇನಾಗುವುದು?"

"ನಿಮಗೆ ಬ್ಲಾಕ್ ಮಾರ್ಕೆಟ್ಟಿನವರ ನೇರ ಸಂಪರ್ಕ ಬಂದಿಲ್ಲ. ಅವರು ಬಲು ಚತುರರಿದ್ದಾರೆ. ದೇಶಕ್ಕಾಗಿ ಇವರು ತ್ಯಾಗ ಮಾಡಿದವರೆಂದು ಇವರಿಗೇ ಪರ್ಮಿಟ್ಟು ಸಿಗುತ್ತದೆ. ಕಪ್ಪು ಉಪ್ಪಿನ ಟ್ರಕ್ಕುಗಳಿಗೆ ಟ್ರಕ್ಕುಗಳೇ ಪಠಾಣಕೋಟೆಯ ಪೇಟೆಯಲ್ಲಿ ಮಾರಾಟವಾಗಿ ಆ ಮೇಲೆ ಗೋಮಾದ ಸಮೀಪವಿರುವ ಪಂಜಾಬಿನ ಊರುಗಳಲ್ಲಿ ಕಂಟ್ರೋಲ್ ರೇಟಿನ ಇಮ್ಮಡಿ ಮುಮ್ಮಡಿ ದರದಲ್ಲಿ ಮಾರಲ್ಪಡುತ್ತದೆ. ಮೊದಲು ಪಂಜಾಬ, ಆ ಮೇಲೆ ಅದರ ಜಿಲ್ಲೆಗಳು ಅಲ್ಲಿಂದ ತಹಸೀಲುಗಳು, ತಹಸೀಲುಗಳಿಂದ ಹಳ್ಳಿಗಳಿಗೆ ಆಮೇಲೆ ರಸ್ತೆಗಳಿಲ್ಲದ ಈ ಗುಡ್ಡಗಾಡು ಪ್ರದೇಶಕ್ಕೆ ಉಪ್ಪುಬಂದಾಗ ನಾನು ಮೊದಲು ಹೇಳಿದ ಸ್ಥಿತಿಯಾಗಿರುತ್ತದೆ."

"ನೀವು ಈ ವಿಚಾರವಾಗಿ ಪಂಜಾಬಿನ ಮುಖ್ಯಮಂತ್ರಿಗಳೊಂದಿಗೆ ಮಾತಾಡಿರುವಿರಾ?"

"ಇಲ್ಲ."

"ಯಾಕೆ?"

"ಅಗತ್ಯವೆನಿಸಲಿಲ್ಲ."

"ನೀವು ನನಗೆ ಬರೆಯಬೇಕಿತ್ತು."

"ನಾನು ಪತ್ರ ಬರೆಯುತ್ತಿದ್ದೆ. ಆದರೆ ಅದನ್ನು ನಿಮ್ಮ ಕಾರ್ಯದರ್ಶಿ ಸಂಬಂಧಪಟ್ಟವರಿಗೆ ಕಳಿಸುತ್ತಿದ್ದ. ಅವರು ನನಗೆ ನಿಮ್ಮ ಪತ್ರವನ್ನು ಇಂಥ ಅಧಿಕಾರಿಗೆ ಕಳಿಸಿದೆ, ಅವರಲ್ಲಿ ಚೌಕಶಿ ಮಾಡಿರಿ ಎಂದು ತಿಳಿಸುತ್ತಿದ್ದರು. ನನ್ನ ಪತ್ರದ ವಿಚಾರ ನಿಮಗೆ ಹೇಗೆ ಗೊತ್ತಾಗುತ್ತಿತ್ತು ಹೇಳಿ."

"ಸರಿ. ಇಲ್ಲಿ ನನ್ನ ಭೆಟ್ಟಿಗೆ ನೀವು ಬಂದಿದ್ದು ಒಳಿತಾಯಿತು. ನಾನು ನಾಳೆಯೆ ದಿಲ್ಲಿಗೆ ಮರಳಲಿದ್ದೇನೆ" ನೆಹರೂ ಮೆಲ್ಲನೆ ಕೆಮ್ಮುತ್ತ ಹೇಳಿದರು.

"ಪಂಡಿತಜಿ, ನೆಗಡಿ ಆಗಿದೆಯೆ?"

"ಇಲ್ಲ, ಗಂಟಲು ಒಂದಿಷ್ಟು ತುರಿಸುತ್ತಿದೆ."

"ಇಲ್ಲಿ ಮಳೆಯಾಗಿಲ್ಲವೆ?"

"ಆಗದಿದ್ದರೇನಾಯಿತು?"

"ಮತ್ತೇನಿಲ್ಲ. ಹೊಲಗಳು ಒಣಗಿ ಹೋಗಿವೆ ಅಷ್ಟೆ. ಎಷ್ಟೋ ಹಳ್ಳಿಗಳಲ್ಲಿ ಪಶುಗಳಿಗೆ ಕುಡಿಯಲು ಕೂಡ ಸಾಕಷ್ಟು ನೀರಿಲ್ಲ.

"ಮಳೆ ಯಾಕಾಗಿಲ್ಲ?"

"ಇದು ದೇವತೆಗಳ ಭೂಮಿ. ರಾಜಯಜ್ಞವನ್ನು ಮಾಡಿದರೆ ಮಳೆಯಾಗುತ್ತದೆ ಎಂದು ಜನರ ನಂಬಿಕೆಯಿದೆ."

"ಈಗ ರಾಜರೆಲ್ಲಿ? ಅವರೆಲ್ಲ ಅಳಿದು ಹೋಗಿದ್ದಾರೆ."

"ಪಂಡಿತಜಿ, ನನ್ನ ಉದ್ಗಾರ ರಾಜತತ್ವಕ್ಕೆ ಸಂಬಂಧಿಸಿದೆ. ಈ ಭೂಮಿಯಲ್ಲಿ ಯಾವುದೋ ಒಂದು ವಿಲಕ್ಷಣ ಪ್ರಾಣಿ ಪದಾರ್ಪಣ ಮಾಡಿದೆ; ಅದರಿಂದ ದೇವತೆಗಳು ಅಸಂತುಷ್ಟರಾಗಿ ಉನ್ನತ ಪರ್ವತ ಶಿಖರಗಳಿಗೆ ಹೋಗಿಬಿಟ್ಟಿದ್ದಾರೆ. ದೇವತೆಗಳು ಕೋಪಗೊಂಡಿರುವುದರಿಂದಲೇ ಮಳೆಯಾಗಿಲ್ಲ ಎಂದು ಇಲ್ಲಿಯ ಜನರ ಭಾವನೆ ಇದೆ."

ಜವಾಹರಲಾಲರಿಗೆ ನಗು ತಡೆಯಲಿಲ್ಲ. ಅವರು ಗಹಗಹಿಸಿ ನಕ್ಕು ಕೇಳಿದರು, "ಯಾರದು ದೇವತೆಗಳನ್ನು ಓಡಿಸಿದವರು?"

"ನಾನೇ ಅದನ್ನು ಹೇಳಬೇಕೆ?" ನಾವಿಬ್ಬರೂ ಗಹಗಹಿಸಿ ನಕ್ಕೆವು. ಒಬ್ಬರೊಬ್ಬರ ಚೇಷ್ಟೆಗೈಯುತ್ತ ಮನಸೋಕ್ತ ನಕ್ಕೆವು.

ಇಂದಿರಾದೇವಿ ಪಡದೆಯ ಹೊರಗೆ ಇಣಿಕಿ ಹಾಕಿ: "ಇಂದು ಅಪ್ಪನಿಗೆ ಏನಾಗಿದೆ? ಇಷ್ಟು ಸ್ವಚ್ಛಂದವಾಗಿ ನಗುತ್ತಿದ್ದಾರೆ?" ಎಂದು ಕೇಳಿದಳು. ಆದರೆ ಪರಿಚಿತ ವ್ಯಕ್ತಿಯೊಂದು ಅವರ ಬಳಿ ಕುಳಿತದ್ದನ್ನು ಕಂಡಾಗ ಅವಳಿಗೂ ನಗುವಿನ ಮರ್ಮವನ್ನು ತಿಳಿಯಲು ತಡವಾಗಲಿಲ್ಲ.

*

**ಅದರ ಒಂದು ಲೋಟದಷ್ಟನ್ನು ಸಾಗಿಸಲು ರೇಲೆ ಎಂಜಿನ್ ಬೇಕಾದೀತು!**

# ಅತ್ಯಧಿಕ ಭಾರವಾದ ಪದಾರ್ಥ

**ಕೆ. ಎಸ್ ರಮಾನಂದ**

ಒಂದು ಚೀಲ ಹತ್ತಿಯನ್ನೂ ಒಂದು ಚೀಲ ಸಿಮೆಂಟನ್ನೂ ಹೊರುವವರ ಮುಖಭಂಗಿ ವ್ಯಂಗ್ಯ ಚಿತ್ರಕಾರರ ಗಮನಕ್ಕೆ ಬಾರದೆ ಹೋಗಿಲ್ಲ. ಲೋಹಗಳಲ್ಲಿ ಚಿನ್ನದ ಭಾರದ ಅನುಭವ ಎಲ್ಲರಿಗೂ ಇದ್ದೇ ಇದೆ. ಒಂದು ಲೋಟ ಪಾದರಸವನ್ನೇನಾದರೂ ಕೈಯಲ್ಲಿ ಹಿಡಿದರೆ ನೀವು ಅದರ ತೂಕವನ್ನು ನೋಡಿ ಆಶ್ಚರ್ಯಪಡುತ್ತೀರಿ! ಅದು ಮೂರು ಕಿಲೋಗ್ರಾಮುಗಳಷ್ಟು ತೂಗುತ್ತದೆ! ಆದರೆ ಅದೇ ಒಂದು ಲೋಟಕ್ಕೆ ಹನ್ನೆರಡು ಟನ್ನುಗಳಷ್ಟು ಭಾರವಾದ ಪದಾರ್ಥವೂ ಇದೆಯೆಂದು ಹೇಳಿದರೆ ನಿಮಗೆ ಅಚ್ಚರಿಯಾಗುವುದೊಂದೇ ಅಲ್ಲ, ಪ್ರಾಯಶಃ ನಂಬಲಾರಿರಿ. ಆ ವಸ್ತುವು ನಿಜವಾಗ್ಯೂ ಇದ್ದು ಒಂದು ಲೋಟದಷ್ಟು ಅದನ್ನು ಸಾಗಿಸಲೂ ಹಬೆಯಂತ್ರ ಬೇಕಾಗುತ್ತದೆಂದರೆ ಇದು ಅರ್ಥಶೂನ್ಯವೆನಿಸುತ್ತದೆ ಅಲ್ಲವೇ? ಆದರೂ ಇದು ನಿಜ. ಖಗೋಲ ಶಾಸ್ತ್ರದ ಶೋಧಗಳಲ್ಲಿ ಇದೂ ಒಂದು.

ಸಿರಿಯಸ್* ಎಂಬ ನಕ್ಷತ್ರದ ಹೆಸರನ್ನು ಕೇಳಿದ್ದೀರಾ? ಅದು ಗಗನದಲ್ಲಿ ಹೊಳೆಯುವ ಅತಿ ಉಜ್ವಲ ನಕ್ಷತ್ರವಾಗಿದೆ. ಅದು ನಮ್ಮಿಂದ ೮.೮ ಪ್ರಕಾಶ ವರ್ಷ, ಅಂದರೆ ೫೧ ಲಕ್ಷ ಕೋಟಿ (೫೧೦೦೦೦೦೦೦೦೦೦೦೦) ಮೈಲು ದೂರದಲ್ಲಿದೆ. ವಿಶ್ವದ ಗರ್ಭದಲ್ಲಿ ಅಡಗಿರುವ ಆಶ್ಚರ್ಯಗಳಲ್ಲಿ ಈ ಕಿರುನಕ್ಷತ್ರಕ್ಕೆ ಮಹತ್ವಪೂರ್ಣ-ಸ್ಥಾನ ಅಮರವಾಗಿ ಕಾದಿರಿಸಲ್ಪಟ್ಟಿದೆ. ನೀರಿಗಿಂತ ೬೦,೦೦೦ ಪಟ್ಟು ತೂಕವಿರುವ ವಸ್ತು ಇರುವುದು ಈ ನಕ್ಷತ್ರದಲ್ಲೇ!

ಸಿರಿಯಸ್ ನಕ್ಷತ್ರದ ಈ ವೈಶಿಷ್ಟ್ಯವನ್ನು ಕಂಡು ಹಿಡಿದ ಕತೆ ಅತಿ ದೀರ್ಘವಾಗಿದೆ. ಸಾಮಾನ್ಯವಾಗಿ ನಕ್ಷತ್ರಗಳ ಚಲನೆ ಪರಸ್ಪರ ಸರಳ ರೇಖೆಯ ಗತಿಯಲ್ಲಾಗುತ್ತದೆ. ಆದರೆ ಜಾಜ್ವಲ್ಯಮಾನವಾಗಿ ಹೊಳೆಯುವ ಸಿರಿಯಸ್ ಮಾತ್ರ ಯಾವುದೋ ಒಂದು ವಕ್ರಗತಿಯನ್ನವಲಂಬಿಸಿತ್ತು. ಅದರ ಗತಿಯನ್ನು ತಿಳಿಯಲು ವಿಖ್ಯಾತ ಖಗೋಲ ಶಾಸ್ತ್ರಜ್ಞನಾದ ಬೆಸೆಲನು ಪ್ರಯತ್ನಿಸಿದನು. ಅವನು ಸಿರಿಯಸ್ ನಕ್ಷತ್ರದ ಚಲನೆಯನ್ನು ಬಾಧಿತವನ್ನಾಗಿ ಮಾಡಲು ಅದಕ್ಕಿರುವ ಜೊತೆ ನಕ್ಷತ್ರವೇ ಕಾರಣವಿರಬೇಕೆಂದೂಹಿಸಿದನು. ಅದರ ಗುರುತ್ವಾಕರ್ಷಣೆಯಿಂದಲೇ ಸಿರಿಯಸ್‌ನ ಚಲನೆ ವಕ್ರತೆಯನ್ನವಲಂಬಿಸಿರಬೇಕೆಂದು ಅವನ ಲೆಕ್ಕವಾಗಿತ್ತು (ಜೋಡು ನಕ್ಷತ್ರಗಳು ವಿಶ್ವದಲ್ಲಿ ವಿಪುಲವಾಗಿವೆ. ಎಷ್ಟೋ ವೇಳೆ ಅವು ಬರಿಗಣ್ಣಿಗೆ ಒಂದೇ ನಕ್ಷತ್ರವಾಗಿ ಕಾಣುತ್ತವೆ.) ಇದು ೧೮೪೧ ರಲ್ಲಿ. ವರುಣ (ಉರನಸ್) ಗ್ರಹದ "ಪೆನ್-ನಿಬ್" ಶೋಧದ ಎರಡು ವರ್ಷಗಳ ಮೊದಲು. ಆದರೆ ಇದು ಪೂರ್ಣವಾಗಿ ಸಿದ್ಧವಾದುದು ೧೮೬೨ ರಲ್ಲಿ. ಟೆಲಿಸ್ಕೋಪೊಂದರಲ್ಲಿ ತೀರ ಕಾಂತಿಹೀನವಾದ ಆ ಜೊತೆ ನಕ್ಷತ್ರವು ಗುರುತಿಸಲ್ಪಟ್ಟಾಗ ಬೆಸೆಲನು ಜೀವಿಸಿರಲಿಲ್ಲ. ಈ ಜೊತೆ ನಕ್ಷತ್ರವನ್ನು "ಸಿರಿ-ಯಸ್-ಬಿ" ಎಂದು ಕರೆಯುತ್ತಾರೆ.

ಸಿರಿಯಸ್-ಬಿ ಯು ಸಿರಿಯಸ್ ನಕ್ಷತ್ರದಿಂದ,

* ಹಿಂದೂ ಹೆಸರು, "ಲುಬ್ಧಕ."

ಭೂಮಿ ಸೂರ್ಯರ ನಡುವಣ ದೂರದ ೨೦ ಪಟ್ಟು ಅಂದರೆ ಸುಮಾರಾಗಿ ಸೂರ್ಯನಿಂದ ವರುಣಗ್ರಹದಷ್ಟು ದೂರದಲ್ಲಿ ೪೯ ವರ್ಷಗಳಿಗೊಂದು ಪ್ರದಕ್ಷಿಣೆ ಹಾಕುತ್ತದೆ. ಸಿರಿಯಸ್ ಮುಖ್ಯ ನಕ್ಷತ್ರದೊಡನೆ ಹೋಲಿಸಿದರೆ ಸಿರಿಯಸ್-ಬಿ ತುಂಬ ಮಂಕು ನಕ್ಷತ್ರ. ಅದನ್ನು ಖಗೋಲ ಶಾಸ್ತ್ರಜ್ಞರು ಎಂಟನೆಯ ಅಥವಾ ಒಂಭತ್ತನೆಯ ಮಾನದ ತಾರೆಯೆಂದು ಪರಿಗಣಿಸುತ್ತಾರೆ. (ನಮ್ಮ ಸೂರ್ಯನು ಅಷ್ಟೇ ದೂರದಲ್ಲಿದ್ದಿದ್ದರೆ ೧·೮ ಅಥವಾ ಎರಡನೇ ಮಾನದ ನಕ್ಷತ್ರವೆನಿಸುತ್ತಿದ್ದ.) ಸೂರ್ಯನಿಗಿಂತ ಕಾಂತಿಯಲ್ಲಿ ಇಷ್ಟು ಕಡಿಮೆಯಾಗಿದ್ದರೂ ಸಿರಿಯಸ್-ಬಿ ಯ ತೂಕ ಸೂರ್ಯನ ತೂಕದ ೦·೮ (೪।೫ ಅಂಶ) ದಷ್ಟು ಇದೆ.

ಇಷ್ಟು ತೂಕದ ನಕ್ಷತ್ರ ಇಷ್ಟೇಕೆ ಕಾಂತಿಹೀನ? ಖಗೋಲ ಶಾಸ್ತ್ರಜ್ಞರು ಇದರ ತೇಜೋಹೀನತೆಗೆ ಕಾರಣ ಅದರ ಮೇಲ್ಮೈ ತಾಪಮಾನ ತೀರ ಕಡಿಮೆಯಾಗಿರುವುದೆಂದು ಬಗೆದರು. ಸಿರಿಯಸ್-ಬಿ ಯು ಗಟ್ಟಿ ಪದರದ ಶೀತ ಸೂರ್ಯನೆಂದು ಪರಿಗಣಿಸಲ್ಪಟ್ಟಿತು. ವಿಶ್ವದಲ್ಲಿ ಕಾಲಗತಿಯಿಂದ ತಮ್ಮ ತೇಜಸ್ಸನ್ನು ಕಳೆದುಕೊಂಡು "ವೃದ್ಧಾಪ್ಯ"ದಲ್ಲಿರುವ ಎಷ್ಟೋ "ಮರಣೋನ್ಮುಖ" ತಾರೆಗಳಿದ್ದು ಅವುಗಳಲ್ಲಿ ಇದೂ ಒಂದಾಗಿರಬೇಕೆಂದು ಭಾವಿಸಲಾಯಿತು.

ಆದರೆ ಇಂದಿಗೆ ಮೂವತ್ತೈದು ವರ್ಷಗಳ ಹಿಂದೆ ಇದು ತಪ್ಪು ಕಲ್ಪನೆಯೆಂದು ಸಿದ್ಧವಾಯಿತು. ಸಿರಿಯಸ್-ಬಿ ಯು ಕ್ಷೀಣಿಸುತ್ತಿರುವ ನಕ್ಷತ್ರವಲ್ಲ, ಆದರೆ ಸೂರ್ಯನ ತಾಪಮಾನಕ್ಕಿಂತಲೂ ಉಚ್ಚ ತಾಪಮಾನವನ್ನು ಹೊಂದಿರುವ ನಕ್ಷತ್ರಗಳ ಗುಂಪಿನದೆಂದು ಗೊತ್ತಾಯಿತು.

ಈಗ ಪರಿಸ್ಥಿತಿ ಪೂರ್ಣ ಬದಲಾಯಿಸಿತು. ಸಿರಿಯಸ್-ಬಿ ಯ ಶಾಖ ಸೂರ್ಯನಿಗಿಂತ ಕಡಿಮೆಯಾಗಿಲ್ಲದಿದ್ದರೆ ಮತ್ತು ಅದರಿಂದ ನಮಗೆ ಬರುವ ಪ್ರಕಾಶ ಇಷ್ಟು ಕ್ಷೀಣವಾಗಿದ್ದರೆ ಅದರ ಮೇಲ್ಮೈಯ ಕ್ಷೇತ್ರ ಅರ್ಥಾತ್ ಅದರ ಗಾತ್ರ ಬಹಳ ಕಡಿಮೆಯೆಂಬ ಅನುಮಾನ ಅನಿವಾರ್ಯವಾಗುತ್ತದೆ. ಸಿರಿಯಸ್-ಬಿ ಪ್ರಕಾಶಮಾನ ಸೂರ್ಯನಿಗಿಂತ ೩೬೦ ಪಟ್ಟು ಕಡಿಮೆಯಿದೆ. ಈ ತಥ್ಯಗಳ ಮೇಲಿಂದ ಲೆಕ್ಕಹಾಕಿ ಸಿರಿಯಸ್-ಬಿ ಯ ವ್ಯಾಸಾರ್ಧ (ರೇಡಿಯೆಸ್)ವು ಸೂರ್ಯನ ವ್ಯಾಸಾರ್ಧಕ್ಕಿಂತ √೩೬೦ ರಷ್ಟು ಅಂದರೆ ೧೯ ಪಟ್ಟು ಕಡಿಮೆ ಮತ್ತು ಅದರ ಒಟ್ಟು ಘನ ಪರಿಮಾಣ ಸೂರ್ಯನ ಘನ ಪರಿಮಾಣದ ೧।೬೮೦೦ ಮಾತ್ರ ಎಂದು ಅಂದಾಜು ಮಾಡಲ್ಪಟ್ಟಿತು. ಆದರೆ ನಾವು ಮೊದಲೇ ತಿಳಿದಂತೆ ಸಿರಿಯಸ್-ಬಿ ಯ ತೂಕ ನಮ್ಮ ಸೂರ್ಯನಿಗಿಂತ ಬಹಳ ಕಡಿಮೆಯಲ್ಲ— ೦·೮ ರಷ್ಟು ಮಾತ್ರ. ಅಂದ ಮೇಲೆ ಸಿರಿಯಸ್-ಬಿ ತಾರೆಯಲ್ಲಿರುವ ಪದಾರ್ಥದ ದಾರ್ಢ್ಯ ಎಷ್ಟು ಅಧಿಕವಾಗಿದೆಯೆಂದೂಹಿಸಬಹುದು. ತೀರ ಈಚೆಗಿನ ಲೆಕ್ಕದ ಪ್ರಕಾರ ಸಿರಿಯಸ್-ಬಿ ಯ ವ್ಯಾಸ ಕೇವಲ ೪೦,೦೦೦ ಕಿಲೋಮಿಟರ್. ಇದು ಭೂಮಿಗಿಂತ ಸ್ವಲ್ಪ ಹೆಚ್ಚು, ವರುಣನಿಗಿಂತ ಸ್ವಲ್ಪ ಕಡಿಮೆ. ಇಷ್ಟು ಕಡಿಮೆ ಸ್ಥಳದಲ್ಲಿ ಭೂಮಿಗಿಂತ, ೨,೫೦,೦೦೦ ಪಟ್ಟು (ಸೂರ್ಯನ ೪।೫ ರಷ್ಟು) ದ್ರವ್ಯ ರಾಶಿ ಅಡಕವಾಗಿದೆ. ನೀರಿಗಿಂತ ೬೦,೦೦೦ ಪಟ್ಟು ದಾರ್ಢ್ಯ ಸಿರಿಯಸ್-ಬಿ ಯಲ್ಲಿರುವ ಪದಾರ್ಥಕ್ಕಿದೆ ಎಂದಾಯಿತು.

ಯಾವ ಭೌತಶಾಸ್ತ್ರಜ್ಞನೂ ಇಷ್ಟು ಭಾರವಾದ ವಸ್ತುವಿನ ಕಲ್ಪನೆಗೆ ತಯಾರಿರಲಿಲ್ಲ. ಸಾಮಾನ್ಯ ಪರಿಸ್ಥಿತಿಯಲ್ಲಿ ಇಂಥ ಅಧಿಕ ಘನತ್ವವನ್ನು ಕಲ್ಪನೆಯಲ್ಲೂ ಯೋಚಿಸಲಾಗದು. ಆದರೆ ವಿಜ್ಞಾನ ಪ್ರಗತಿಯಾದಂತೆ ಭೂಮಿಯ ಮೇಲೆ ಇದು ಸಾಮಾನ್ಯ ಸ್ಥಿತಿಯಲ್ಲಿ ಅಸಾಧ್ಯವೆನಿಸಿದರೂ ನಕ್ಷತ್ರಗಳಲ್ಲಿರುವ ಅಗಾಧ ತಾಪಮಾನ ಮತ್ತು ಒತ್ತಡದ ಅವಸ್ಥೆಯಲ್ಲಿ ಈ ಅದ್ಭುತವು ಸಾಧ್ಯಕೋಟಿಯದೆಂದು ತಿಳಿದುಬಂತು.

ಇದನ್ನು ಅರ್ಥ ಮಾಡಿಕೊಳ್ಳಲು ಪರಮಾಣುಗಳ ಸ್ವಭಾವವನ್ನು ತಿಳಿಯಬೇಕು. ಪದಾರ್ಥಗಳ ಪರಮಾಣುಗಳ ನಡುವೆ ಖಾಲಿ ಸ್ಥಳವಿರುತ್ತದೆ. ಆದರೆ ಸಾಮಾನ್ಯ ಅವಸ್ಥೆಯಲ್ಲಿ ಯಾವ

ಗಣ್ಯ ಒತ್ತಡಕ್ಕೂ ಈ ಖಾಲಿ ಸ್ಥಳವು ಸಂಕೋಚ ಗೊಳ್ಳುವುದಿಲ್ಲ.† ಪರಮಾಣುಗಳ ಕೇಂದ್ರದಲ್ಲಿರುವ ಬೀಜ (ನ್ಯೂಕ್ಲಿಯಸ್)ದ ಸುತ್ತ ನಿರಂತರವಾಗಿ ಸುತ್ತುವ ಇಲೆಕ್ಟ್ರಾನ್ ಎಂಬ ಸೂಕ್ಷ್ಮ ಕಣಗಳನ್ನು ಬೇರ್ಪಡಿಸಿದರೆ ಮಾತ್ರ ಉಳಿಯುವ "ವಿಗಲಿತ ಪರಮಾಣು" ಗಳು ಮೇಲೆ ಕಾಣಿಸಿದಂತೆ ಒತ್ತಡವನ್ನು ನಿರೋಧಿಸಲಾರವು. ಇಲೆಕ್ಟ್ರಾನುಗಳ ವಿಯೋಗದಿಂದ ಪರಮಾಣುವಿನ ವ್ಯಾಸವು ಸಾವಿರಾರು ಪಟ್ಟು ಕಡಿಮೆಯಾಗಿ ಬಿಡುತ್ತದೆ. ದೃಷ್ಟಾಂತಪೂರ್ವಕ ಹೇಳುವುದಾದರೆ ಇಲೆಕ್ಟ್ರಾನ್‌ಗಳಿಂದ ವಂಚಿತವಾದ ಪರಮಾಣು ಬೀಜವು ಸಾಮಾನ್ಯ ಪರಮಾಣುವಿಗಿಂತ ಒಂದು ನೊಣವು ಒಂದು ಮಹಾ ಭವನಕ್ಕಿಂತ ಎಷ್ಟು ಚಿಕ್ಕದೋ ಅಷ್ಟು ಚಿಕ್ಕದಾಗಿ ಬಿಡುತ್ತದೆ. ತಾರಾಮಂಡಲಗಳ ಆಳದಲ್ಲಿ ದೊರಕುವ ಭಯಂಕರ ತಾಪಮಾನದಲ್ಲಿ ಪರಮಾಣು ಬೀಜಗಳು ಹೀಗೆ ಇಲೆಕ್ಟ್ರಾನುಗಳಿಂದ ಬೇರ್ಪಟ್ಟು ವಿಗಲಿತವಾಗುತ್ತದೆ. ಇಂಥ ವಿಗಲಿತ ಪರಮಾಣು ಬೀಜಗಳು ತಾರಾಮಂಡಗಳಲ್ಲಿರುವ ಅಗಾಧ ಒತ್ತಡಕ್ಕೊಳಗಾದರೆ ಸಾಮಾನ್ಯ ಪರಮಾಣು ಬೀಜಗಳಿಗಿಂತ ಸಾವಿರಾರು ಪಟ್ಟು ಪರಸ್ಪರ ಹತ್ತಿರಬರಬಲ್ಲವು ಮತ್ತು ಆಗ ಸಿರಿಯಸ್-ಬಿ ನಕ್ಷತ್ರದಲ್ಲಿರುವಂಥ ಇಂದಿನ ತನಕ ಕಂಡು ಕೇಳದ ದಾರ್ಢ್ಯವುಳ್ಳ ಭಾರಿ ತೂಕದ ಪದಾರ್ಥವನ್ನು ನಿರ್ಮಿಸಬಲ್ಲವು.

ಈ ದಾರ್ಢ್ಯವನ್ನೂ ಮೀರಿದ ದಾರ್ಢ್ಯವುಳ್ಳ ಪದಾರ್ಥಗಳು ಇತರ ನಕ್ಷತ್ರಗಳಲ್ಲಿ ಕಂಡು ಬಂದಿವೆ. ಭೂಮಿಗಿಂತ ದೊಡ್ಡದಿರುವ ೧೨ ನೇ ಪ್ರಕಾಶ ಮಾನಕ್ಕೆ ಸೇರಿದ ವಾನ್- ಮಾನೆನ್ ಎಂಬ ನಕ್ಷತ್ರದ ದಾರ್ಢ್ಯವು ನೀರಿಗಿಂತ ೪,೦೦೦,೦೦ ಪಟ್ಟು ಹೆಚ್ಚಾಗಿದೆ.

ಆದರೆ ಇದೇ ಸೀಮೆಯಲ್ಲ. ಇನ್ನೂ ಅಧಿಕ ದಾರ್ಢ್ಯವುಳ್ಳ ವಸ್ತುವನ್ನು ನಾವು ಸೈದ್ಧಾಂತಿಕವಾಗಿ ಕಲ್ಪಿಸಬಹುದು. ಪರಮಾಣವಿಕ ಬೀಜದ ವ್ಯಾಸವು, ಇಲೆಕ್ಟ್ರಾನ್‌ಯುಕ್ತ ಪರಮಾಣುವಿನ ವ್ಯಾಸಕ್ಕಿಂತ ೧/೧೦,೦೦೦ಕ್ಕಿಂತ ದೊಡ್ಡದಲ್ಲ. ತತ್ಪರಿಣಾಮವಾಗಿ ಅದರ ಪರಿಮಾಣ ಪರಮಾಣುವಿನ $\frac{೧}{೧೦^{೧೨}}$ ರಷ್ಟಾಗುತ್ತದೆ. ಒಂದು ಘನ ಮೀಟರಿನಷ್ಟು ಲೋಹವು ೧/೧೦೦೦ ಘ.ಮೀಟರಿನಷ್ಟು ಬೀಜವನ್ನು ಮಾತ್ರ ಹೊಂದಿರುತ್ತದೆ. ಮತ್ತು ಲೋಹದ ಸಂಪೂರ್ಣ ಭಾರವು ಅದರ ಪರಮಾಣು ಬೀಜದ ಈ ಸಣ್ಣ ಪರಿಮಾಣದಲ್ಲಿ ಕೇಂದ್ರೀಕೃತವಾಗಿರುತ್ತದೆ. ಇದರ ಪ್ರಕಾರ ಒಂದು ಘನ ಸೆಂಟಿಮೀಟರಿನ ಪರಮಾಣು ಬೀಜದ ತೂಕ ಸುಮಾರು ೧೦೦,೦೦,೦೦೦ ಟನ್ನುಗಳು ಮಾತ್ರ!

ಇದಕ್ಕಿಂತ ಆಶ್ಚರ್ಯಕಾರಿ ಸುದ್ದಿಯೊಂದಿದೆ. ೧೯೩೫ ರಲ್ಲಿ ಕಂಡುಹಿಡಿಯಲ್ಪಟ್ಟ ಕ್ಯಾಸ್ಸಿಯೋಪಿಯಾ (Cassiopeia) ತಾರಾ ಮಂಡಲದ ಗಾತ್ರ ಭೂಮಿಯ ೧/೮ ರಷ್ಟಾದರೂ, ಇದರ ತೂಕ ಸೂರ್ಯನ ತೂಕಕ್ಕಿಂತ ೨.೮ ರಷ್ಟಿದೆ. ಈ ನಕ್ಷತ್ರದ ಒಂದು ಘನ ಸೆಂಟಿಮೀಟರಿನ ತೂಕ ಭೂಮಿಯ ಮೇಲೆ ೩೬ ಟನ್ನುಗಳಷ್ಟು ತೂಗುತ್ತದೆ. ಅದರ ದಾರ್ಢ್ಯ ಚಿನ್ನದ ದಾರ್ಢ್ಯಕ್ಕಿಂತ ಇಪ್ಪತ್ತು ಲಕ್ಷದಷ್ಟು ಹೆಚ್ಚಾದುದು.

ಹೀಗೆ ವಿಶ್ವದ, ಅಳತೆಗೆ ನಿಲುಕದ ಆಳವಾದ ಗರ್ಭದಲ್ಲಿ ಇನ್ನೂ ಏನೇನು ಆಶ್ಚರ್ಯಗಳಿರುವವೋ, ಈಗಲೇ ಹೇಳಬಲ್ಲವರಾರು! *

---

† ಪರಮಾಣುವನ್ನು ಸೂರ್ಯ ಸಂಸ್ಥೆಯಕ್ಕೆ ಹೋಲಿಸಬಹುದು. ಮಧ್ಯದಲ್ಲಿ ಸೂರ್ಯ ಮತ್ತು ಸೂರ್ಯನ ಸುತ್ತ ಬೇರೆ ಬೇರೆ ದೂರಗಳಲ್ಲಿ ಗ್ರಹಗಳು ತಿರುಗುತ್ತಿರುವ ಹಾಗೆ ಪರಮಾಣುವಿನಲ್ಲೂ ನಡುವೆ ಬೀಜ ಮತ್ತು ಅದರ ಸುತ್ತ ಇಲೆಕ್ಟ್ರಾನುಗಳೆಂಬ ಕಣಗಳು ಸದಾ ಗರಗರನೆ ಸುತ್ತುತ್ತಿರುತ್ತವೆ. ಸೂರ್ಯ ಸಂಸ್ಥೆಯವನ್ನು ಇಡಿಯಾಗಿ ತೆಗೆದುಕೊಂಡರೆ ಸೂರ್ಯನಿಗೂ ಗ್ರಹಗಳಿಗೂ ಇರುವ ಖಾಲಿ ಸ್ಥಳವೇ ಅಗಾಧವಾಗಿರುವಂತೆ ಪರಮಾಣುವಿನಲ್ಲೂ ಅದರ ಬೀಜದಿಂದ ಇಲೆಕ್ಟ್ರಾನುಗಳ ನಡುವೆ ಅಗಾಧ ಖಾಲಿ ಸ್ಥಳವಿರುತ್ತದ.

# ಇದುವೆ ಜೀವ, ಇದು ಜೀವನ

ತಾಯಿಯ ಅಸ್ಥಿ ವಿಸರ್ಜನೆಗಾಗಿ ಕಾಶಿಗೆ ಹೊರಟಿದ್ದ ನನ್ನ ಶ್ರೀಮಂತ ಹಿತೈಷಿಗಳೊಬ್ಬರು ನನ್ನನ್ನೂ ಕರೆದೊಯ್ದಿದ್ದರು. ಗಂಗೆಯಲ್ಲಿ ಮಿಂದು, ಕರಡಿಗೆಯಲ್ಲಿ ತಂದಿದ್ದ ಅಸ್ಥಿಶೇಷವನ್ನು ಪ್ರವಾಹದಲ್ಲಿ ವಿಸರ್ಜಿಸಲು ಕೈಯೆತ್ತಿದ ಅವರು ಕೈಯನ್ನು ಹಾಗೆಯೆ ಹಲವು ಕ್ಷಣ ತಡೆಹಿಡಿದು ಭಾವನಾವಶರಾಗಿ ನಿಂತರು. ಆ ಮೇಲೆ ಪ್ರಯತ್ನದಿಂದೆಂಬಂತೆ ಅದನ್ನು ಚೆಲ್ಲಿ ಹಾಗೇ ದಂಡೆಯಲ್ಲಿ ಕುಕ್ಕರಿಸಿ ಗಳಗಳನೆ ಅತ್ತುಬಿಟ್ಟರು.

ಅವರು ಸಾವರಿಸಿಕೊಂಡ ಮೇಲೆ ನಾನು ಅವರ ಅಳುವಿನ ಕಾರಣವನ್ನು ಕೇಳಿದೆ. ಅವರೆಂದರು: "ತಾಯಿ ಸತ್ತಾಗ, ಅವರ ಮೇಲೆ ಅಗಾಧ ಪ್ರೀತಿಯಿದ್ದರೂ ನನಗೆ ಅಷ್ಟೇನೂ ಅಳು ಬರಲಿಲ್ಲ. ಅವರು ಸಾಕಷ್ಟು ಕಾಲ ಬಾಳಿದ್ದರು. ಅಕಾಲಮೃತ್ಯು ಎನ್ನುವ ಹಾಗಿರಲಿಲ್ಲ. ಅವರನ್ನು ಸುಟ್ಟು ಹಿಡಿ ಎಲುಬನ್ನು ಆರಿಸಿ ತಂದಾಗಲೂ ನನಗೆ ದುಃಖ ಬರಲಿಲ್ಲ. ಪಂಚತೀರ್ಥಗಳಲ್ಲಿ ಅಸ್ಥಿಶೇಷವನ್ನು ವಿಸರ್ಜಿಸಲು ನಿರ್ಧರಿಸಿ ತುಂಗಾನದಿ ಮೊದಲಾಗಿ ನಾಲ್ಕು ನದಿಗಳಿಗೆ ಹೋಗಿ ಬಂದೆ. ಆಗಲೂ ಏನೂ ಅನಿಸಲಿಲ್ಲ. ಈಗ ಕೊನೆಯ ಶೇಷವನ್ನು ಗಂಗೆಗೆ ಅರ್ಪಿಸಲು ಕೈಯೆತ್ತಿದಾಗ ಒಮ್ಮೆಲೆ ನನಗೊಂದು ವಿಚಾರ ಹೊಳೆಯಿತು ಇದು ನನಗೂ ನನ್ನ ತಾಯಿಗೂ ಇದ್ದ ಕೊನೆಯ ಪಾರ್ಥಿವ ಸಂಬಂಧ; ಈಗ ಅದೂ ಹರಿಯುತ್ತಿದೆ. ತಾಯಿ ಸತ್ತರೂ ಈ ವರೆಗೆ ಅವರ ಅಸ್ಥಿಯನ್ನಾದರೂ ಮುಟ್ಟಬಹುದಾಗಿತ್ತು. ಇನ್ನುಮೇಲೆ ಆ ಸ್ಪರ್ಶ ಕೂಡ ದೊರೆಯುವಂತಿಲ್ಲ. ಈ ಯೋಚನೆ ಹೊಳೆದಾಗ ನನಗೆ ಸಹಿಸಲಾರದ ದುಃಖ ಉಕ್ಕಿ ಬಂತು."

— ಸಾ. ಮು. ಉ.

ಉಡುಪಿಯಲ್ಲಿ ಪರ್ಯಾಯ ಮಹೋತ್ಸವದ ದಿನಗಳು. ನಾನೂ ನಮ್ಮ ಬ್ಯಾಂಕಿನ ಅಕೌಂಟೆಂಟರೂ ಒಂದು ರಾತ್ರಿ ಉತ್ಸವ ನೋಡಲು ಹೋಗಿದ್ದೆವು. ಸುಖವಾಗಿ ಸಂಚರಿಸುವುದಿರಲಿ, ಅಲುಗಾಡಲು ಕೂಡಾ ಅವಕಾಶವಿರದಷ್ಟು ಜನದಟ್ಟಣೆಯಿತ್ತು. ಅಂತಹುದರಲ್ಲಿ ಯಾರೋ 'ಹೋ ಹೋ', 'ಹೋ ಹೋ—' ಎಂದು ಕೂಗುತ್ತಾ ಬರುತ್ತಿರುವುದು ಕೇಳಿಸಿತು. ಆ ಸದ್ದು ಕೇಳಿದ ತಕ್ಷಣ ನಮ್ಮ ಹತ್ತಿರವಿದ್ದವರು, 'ಸ್ವಾಮಿಗಳು ಬಂದರು', 'ಸ್ವಾಮಿಗಳು ಬಂದರು' ಎನ್ನುತ್ತಾ ಸರಿದು ನಿಂತರು. ಒಬ್ಬರು ಸುಖವಾಗಿ ಹೋಗುವಷ್ಟರಮಟ್ಟಿಗಿನ ದಾರಿಯಾಯಿತು. ಒಬ್ಬ ಬ್ರಾಹ್ಮಣ ಹುಡುಗ ದೀಪ ಹಿಡಿದು 'ಹೋ ಹೋ' ಎಂದು ಮುಂದುವರಿಯುತ್ತಿದ್ದಂತೆ ಸ್ವಾಮಿಗಳೊಬ್ಬರು ಅವನ ಹಿಂದೆ ನಡೆದಿದ್ದರು. ಅವರ ಹಿಂದೆ ಇನ್ನೆರಡು ವಟುಗಳು.

ಸ್ವಲ್ಪ ಹೊತ್ತಿನಲ್ಲಿ ನನ್ನ ಸ್ನೇಹಿತರು ಥಟ್ಟನೆ ಗಾಬರಿಯಾಗಿ ಕೈ, ಕಿಸೆಗಳನ್ನೆಲ್ಲಾ ಹುಡುಕಿ ನೋಡಿದರು. ತಕ್ಷಣ ಕಂಗೆಟ್ಟು ನುಡಿದರು: "ಘಾತವಾಯಿತು. ನಮ್ಮ ಬ್ಯಾಂಕಿನ ಸೇಫ್ ರೂಮಿನ ಕೀಲಿಕೈ ಕಾಣಿಸುವುದಿಲ್ಲ.—ಬಹುಶಃ ಆಗ ಬಟ್ಟೆ ಕೊಂಡೆವಲ್ಲಾ, ಆ ಜವುಳಿ ಅಂಗಡಿಯಲ್ಲಿ ಬಿಟ್ಟು ಬಂದಿರಬೇಕೆಂದು ತೋರುತ್ತದೆ. ಯಾರಾದರೂ ಕೈಕೊಟ್ಟರೆ ನನಗೆ ಉಳಿಗಾಲವಿಲ್ಲ. ಈ ಕೂಡಲೆ ಹೋಗೋಣ ನಡಿ" ಎಂದರು.

ನನ್ನ ಸ್ನೇಹಿತರ ದುಃಸ್ಥಿತಿ ನೋಡಿ ಉತ್ಸವವೂ ಬೇಡವೆನಿಸಿತು. ಕೈಗಡಿಯಾರ ನೋಡಿಕೊಂಡೆ. ಒಂಭತ್ತಕ್ಕೆ ಹತ್ತು ನಿಮಿಷಗಳಿದ್ದವು. ನನ್ನ ರೂಮಿನ ಹತ್ತಿರವೇ ಇರುವುದು ಆ ಅಂಗಡಿ. ಒಂಭತ್ತಕ್ಕೆ ಸರಿಯಾಗಿ ಬಾಗಿಲು ಹಾಕುವ ಕ್ರಮ ಅವರದು. ಈ ಅಪಾರ ಜನಸಂದಣಿ ದಾಟಿ ಅಷ್ಟು ದೂರದ ಅಂಗಡಿಗೆ ಹತ್ತೇ ನಿಮಿಷಗಳಲ್ಲಿ ಹೋಗುವುದು ಸಾಧ್ಯವೇ ?

ಥಟ್ಟನೇ ಹೊಳೆಯಿತು ಉಪಾಯ. 'ನನ್ನ ಸ್ನೇಹಿತರನ್ನು ಹಿಂದಿಟ್ಟುಕೊಂಡು ಹೊರಟೆ—'ಹೋ ಹೋ', 'ಹೋ ಹೋ' ಎನ್ನುತ್ತಾ. ತಕ್ಷಣ ಚಮತ್ಕಾರ ಕಂಡು ಬಂತು. 'ಸ್ವಾಮಿಗಳುಬಂದರು', 'ಸ್ವಾಮಿಗಳು ಬಂದರು' ಎನ್ನುತ್ತಾ ಜನಸಂದಣಿ ದಾರಿ ಮಾಡಿಕೊಟ್ಟಿತು. ಸುಖವಾಗಿ ಐದೇ ನಿಮಿಷಗಳಲ್ಲಿ ಅಂಗಡಿ ತಲುಪಿದೆವು !

—ಹೆಬ್ಬಾರ, ಉಡುಪಿ.

ಒಂದು ದಿನ ಅಂಚೆಯವನು ನಮ್ಮ ತಂದೆಯವರ ವಿಳಾಸಕ್ಕೆ ಬಂದ ಒಂದು ಪಾಕೀಟನ್ನು ನಮ್ಮ ಕೈಗೆ ಕೊಡುತ್ತ "ಇದು ನಾಟ್‌ಪೇಡ್ ಇದೆ. ೩೦ ನಯೇ ಪೈಸೆ ಕೊಡಿರಿ" ಎಂದು ಹೇಳಿದನು. ಆ ಪಾಕೀಟಿಗೆ ಅಂಚೆಯ ತಿಕೀಟು ಹಚ್ಚಿದ್ದಿಲ್ಲ. ಇದು ಯಾರು ಕಳಿಸಿದ್ದಿರಬಹುದೆಂದು ನಾವು ಅದನ್ನು ಸೂಕ್ಷ್ಮವಾಗಿ ಹರಿಶೀಲಿಸಿದಾಗ ಹುಬ್ಬಳ್ಳಿಯಲ್ಲಿರುವ ನಮ್ಮ ಅಣ್ಣನ ವಿಳಾಸವು ಅದರ ಮೇಲಿದ್ದುದನ್ನು ಯಾರೊ ಪೆನ್ಸಿಲಿನಿಂದ ಹೊಡೆದು ಹಾಕಿ ನಮ್ಮ ತಂದೆಯ ವಿಳಾಸವನ್ನು ಗೀಚಿದ್ದು ಕಂಡುಬಂದಿತು. ಬಹುಶಃ ಇದು ನಮ್ಮ ಅಣ್ಣನ ಮಕ್ಕಳ ತಂತ್ರವಿರಬೇಕೆಂದು ಗ್ರಹಿಸಿ ೩೦ ನಯೇ ಪೈಸೆ ಕೊಟ್ಟು ಆ ಪಾಕೀಟನ್ನು ಸ್ವಾಧೀನಪಡಿಸಿಕೊಂಡೆವು. ಅದನ್ನು ಒಡೆದು ನೋಡಿದಾಗ ಅದರೊಳಗೆ ನಮ್ಮ ಅಣ್ಣನ ೪-೫ ವರ್ಷದ ಮಗಳು ತನ್ನ ಅಜ್ಜಿಗೆ (ನಮ್ಮ ತಾಯಿಗೆ) ಬರೆದ ಕಾಗದವಿತ್ತು. ಅದರೊಳಗೆ ಅವಳು ಇಲ್ಲಿಯ ಕ್ಷೇಮ ಸಮಾಚಾರವನ್ನು ಕೇಳಿದ್ದಳು. ಸ್ವತಂತ್ರವಾಗಿ ಪಾಕೀಟನ್ನು ಊರಿಂದೂರಿಗೆ ಕಳಿಸಿದ ಅವಳ ಧೈರ್ಯವನ್ನೂ ವಿಳಾಸ ಹಾಗು ಊರಿನ ಹೆಸರು ಅಸ್ಪಷ್ಟವಾಗಿದ್ದರೂ ಅದನ್ನು ನಮಗೆ ಸರಿಯಾಗಿ ಮುಟ್ಟಿಸಿದ ಅಂಚೆ ಶಾಖೆಯ ದಕ್ಷತೆಯನ್ನೂ ನಾವು ಶ್ಲಾಘಿಸಿದೆವಲ್ಲದೆ ೩೦ ನಯೆ ಪೈಸೆ ದಂಡವನ್ನು ತೆತ್ತದ್ದು ಸಾರ್ಥಕವಾಯಿತೆಂದು ಸಂತೋಷ ತಾಳಿದೆವು.

ಈ ವಿಷಯವನ್ನು ನಾವು ಹುಬ್ಬಳ್ಳಿಯಲ್ಲಿರುವ ನಮ್ಮ ಅಣ್ಣನಿಗೆ ತಿಳಿಸಿದಾಗ ಅವರು ಕೂಡ ಬಹಳ ಆಶ್ಚರ್ಯಪಟ್ಟರು. ಅವರಿಗೆ ಇದಾವುದೂ ಗೊತ್ತಿದ್ದಿಲ್ಲವಂತೆ. ಒಂದು ದಿನ ಈ ಚಿಕ್ಕ ಬಾಲಿಕೆಯು ಕೆಳಗೆ ಬಿದ್ದ ಖಾಲಿ ಪಾಕೀಟನ್ನು ತೆಗೆದುಕೊಂಡು ಅದರೊಳಗೆ ತಾನು ಬರೆದ ಕಾಗದದ ತುಂಡು ಇಟ್ಟು ಅಂಚೆ ಪೆಟ್ಟಿಗೆಯಲ್ಲಿ ಹಾಕಿ ಬಂದು "ನಾನು ಹೊಸಪೇಟೆಗೆ ಇವತ್ತು ಪತ್ರ ಹಾಕೀನಿ. ನಾಕು ಮಂದಿಗೆ ಅದನ್ನು ತೋರಿಸಿದೆ. ಅದು ಮುಟ್ಟಿಯೇ ತೀರುವುದೆಂದು ನನಗೆ ಹೇಳಿದರು" ಎಂದು ಸಂತೋಷದಿಂದ ಕುಣಿಯುತ್ತ ಹೇಳಿದಳಂತೆ. ಈ ಪಾಕೀಟಿಗೆ ಅಂಚೆ ತಿಕೀಟು ಹಚ್ಚಲು ತಾನು ಹಣ ಕೊಟ್ಟಿದ್ದಿಲ್ಲವಾದ್ದರಿಂದ ಮತ್ತು ಹೊಸಪೇಟೆಯ ವಿಳಾಸವನ್ನು ಬರೆಯುವುದು ಅವಳಿಗೆ ಅಸಾಧ್ಯವೆನಿಸಿದ್ದರಿಂದ ಅವಳ ಮಾತಿನಲ್ಲಿ ವಿಶ್ವಾಸವಿಟ್ಟಿದ್ದಿಲ್ಲವಂತೆ. ಇದನ್ನು ಕೇಳಿದ ಮೇಲೆ ಈ ಬಾಲಿಕೆಯ ಸಾಹಸವು ನಮ್ಮನ್ನು ದಿಙ್ಮೂಢರನ್ನಾಗಿ ಮಾಡಿತು.

ಕು. ರಕುಮಾ ಮುತ್ತಿಹಳ್ಳಿ

ಒಂದು ಅಪೂರ್ವ ಮರಾಠಿ ಕಥೆ

# ಹದ್ದು

ಮೂಲ: ವಾಮನ ಚೋರಘಡೆ
ಅನುವಾದ: ದ. ಬಾ. ಕುಲಕರ್ಣಿ

ಎಲ್ಲಾ ವಿಲಕ್ಷಣ !

ಅದು ಸ್ವಪ್ನವಿದ್ದೀತು—ಎಂದು ನನಗೆ ಇನ್ನೂ ಒಮ್ಮೊಮ್ಮೆ ಅನ್ನಿಸುವುದುಂಟು. ಆದರದು ಸ್ವಪ್ನವಲ್ಲ. ನಾವು ಯಾವುದಕ್ಕೆ ಸ್ವಪ್ನವೆನ್ನುತ್ತೇವೆ? ಯಾವಾಗಲಾದರೂ ಅಂಥ ಘಟನೆಯೊಂದು ಮನಸ್ಸಿನಲ್ಲಿ ತರಂಗಿತವಾಗಿ ಹೋದಾಗ ! ಅಂಥ ವಿಚಾರ ನನ್ನ ಮನಸ್ಸಿನಲ್ಲಿ ಎಂದೆಂದೂ ಬಂದಿಲ್ಲ. ಆದ್ದರಿಂದಲೇ ಎಲ್ಲಾ ವಿಲಕ್ಷಣವಾದದ್ದು.

ಸೌ. ಲೀಲಾ ದೇಶಪಾಂಡೆ— ಇಪ್ಪತ್ತೆರಡರ ಪ್ರಾಯದವಳು. ಸ್ವಂತದ ಬಗ್ಗೆ ಕೆಲವೊಂದು ವಿಶಿಷ್ಟ ಕಲ್ಪನೆಗಳಿದ್ದಂಥವಳು, ತನ್ನ ಬಗ್ಗೆ ಕೆಲವೊಂದು ಬಗೆಯ ವಿಚಾರ ಮಾಡಬಲ್ಲಂಥವಳು. ಸುಖವಾದಿಯವಳು, ಸುಖದಿಂದಿರುವವಳು. ಚೆಂದವಲ್ಲ ; ಚೆಲುವೆಯೂ ಅಲ್ಲ ; ಆದರೆ ಹೆಚ್ಚಿನ ಮೋಹಕತೆ ; ಒಪ್ಪವಾಗಿಯೇ ಕಾಣಬೇಕು. ಪತಿ ಎಲ್ಲೋ ಕಲಿಯಲು ಹೋಗಿದ್ದ. ಇವಳು ಸುಶಿಕ್ಷಿತಳು. ಮನೆಯಲ್ಲಿ ಕುಳಿತು ಮಾಡುವುದಾದರೂ ಏನು ? ಅಂತಲೇ ಅವಳು ಈ ಕಾಲೇಜಿಗೆ ಬಂದಳು. ಮುಂದೆ ಎಂದಾದರೂ ಶೈಕ್ಷಣಿಕ ಅಭ್ಯಾಸದ ಕೊರತೆ ಕಂಡೀತು; ಕೊನೆಗೆ ಮಾಸ್ತರಣಿಯಾದರೂ ಆಗಲು ಬಂದೀತು—ಎಂಬುದೇ ಉದ್ದೇಶ. ಇಂದಿನ ರೂಢಿಯೇ ಹಾಗೆ: ಸುಶಿಕ್ಷಿತ ಸ್ತ್ರೀಯ ಅಂತಿಮ ಧ್ಯೇಯವೆಂದರೆ ನೌಕರಿ.

ನನಗೆ ಪರಿಚಿತಳು ; ಗೆಳತಿಯೆಂದು ಯಾರಿಗನ್ನಬೇಕು ? ಯಾರೊಡನೆ ಹೊಂದಿಕೆಯಾಗುವುದಿಲ್ಲವೋ, ಒಂದಿಷ್ಟೂ ವಿಚಾರಸಾಮ್ಯವಿಲ್ಲವೋ ಅವಳಿಗನ್ನಬೇಕೆ?

ಆದರೂ ಅವಳೊಡನೆ ಮಾತಾಡದಿರಲು ಆಗುವುದಿಲ್ಲ. ಅವಳಾದರೂ ಅದಕ್ಕೆಂದಾದರೂ ಅಡ್ಡಿ ಮಾಡುವಳೆನ್ನಬೇಕೆ ? ಸುದ್ದಿಯಿಲ್ಲ. ಸಂಭಾಷಣೆಯಾದರೂ ಬಗೆಬಗೆಯದು. " ನೀನೇನೋ ಪತಿಯನ್ನು ಆಯ್ದುಕೊಂಡೆ. ಅವನೋ— ತೀರ ಇದಾಗಿದ್ದಾನೆ. ನಿನಗೊಂದಿಷ್ಟೂ ಶೋಭಿಸುವಂತಿಲ್ಲ " ಎಂದು ನಾನವಳಿಗೆ ಒಮ್ಮೆ ಅಂದಿದ್ದೆ. ಅದಕ್ಕವಳು ಚಟ್ಟನೆ ಉತ್ತರಕೊಟ್ಟಿದ್ದಳು: "ನಾನವರನ್ನು ಆರಿಸಿದ್ದು ನನಗಾಗಿ ; ನಿಮಗಾಗಿ ಎಂದೇನೂ ಅಲ್ಲವಲ್ಲ ! " ಎಂದು.

ಅದು ನಿಜ ; ಆದರೂ ಒಂದು ರೂಢಿಯಂತೆ ನನ್ನ ಅಭಿಪ್ರಾಯ ಸೂಚಿಸಿದ್ದೆ. ಲೋಕದ ಯಾವುದೇ ಮಾತಿಗೆ ನಮ್ಮದೊಂದು ಮತ ಇದ್ದೇ ಇರುವುದಲ್ಲವೆ ?



ಮತ್ತೊಮ್ಮೆ ಹೀಗೇ ಮಾತಿಗೆ ಮಾತು ಬಂತು. ಅವಳು ತನಗಾಗಿ ಸೀರೆ ತಂದಳು. ನಿರುಕಿಸಿ—ಪರುಕಿಸಿ "ಇದರ ಬಣ್ಣ ಹೋಗುತ್ತದೆ" ಎಂದಿದ್ದೆ. ಅವಳ ಮರುಮಾತು : "ನೀವೇನಾದರೂ ಉಪಯೋಗಿಸಿ ನೋಡಿದ್ದೀರಾ ? " ಎಂದು.

ಈ ಮಾತಾದರೂ ಸುಳ್ಳಲ್ಲ.

ಇಂಥ ಜಗಳಗಳು ಸದಾ ನಡೆಯುವವು. ದಿನವೂ ಇದೇ ಹಾಡು. ಇದರಲ್ಲೇನು ಸ್ವಾರಸ್ಯ? ನಾನಾದರೂ ಅವಳೊಡನೆ ಯಾಕೆ ಮಾತಾಡಬೇಕು—ಇದೇ ಒಂದು ಪ್ರಶ್ನೆ. ಕೇವಲ ಮಾತಾಡಬೇಕೆಂದೇ ನಾನೇನು ಮಾತಾಡುತ್ತಿದ್ದಿಲ್ಲ. ಇಷ್ಟು ಮಾತ್ರ ನಿಜ, ನನ್ನ ಪ್ರಿಯ ಜನರೆಲ್ಲರಿಂದ ನಾನು ದೂರವಿದ್ದವನು. ಇಲ್ಲಿಯ ನನ್ನ ಸಹಾಧ್ಯಾಯಿಗಳೊಂದಿಗೆ ಮಾತಾಡುವುದೆಂದರೆ ಅವೇ ಮಾಮೂಲಿ ಮಾತುಗಳು. ಜಗಳಾಡುವುದೆಂದರೂ ಉತ್ಕಟತೆ ಬೇಕು. ಆದರೆ ಇಲ್ಲಿ ಬರೇ ಚಹಾ ; ಖಾಲಿ ಮಾತು. ಇದಕ್ಕೆ ಮನಸ್ಸು ರಮಿಸದಿದ್ದರೆ ? ಮತ್ತೇನೂ ಇಲ್ಲ. ಅಲ್ಲದೆ ಮನಸ್ಸಿನ ಎಳೆತವೆಲ್ಲ ಬೇರೊಂದು ಕಡೆಗೆ !

ಗಂಡು ಅರಿಕೊರೆ ನಂಬುಗೆ—ನೆಚ್ಚಿಕೆಗಳಲ್ಲಿ ಒಮ್ಮೊಮ್ಮೆ ಸುಖ ಕಾಣುತ್ತಾನೆ. ಹೆಣ್ಣು ಅವನಿಗೆ ಬೇಕೆನಿಸುವುದು ಇದಕ್ಕಾಗಿಯೇ. ಅನೇಕ ಕಾರಣಗಳಿಂದ ಅವನಿಗೆ ಅವಳಿಲ್ಲದೆ ನಡೆಯುವುದಿಲ್ಲ. ಮನಸ್ಸಿಗೂ ಆತಂಕ. ಹೀಗೆ ನಿರ್ಬಲನಾಗುವುದು, ಇಂಥ ನಿಷ್ಪ್ರಭನಾಗುವದು—ನಿತ್ಯದ ಕೋಟಲೆಗಳ ವೃತ್ತಿ-ಪ್ರವೃತ್ತಿಗಳಿಂದ ದೂರ ದೂರವಾಗುವ ಸಂಧಿಯನ್ನವನು ಯಾವಾಗಲೂ ಬಯಸುತ್ತಾನೆ.

ಇಂಥ ಸಂಧಿಯನ್ನು ಲೀಲಾ ನನಗೆ ಒದಗಿಸುತ್ತಿದ್ದಳೆ ? ಇದ್ದರೂ ಇರಬಹುದು. ನನಗೆ ಬೇರೆ ಏನೂ ಬೇಕಾಗಿರಲಿಲ್ಲ. ಅವಳ ಬುದ್ಧಿವಂತಿಕೆ, ಹೃದಯವಂತಿಕೆ — ಅವುಗಳದೇನು ಉಪಯೋಗ ನನಗೆ ? ಅವುಗಳ ಮೇಲೆ ಹೇಳಿಕೊಳ್ಳುವಂಥ ಒಡೆತನವಿದ್ದಿಲ್ಲ ನನಗೆ. ಅದನ್ನೆಲ್ಲ ಅವಳು ಸಂಪೂರ್ಣವಾಗಿ ಒಬ್ಬ ವ್ಯಕ್ತಿಗೆ ಅರ್ಪಿಸಿಬಿಟ್ಟಿದ್ದಳು. ಅಲ್ಲದೆ ಸಂಪೂರ್ಣ ಸುಖೋಪಭೋಗವನ್ನಾದರೂ ಅವಳು ಪಡೆಯುತ್ತಿದ್ದಳು. ಇನ್ನೊಬ್ಬನ ಬುದ್ಧಿಯ, ಹೃದಯದ, ವೈಭವದ ಪರವೆಯಿರಲು ಅವಳಿಗೆ ಏನು ಕಾರಣವಿತ್ತು ?

ನಮ್ಮ ನಮ್ಮ ಸತತ ಸಂಘರ್ಷಕ್ಕೆ ಇದೇ ಕಾರಣವಾಗಿರಬೇಕು. ಇದೇ ನನ್ನ ದಾರಿಗೆ ಅಡ್ಡಿಯಾಗಿ, ನನ್ನ ಬುದ್ಧಿಯನ್ನು ನಿಷ್ಪ್ರಭಗೊಳಿಸುವ ಗುರಿಯಾಗಿರಬೇಕು. ತನ್ನ ಬೌದ್ಧಿಕ ನಿಕಷವೆಂದಷ್ಟೆ ನಾನವಳಿಗೆ ಬೇಕಾಗಿರಬೇಕು. ನನ್ನ ಹೃದಯಕ್ಕೆ ಮಾತ್ರ ಅವಳೆಂದೂ ಕೈಯಿಕ್ಕಿದವಳಲ್ಲ. ಇದು ನಿಜ.

ನನಗೆ ಮಾತ್ರ ಮನಸ್ಸಿನ ದುರ್ಬಲತೆಯಲ್ಲಿ ಏನೇನೋ ಅನಿಸುವುದು. ನನ್ನೊಡನೆ ಅವಳು ಸರಿಯಾಗಿ ಮಾತಾಡಬೇಕು ; ಸರಿಯಾಗಿ ನಡೆದುಕೊಳ್ಳಬೇಕು—ಅನಿಸುವುದು. ಈ ವಿದ್ಯಾರ್ಥಿ ಜೀವನ ನಾಲ್ಕು ದಿನಗಳದು. ಅಷ್ಟರಲ್ಲೇ ಎಲ್ಲಾ ಕೆಟ್ಟು ಹೋಗಬಾರದು. ಮೊದಲಿನ ಗುರುತು ಮಾಜಿಹೋಗಬಾರದು. ಹೀಗಾದರೆ ಸರಿ, ಹಾಗಾದರೆ ತಪ್ಪು—ಹೀಗೆ ಅನೇಕ ವಿಚಾರ ಬರುವವು.

ನಿಜ, ಹಾಗಾಗಿದ್ದರೆ ಏನಾಗುತ್ತಿತ್ತು—ಯಾರಿಗೆ ಗೊತ್ತು ?

ಹೀಗೆ ಇಂಥ ಸಂಬಂಧಗಳಿಂದ ಸಂಶಯದ, ಸಂಘರ್ಷದ ಬೀಜ ನನ್ನ ಮನಸ್ಸಿನಲ್ಲಿ ಊರಿಕೊಂಡಿದ್ದರಿಂದ ಲೀಲೆಯ ಬಗ್ಗೆ ನನಗೆ ಆತ್ಮೀಯತೆಯೂ ಎನಿಸಿತ್ತು ; ಅಂಜಿಕೆಯೂ ಉಂಟಾಗಿತ್ತು. ಯಾರಿಂದ ನಮ್ಮಷ್ಟಕ್ಕೆ ನಾವು ಬೇಕೆಂತಲೇ ಹೆದರಿಕೊಳ್ಳುವೆವೋ ಮುಂದೆ ಮುಂದೆ ಅವರದೇ ಭೀತಿಯಾಗುತ್ತದೆ ನಮಗೆ. ನನ್ನೊಬ್ಬ ಶಿಕಾರಿ ಮಿತ್ರ ಇಂದಿಗೂ ಸಹ ಇಲಿಗೆ ಮತ್ತು ಕಪ್ಪೆಗೆ ಹೆದರುತ್ತಾನೆ.

ತಾತ್ಪರ್ಯವೆಂದರೆ ಇಂಥವಳು ಸೌ. ಲೀಲಾ ದೇಶಪಾಂಡೆ ; ಮತ್ತು ಇಂಥವನು ನಾನು !

ಇನ್ನು ಇದು ಸ್ವಪ್ನವೋ— ಮತ್ತೇನು ಎಂದೆನಲ್ಲ- ಅದನ್ನು ಹೇಳುತ್ತೇನೆ.

ಅರ್ಥಾತ್ ಇಂಥ ಈ ಹೆಂಗಸು ಹೇಳದೆ

# ಬಾಯಿಯ ದುರ್ಗಂಧವನ್ನು ಕಾಲ್ಗೇಟಿನಿಂದ ತೊಲಗಿಸಿರಿ

ಅದರೊಂದಿಗೆ ದಿನವಿಡೀ

# ದಂತಕ್ಷಯವನ್ನು ಇದಿರಿಸಿರಿ !




ನಿಮಗೆ ಹಲ್ಲುಪುಡಿ ಹೆಚ್ಚು ಇಷ್ಟವಾಗಿದ್ದರೆ ಈ ಎಲ್ಲಾ ಪ್ರಯೋಜನಗಳನ್ನು ಕಾಲ್ಗೇಟ್ ಟೂತ್ ಪೌಡರ್‌ನಿಂದಲೂ ಪಡೆಯಿರಿ...ಒಂದು ಡಬ್ಬಿ ಹಲವು ತಿಂಗಳುಗಳವರೆಗೆ ಸಾಕಾಗುವುದು !

ಏಕೆಂದರೆ : **ಕಾಲ್ಗೇಟ್ ಡೆಂಟಲ್ ಕ್ರೀಮ್‌**ನೊಂದಿಗೆ ಒಮ್ಮೆ ಹಲ್ಲುಜ್ಜುವುದರಿಂದ **ಬಾಯಿಯಲ್ಲಿ** ದುರ್ಗಂಧವನ್ನುಂಟುಮಾಡುವ **ಹಾಗೂ ಹಲ್ಲುಗಳನ್ನು ಕ್ಷಯಿಸುವ ಶೇಕಡ 85ರಷ್ಟು** ಕ್ರಿಮಿಗಳು ನಾಶವಾಗುತ್ತವೆ

ಊಟವಾದೊಡನೆ ಕಾಲ್ಗೇಟ್‌ನಿಂದ ಹಲ್ಲುಜ್ಜುವುದರಿಂದ ದಂತಮಂಜನಗಳ ಇತಿಹಾಸದಲ್ಲೇ ಹಿಂದೆಂದೂ ಆಗದಷ್ಟು ಅಧಿಕ ಜನರ ದಂತಕ್ಷಯವನ್ನು ಅಧಿಕ ಪ್ರಮಾಣದಲ್ಲಿ ತಡೆಗಟ್ಟಲು ಸಾಧ್ಯವಾಗುತ್ತದೆ. ಇದಲ್ಲದೆ ಕಾಲ್ಗೇಟ್‌ನಿಂದ 10 ರಲ್ಲಿ 7 ಸಂದರ್ಭಗಳಲ್ಲಿ ಬಾಯಿಯ ದುರ್ಗಂಧವು ಕೂಡಲೇ ನಿವಾರಿಸಲ್ಪಡುತ್ತದೆ. ಈ ಎರಡು ಪ್ರಮಾಣಗಳನ್ನು ಕಾಲ್ಗೇಟ್ ವೈಜ್ಞಾನಿಕ ಪರೀಕ್ಷೆಗಳ ಮುಖೇನ ಸಿದ್ಧಗೊಳಿಸಿರುತ್ತದೆ. ಕಾಲ್ಗೇಟಿಗೆ ಮಾತ್ರ ಈ ಪ್ರಮಾಣವಿದೆ!

ಊಟವಾದ ಮೇಲೆ ಬರೇ ಬಾಯಿ ಮುಕ್ಕಳಿಸುವುದರಿಂದ ಪ್ರಯೋಜನವಾಗಲಾರದು ಪ್ರತಿ ಊಟದ ಮೇಲೆ ತಪ್ಪದೆ ನಿಮ್ಮ ಹಲ್ಲುಗಳನ್ನು ಕಾಲ್ಗೇಟಿನಿಂದ ಉಜ್ಜಿರಿ. ಇದರ ಪ್ರಬಲವಾದ, ಸಂದು ಸಂದುಗಳಿಗೆ ಒಳನುಗ್ಗುವ ನೊರೆಯು ಅಗೋಚರವಾದ ಹಲ್ಲುಗಳ ನಡುವಿನ ಸಂದುಗಳಿಗೆ ಹೊಕ್ಕು ನಿಮ್ಮ ಬಾಯಿಯ ದುರ್ಗಂಧಕ್ಕೂ, ಹಲ್ಲುಗಳ ಕ್ಷಯಿಸುವಿಕೆಗೂ ಕಾರಣವಾದ ಆ ಕೊಳೆಯುತ್ತಿರುವ ಆಹಾರ ಕಣಗಳನ್ನು ನಿವಾರಿಸಿ ಸ್ವಚ್ಛಗೊಳಿಸುವುದು




ಮಕ್ಕಳಿಗೆ ಕಾಲ್ಗೇಟಿನಿಂದ ಹಲ್ಲುಜ್ಜುವುದೆಂದರೆ ತುಂಬಾ ಪ್ರೀತಿ, ದೀರ್ಘಕಾಲ ಉಳಿಯುವ ಅದರ ನೆಚ್ಚಿನ ಪೆಪರ್‌ಮಿಂಟ್ ಸ್ವಾದವು ಇದರಲ್ಲಿ ಕೂಡಿರುತ್ತದೆ.

ಕಾಲ್ಗೇಟಿನಿಂದ ತಪ್ಪದೆ ಹಲ್ಲುಜ್ಜುವುದರಿಂದ

- ✔ ಬಾಯಿಯ ದುರ್ಗಂಧವು ನಿವಾರಿಸಲ್ಪಡುತ್ತದೆ
- ✔ ದಂತಕ್ಷಯವನ್ನು ವಿರೋಧಿಸಲಾಗುವುದು
- ✔ ಹಲ್ಲುಗಳು ಪರಿಶುಭ್ರವಾಗಿ ಉಳಿಯುವವು




ಬಾಯಿಯ ದುರ್ಗಂಧವನ್ನು ನಿವಾರಿಸಲು ಮತ್ತು ಹಲ್ಲುಗಳು ಶುಭ್ರವಾಗಿರಲು... ಹೆಚ್ಚಿಗೆ ಜನರು ಪ್ರಪಂಚದ ಇನ್ನಿತರ ಡೆಂಟಲ್ ಕ್ರೀಮ್‌ಗಳಿಗಿಂತ ಅಧಿಕವಾಗಿ ಕಾಲ್ಗೇಟನ್ನೇ ಕೊಂಡುಕೊಳ್ಳುತ್ತಾರೆ

ಕೇಳದೆ, ಒಂದು ದಿನ ಸಂಜೆಯ ಐದು ಗಂಟೆಗೆ, ವ್ಯವಸ್ಥಿತವಾಗಿ ಡ್ರೆಸ್ ಮಾಡಿಕೊಂಡು ನನ್ನ ಕೋಣೆಗೆ ಬಂದದ್ದನ್ನು ಕಂಡು ನನ್ನ ಆಶ್ಚರ್ಯಕ್ಕೆ ಅಂತಪಾರವಿಲ್ಲದಾಯಿತು. ನನ್ನದೋ ಮನೆಯ ಉಡಿಗೆ-ತೊಡಿಗೆ; ಮತ್ತೆಲ್ಲಾ ಅವ್ಯವಸ್ಥೆ. ಆದರೆ ಅತ್ತ ನನ್ನ ಲಕ್ಷ್ಯವಾದರೂ ಎಲ್ಲಿತ್ತು? ನಾನು ಸುಮ್ಮನೆ ನೋಡುತ್ತಿದ್ದೆ.

"ನನ್ನ ಡ್ರೆಸ್ ವ್ಯವಸ್ಥಿತವಾಗಿದೆ— ಅಲ್ಲವೆ?"

"ಹೌದು; ಮತ್ತೆ?"

"ಹೀಗೆ ಜನ ಯಾವಾಗ ಡ್ರೆಸ್ ಮಾಡುತ್ತಾರೆ?"

"ಇನ್ನೊಬ್ಬರ ಕೋಣೆಗೆ ದೌಡು ಹೊರಟಾಗ."

"ಕುಚೇಷ್ಟೆ ಮಾಡುವಷ್ಟು ನನ್ನ ಪ್ರಶ್ನೆಯೇನು ಕ್ಷುಲ್ಲಕವಲ್ಲ. ತಿರುಗಾಡಲು ಹೋಗಬೇಕೆಂದು ಬಂದದ್ದು ನಾನು. ಹೋಗೋಣ. ಬಹಳ ದೂರ ಹೋಗೋಣ; ಬಹಳಷ್ಟು ಸುತ್ತಾಡಬೇಕೆನಿಸಿದೆ ನನಗೆ."

ಈ ವರೆಗಿನದೆಲ್ಲಾ ಸರಿಯಾಗಿತ್ತು. ಆದರೆ ಈಗ ನಾನು ಬಟ್ಟೆ ಬದಲಿಸಬೇಕಾಯಿತು. ಇಲ್ಲಿ ಹೇಗೆ ಬದಲಿಸಬೇಕು? ಬ್ರಹ್ಮಚಾರಿಗಳ ಕೋಣೆ. ಮುಚ್ಚುಮರೆ ಏನೂ ಇಲ್ಲ. ಇನ್ನೊಬ್ಬರ ಕೋಣೆಗೆ ಹೋಗಿ ಬದಲಿಸಬೇಕೆಂದರೆ ಅವರಿಗೆಲ್ಲಾ ಹೇಳಬೇಕಾಗುತ್ತದೆ. ಮತ್ತವರೂ ತಿರುಗಾಡಲು ಬರುತ್ತೇನೆಂದರೆ?

"ಡ್ರೆಸ್ ಮಾಡಿರಲ್ಲ."

"ಆದರೆ . ."

"ಆದರೆ ಏನು? ನಾನು ಇಲ್ಲೇ ಬಾಗಿಲಲ್ಲಿ-ಹೊರಗೆ ನೋಡುತ್ತ ನಿಲ್ಲುತ್ತೇನೆ. ಚಟ್ಟನೆ ಡ್ರೆಸ್ ಮಾಡಿರಿ— ನೋಡೋಣ!"

ಈ ನಿಸ್ಸಂಕೋಚ ಭಾವ — ಇದಾವ ರೀತಿ ಇದ್ದೀತು- ಅದೇ ನನ್ನ ತಿಳಿವಿಗೆ ನಿಲುಕದಾಗಿದೆ. ನನಗೆ ನನ್ನತನವೇ ಉಳಿಯಲಿಲ್ಲ. ಯಾವ ಬಟ್ಟೆ ಹಾಕಿಕೊಳ್ಳಬೇಕು?

"ಹಾಂ ಆಯಿತೇ ಡ್ರೆಸ್ಸು? ನೋಡೋಣ?"

ಕೊನೆಗೆ ಒಂದು ಉದ್ದದ ಜುಬ್ಬ, ಪಾಯಜಮಾ- ಇದ್ದ ಬಟ್ಟೆಯೇ ಅದು- ತಯಾರಾದೆ. ನಾವು ಹೊರಬಿದ್ದೆವು.

"ಆ ಮಾರ್ಬಲ್ ಹಾಲ್ ಇಲ್ಲಿಂದ ಚಂದ ಕಾಣುತ್ತದಲ್ಲವೆ?"

ಮೇಲೆ, ಸ್ವಲ್ಪ ಬಲ ಬದಿಗೆ ಸರಿದ ಶುಕ್ರನ ಧವಲ ತೇಜದ ಬೆಳುದಿಂಗಳು ಆ ಹಾಲುಗಲ್ಲಿನ ಮಹಲಿನ ಮೇಲೆ ಬೆಳಕನ್ನು ಸಿಂಪಡಿಸುತ್ತಿತ್ತು. ಅದರಿಂದ ಅದಕ್ಕೆ ನೈಜವಾದ ಶೋಭೆಯುಂಟಾಗಿತ್ತು.

"ಈ ಮೋಟರುಗಳು ಬಹಳ ಕೆಟ್ಟ. ಮೂಗು-ಬಾಯಿಗೆ ಎಷ್ಟು ಧೂಳು ಸೇರುತ್ತಿದೆ!"

ಒಪ್ಪಿಗೆ. ಏನು ಉತ್ತರ ಕೊಡಬೇಕು? ಮುಂದೆ ನೋಡೋಣ.

"ಇಲ್ಲಿಯ ಈ ಕಟ್ಟಡ ರಾಜಾ ಗೋಕುಲ ದಾಸನದಂತೆ. ವರ್ಷಕ್ಕೆ ಒಂದು ರೂಪಾಯಿ ಬಾಡಿಗೆಯಿಂದ ಸರಕಾರದವರು ಉಪಯೋಗಿಸುತ್ತಿದ್ದಾರೆ."

ಈ ಮಾಹಿತಿಯಾದರೂ ತಪ್ಪಾಗಿಲ್ಲ. ಆದರೆ ಸುಮ್ಮನೆ ಯಾಕೆ ತಡೆ ತರಬೇಕು?

"ಇಂದೇನು ಮೌನದ ದಿನವೇ— ಗಾಂಧೀ ಬಾಬಾ ನಿಮಗೆ?"

"ಛೇ— ಛೇ."

"ಆದರೆ ನಮ್ಮಂಥ ಪಾಮರರೊಡನೆ ಮಾತಾಡಲು ಏನು ತಕ್ಕೊಳ್ಳುವಿರಿ?"

ನನಗೆ ಹೆದರಿಕೆಯೆನಿಸಿತು. ಇನ್ನು ನಮ್ಮಿಬ್ಬರ ಮೂಲ ಸ್ವಭಾವ ಜಾಗ್ರತವಾಗುವ ಸಂಭವವಿದ್ದುದರಿಂದ ಪದ್ಧತಿಯಂತೆ ನಾನು ಮಾತು ತಪ್ಪಿಸಬೇಕೆಂದು ಯತ್ನಿಸುತ್ತಿದ್ದೆ.

"ಅಂದರೆ ಒಂದು ಶಬ್ದಕ್ಕೆ ಏನು ಬೆಲೆ?"

"ಛೀ- ಹೀಗೇಕೆ ಮಾತಾಡುತ್ತೀರಿ?"

"ಮತ್ತೆ ಹೇಗೆ ಮಾತಾಡಲಿ — ಹೇಳಿರಿ. ನಾವು ತಿರುಗಾಡಲು ಹೊರಟಿದ್ದೇವೆ. ಉಲ್ಲಾಸ ಬೇಕು. ಅಲ್ಲದೆ ನಾನು ಬೇಕಾಗಿ ಬಂದದ್ದಲ್ಲವೆ?"

ಈಗ ಖಚಿತವಾಯಿತು - ಜಗಳಾಟದ ಸಂಭವವಿಲ್ಲ. ಮಾತಾಡಲು ಏನೊಂದೂ ಆತಂಕ

ವಿಲ್ಲ. ಏನು ಮಾತಾಡುವುದೆಂದು ನಾನು ಸ್ವಲ್ಪ ವಿಚಾರ ಮಾಡಿದೆ. ಆದರೆ—

ಆದರೆ ನೀರು ಕುಡಿಯಲು ಇಳಿದ ಪ್ರವಾಸಿಕನಿಗಾಗಿ ಉಗಿಬಂಡಿ ನಿಲ್ಲುವುದಿಲ್ಲ!

"ಒಂದು ಮಾತು ಹೇಳಲೆ ?"

"ಅವಶ್ಯ ಹೇಳಿರಿ. ಹೀಗೇಕೆ ಕೇಳುತ್ತಿರಿ?"

"ಅದಲ್ಲ— ನಿಮಗೆ ಸೇರುತ್ತದೆಂದು ಹೇಳುತ್ತೇನೆ."

"ಹೇಳಿರಿ."

"ಇಂದು ಬೆಳಿಗ್ಗೆ ಎದ್ದೆ. ತೀರ ನಸುಕಿನಲ್ಲಿ ನಿಮ್ಮ ಆ ಪ್ರೀತಿಯ ಬೆಳುದಿಂಗಳು ನೋಡಿದೆ. ನೀವು ಹೇಳುವಂತೆಯೇ ನಿಮಗನಿಸುವುದಲ್ಲವೆ ? ನನಗೆ ಭಾಸವಾದದ್ದು — ಎಲ್ಲಿಂದಲೋ ಸಣ್ಣ ಸಣ್ಣ ಹೂವು ಬೀಳುತ್ತಿವೆ- ತೀರಾ ಹತ್ತಿರದಿಂದ -ಬಿಡಿಸಿಕೊಳ್ಳುವಂತೆ . . ."

ಅವಳ ಆ ತನ್ಮಯತೆ! ಅವಳಷ್ಟೆ ಆನಂದವಾಯಿತು ನನಗೆ. ನಮ್ಮ ಹವ್ಯಾಸವನ್ನು ಯಾರಾದರೂ ಸ್ವಾಗತಿಸಿದರೆ ಆನಂದ ಇಮ್ಮಡಿಯಾಗುತ್ತದೆ

"ನೀವು ಒಂದೂ ಮಾತಾಡುವುದಿಲ್ಲ."

"ಏನು ಮಾತಾಡುವುದು ?"

"ಆಗಲಿ-ಏನೂ ಮಾತಾಡಬೇಡಿರಿ ನೀವು-"

"ಛೀ—ಹಾಗಲ್ಲ."

"ಇನ್ನೊಂದು ಮಾತು ಹೇಳಲೆ ?"

"ಹೇಳಿರಿ. ಇಂದು ಬಹಳ ಮಾತು ಹೇಳುವುದಿದೆಯೆಂದು ಕಾಣುತ್ತದೆ."

"ಆಯಿತು, ಹೇಳುವುದಿಲ್ಲ."

ಇದು ಹುಸಿ ಸೆಡವು; ಇದು ಅಕಾರಣ ಲೋಭ; ಇದೊಂದು ವಿಲಕ್ಷಣ ಪ್ರವೃತ್ತಿ; ಇದೊಂದು ಬಗೆಯ ಹುರಹುರು; ಉಲಕೋಚಿತನ. ನನಗಿದರ ಅರ್ಥವೇ ಆಗದಾಯಿತು. ನಾವು ಮರಳಿ ಬರಲು ತಿರುಗಿಕೊಂಡಿದ್ದೆವು.

"ಹೇಳಿರಲ್ಲ-ನಿಮ್ಮ ಆ ಇನ್ನೊಂದು ಮಾತು."

"ನನ್ನ ಬಟ್ಟೆ ನೋಡಿದ್ದೀರಾ, ಇಂದು ನೀವು?"

"ಅದರಲ್ಲೇನು ವಿಶೇಷವಿದೆ ?"

"ಉಂಹೂ—ನಾನು ಹೇಳುವುದಿಲ್ಲ."

"ಅರೆ! ಇದೆಲ್ಲಾ ಹಿಂದುಸ್ತಾನದಲ್ಲೇ ಆದದ್ದು."

"ಅದೇ—ಹೌದು. ನನ್ನ ನಿತ್ಯದ ವೇಷವಾದರೆ ನಿಮಗೆ ಹುದುಗಿಕೊಂಡಂತಾದೀತು; ಸಂಕೋಚವಾದೀತು—ಎಂದಿನಂತೆ ನಿಮಗೆ ಮಾತೇ ಹೊರಡಲಿಕ್ಕಿಲ್ಲ. ಬಹುಶಃ ಇಂದು ನೀವು ನನ್ನೊಡನೆ ಬರುತ್ತಿದ್ದಿಲ್ಲವೇನೋ ಅಲ್ಲವೆ ?"

"ಛೀ— ಆದರೆ ನೀವು ಯಾಕೆ ಈ ಡ್ರೆಸ್ ಮಾಡಿದಿರಿ ?"

"ಯಾಕೆ? ಸರಿಯೆನಿಸಲಿಲ್ಲವೇ- ನಿಮಗೆ ನಾನಿದನ್ನು ಉಟ್ಟದ್ದು ?"

"ಹಾಗೇನಲ್ಲ. ನನ್ನ ಸಮಾಧಾನ ವ್ಯಕ್ತಮಾಡಲು ನನಗೆ ಬರುವುದಿಲ್ಲ. ಅದು ಮನಸ್ಸಿನ ಸಮಾಧಾನ. ಅದನ್ನು ತೋರಿಸುವುದಾದರೂ ಹೇಗೆ ? ಮನಸ್ಸನ್ನು ತೆರೆಯಲು ಬಾರದು. ನಾನು ಕೃತಜ್ಞತೆಯನ್ನು ತೋರಿಸಿದರೆ ? ಹಾಗೆ ಮಾಡಲೆ ?"

"ಬೇಡ."

"ಅಂದರೆ ?"

"ಅಂದರೆ ನನಗದು ಬೇಡ."

"ಇದರ ಅರ್ಥವೇನು ?"

"ಇದರ ಅರ್ಥ ಸರಳವಾಗಿದೆ. ನಿಮಗೆ ಕೃತಜ್ಞತೆಯೆನಿಸಿತು. ನನಗದು ಬೇಡವಾಗಿದೆ. ನಿಮಗೆ ಆನಂದವೆನಿಸಿತೇನು ? ನನಗದು ಬೇಕಾದದ್ದು. ನಿಮಗೆ ಸರಿ ಕಾಣಬೇಕು, ಆನಂದವೆನಿಸಬೇಕು ಎಂದು..."

"ಆನಂದ ! ನನಗೆ ?"

ನನಗರಿಯದಂತೆ ನನ್ನ ಮನಸ್ಸು ಅರಳಿದಂತೆನಿಸಿತು. ಅದೇಕೋ ತಿಳಿಯದು. ಹೇಗೆಂದೂ ಹೇಳಲಾರೆ. ನನ್ನ ಆನಂದಕ್ಕಾಗಿ ಈ ಲೀಲಾ ದೇಶಪಾಂಡೆ ಧಡಪಡಿಸುವಳೆ ? ಸೌ. ಲೀಲಾ ಪ್ರಯತ್ನಿಸುವಳೆ ?

ಕಾಲೇಜು ಹತ್ತಿರವಾಗಿತ್ತು. ದೀಪಗಳು ಕಾಣಹತ್ತಿದವು. ರಸ್ತೆ ಶಾಂತವಾಗಿತ್ತು. ಧೂಳು ಕಡಿಮೆಯಾಗಿತ್ತು. ಹೋಗುವ ಜನ ಭಾರವಾದ ಹೆಜ್ಜೆಯಿಡುತ್ತ ಸಾಗಿದ್ದರು. ಹಕ್ಕಿಗಳು

ಮಲಗಿ ಬಿಟ್ಟಿದ್ದವು. ಬಾವಲಿಗಳು ಫಡಫಡಿಸುತ್ತ ಚಿಲಿಪಿಲಿಗುಟ್ಟುತ್ತ ಭರಭರನೆ ಅತ್ತಿತ್ತ ಸುತ್ತು ಹಾಕುತ್ತಿದ್ದವು. ಸಣ್ಣ ಸಣ್ಣ ದೀಪಗಳು ರಸ್ತೆಯಲ್ಲಿ ಗಸ್ತು ತಿರುಗುತ್ತಿದ್ದವು. ನಿರಾಶೆಯಿಂದ ದಣಿದ ಜನಕ್ಕೆ ಅದೇ ಒಂದು ಆಸರವೆನಿಸಿತ್ತು.

ಇನ್ನೇನು ಕಾಲೇಜು ಬಂದು ಬಿಡುತ್ತದೆ. ಈ ಹುರುಹುರು ಹಾಗೇ ಉಳಿಯುತ್ತದೆ. ಆ ಮರ ಬಂತು. ಇಲ್ಲಿಂದ ನಮ್ಮ ರಸ್ತೆ ಬೇರೆಯಾಗಬೇಕು. ನನಗೆ ತಡೆಯದಾಯಿತು.

"ಒಂದು ಪ್ರಶ್ನೆ ಕೇಳಲೆ ?"

"ಆಗಲಿ. ಇಂದೇಕೋ ನನ್ನ ಅನುಕರಣವೇ ನಡೆದಿದೆಯಲ್ಲ!"

"ಹಾಗೇನಲ್ಲ. ಆಗಳೆ ನೀವಂದಿರಲ್ಲ—ನನ್ನ ಆನಂದ...ನನ್ನ ಆನಂದದ ಬಗ್ಗೆ ನಿಮಗೆ ಪರವೆಯೆನಿಸುವ ಕಾರಣವೇನು ?"

"ಅದು ನಿಮಗೆ ತಿಳಿಯಲಾರದು."

"ತಿಳಿದೀತು; ಹೇಳಿರಿ."

"ನಿಮಗೆಲ್ಲಾ ವಿರಸವೆನಿಸೀತು."

"ಹೇಳದಿದ್ದರೂ ಹಾಗೆ ಆಗೇ ಆಗುತ್ತದೆ."

ಅವಳು ಶಾಂತಳಾಗಿ ನಿಂತಿದ್ದಳು. ಸುತ್ತುಮುತ್ತು ಪಸರಿಸಿದ ಕತ್ತಲೆ ಸರಿಬರಲಿಲ್ಲ. ಒಂದು ಕನಸು ಕಣ್ಣೆದುರು ಸರಿದು ಕರಗಿ ಹೋಗಬೇಕು. ಹಿಂಜಿದ ಹೊಗೆಯ ಮೋಡ ನೋಡನೋಡುವಂತೆಯೇ ಬದಿಗೆ ಸರಿಯಬೇಕು. ಮತ್ತೆ ಕಣ್ಣ ಮೇಲೆ ಯಾವುದಾದರೂ ಒಂದು ತೆರೆ ಮೆಲ್ಲನೆ ಆವರಿಸಿ ಶ್ವಾಸ ಮಂದಮಂದವಾಗಬೇಕು—

ಹೀಗೆ ನಿಂತುಕೊಂಡಿರುವುದು ನನಗೆ ಪ್ರಶಸ್ತವೆನ್ನಿಸಲಿಲ್ಲ.

"ಹೂಂ—ಹೇಳಿರಲ್ಲ."

"ಮತ್ತೇನಲ್ಲ. ಇಂದು ನಿಮ್ಮ ವಿನೋದ ಮಾಡಬೇಕೆಂದು ನಾನು ಮನಃಪೂರ್ವಕ ಯತ್ನಿಸಿದೆ. ನನ್ನ ಸ್ವಭಾವ ನಿಮಗೆ ಮೊದಲಿನಿಂದ ಗೊತ್ತು. ನಾನು ಎಂಥವಳು ಎಂಬುದರ ಪೂರ್ಣ ಕಲ್ಪನೆಯೂ ನಿಮಗಿದೆ. ನನಗಿಂದು ಎಂಥ ವಿಚಿತ್ರವೆನಿಸಿತ್ತು—ಇನ್ನೂ ಹಾಗೆನಿಸುತ್ತಿದೆ. ನನ್ನ ಮನಸ್ಸಿಗೂ ನೆಮ್ಮದಿಯಿಲ್ಲ. ಈಗಲೂ ಇಲ್ಲಿಂದ ಹಾಸ್ಟೆಲ್ಲಿಗೆ ತಿರುಗಿ ಹೋಗಬೇಕೆನಿಸದಾಗಿದೆ. ಅಲ್ಲಾದರೂ ಏನು......"

ಆಗ ಇಲ್ಲ ಇಲ್ಲ ಎನ್ನುತ್ತ ಅವಳು ಹಾಗೇ ಮಾತಾಡುತ್ತಿದ್ದಳು.

"ಇಂದು ಅವರ ಪತ್ರ ಬರುವ ಕೊನೆಯ ದಿನ. ನಿನ್ನೆಯಿಂದ ನಾನು ಕಾಯುತ್ತಿದ್ದೇನೆ. ಆ ಪತ್ರ! ಅದನ್ನು ಓದಲು ನಾನು ಮನಸ್ಸಿನ ಸಿದ್ಧತೆ ಮಾಡಿಕೊಳ್ಳುತ್ತಿದ್ದೇನೆ. ಪುರುಷ ಸಹವಾಸದ ಉನ್ಮಾದವೆಂಥದು-ಆ ದರ್ಪದ ಬಯಕೆ ಎಂಥದು—ಎಂಬುದರ ಕಲ್ಪನೆ ನಿಮಗಿರಲಾರದು. ನನಗೆ, ಹೆಂಗಸರಾದ ನಮಗೇ ಅದು ಗೊತ್ತು. ಅವರ ಪತ್ರ ಬರುವ ದಿನ, ಅವರ ಆ ಅಮೂರ್ತ ಸಹವಾಸ—ನನ್ನ ಮನಸ್ಸು ತೀರ ಉತ್ಕಂಠಿತವಾಗಿತ್ತು. ಮತ್ತೆ ನಿನ್ನೆಯಿಂದ ಆ ಪತ್ರ ಬಂದಿಲ್ಲ. ನನ್ನೆಲ್ಲ ಯತ್ನ ವಿಫಲವಾಯಿತು. ಮನಸ್ಸಿಗೆ ನೆಮ್ಮದಿಯೇ ಬರಲೊಲ್ಲದು. ಕೊನೆಗೆ ಮತ್ತೆ ಅದೇ ಕಾರಣ ನನಗೆ ನನ್ನ ಗೆಳತಿಯರು ಇಂದು ಬೇಡವಾದರು. ಅಲ್ಲದೆ ನನಗೆ ನನ್ನದೇ ಆದ ಹೊಣೆಗಾರಿಕೆ ಇತ್ತು. ಅಂತಲೇ ನಾನು ನಿಮ್ಮೊಡನೆ ಬಂದೆ. ನಿಮ್ಮಲ್ಲಿ ನನಗೆ ವಿಶ್ವಾಸವಿತ್ತು. ಅದೇ ಕಾರಣ—ನೀವು ಮಾತಾಡಬೇಕು......"

ಅರ್ಧಕ್ಕೆಬಿಟ್ಟ ವಾಕ್ಯವನ್ನು ಅವಳು ಪೂರ್ತಿಗೊಳಿಸಲಿಲ್ಲ. ಅವಳು ಹೇಗೆ ಮಾತಾಡತೊಡಗಿದ್ದಳೋ ಹಾಗೇ ನಿಂತುಬಿಟ್ಟಳು. ಆದರೆ ಮಾತಿಲ್ಲದೆ ಭರಭರನೆ ಹೆಜ್ಜೆಹಾಕುತ್ತ ಹೊರಟುಹೋದಳು. ಮುಂದೆ ಹೇಳುವುದೇನೂ ಇರಲಿಕ್ಕಿಲ್ಲ—ಹೇಳಬೇಕೆಂದೆನಿಸಿರಲಾರದು ಅವಳಿಗೆ. ಕದಾಚಿತ್ ಹೇಳಿದ್ದು ಕೂಡ ದೌರ್ಬಲ್ಯ......

ಆದರವಳು ಕೂಡಲೆ ಹಿಂದಿರುಗಿದಳು!

"ಮತ್ತೊಂದು ಮಾತು ಹೇಳಬೇಕೆಂದು ಬಂದಿದ್ದೇನೆ. ಇದನ್ನೆಲ್ಲ ಮರೆತುಬಿಡಿರಿ. ಇದರ ಮೇಲೆ ಯಾವೊಂದು ಅಡಕಲು ಕಟ್ಟಬೇಡಿರಿ. ನೀವು ಸ್ವಲ್ಪ ಹೆಚ್ಚಿನ ಭಾವಜೀವಿ. ಅಂತಲೇ ಉದ್ದೇಶಪೂರ್ವಕವಾಗಿ ಹೇಳುತ್ತಿದ್ದೇನೆ. ಇದ

ರಲ್ಲೇನೂ ವಿಶೇಷವಿಲ್ಲ. ಅಧರ್ಮವಿಲ್ಲ—ದೋಷವೂ ಇಲ್ಲ. ನಾಳೆ ಅವರ ಪತ್ರ ಬಂದೇ ಬರುತ್ತದೆ.—ನಾನಾದರೂ ಅವರಿಗೆ ಹಾಗೆಯೇ ಸರಿಯಾಗಿ ಬರೆಯುತ್ತೇನೆ. ಹೋಗಿರಿ—ಹೋಗಿರಿ. ಇದನ್ನೆಲ್ಲಾ ಮರೆತು ಸ್ವಸ್ಥ ಮಲಗಿರಿ."

ನಾನು ಹೊರಡುವುದಕ್ಕೂ ಕಾಯದೆ, ಅವಳು ಹೇಗೆ ಬಂದಳೋ ಹಾಗೆಯೇ, ಝುಪ ಝುಪ ಹೊರಟುಬಿಟ್ಟಳು. ಆ ಬಿಳಿಯ—ಶುಭ್ರ ಪತ್ತಲ ಕತ್ತಲೆಯಲ್ಲಿ ದೂರದೂರ ಸರಿಯತೊಡಗಿತು. ನೀರಲ್ಲಿ ತೇಲಿಬಿಟ್ಟ ಸಂಜೆಯ ಪುಷ್ಪದೀಪ ತರಂಗಗಳ ಮೇಲೆ ತೇಲುತ್ತ ಮುಂದೆ ಮುಂದೆ ಹೋಗುವಂತೆ......

ನಾನು ಹಾಗೇ ನೋಡುತ್ತಿದ್ದೆ, ಏನಾಗಿತ್ತು? ಆಕಾಶದಲ್ಲಿ ದೂರ ದೂರ ಅಂತರಾಳದಲ್ಲಿ ಏರುತ್ತಿರುವ ಹದ್ದು ಆಹಾರದ ಆಸೆಗೆ ಎರಗಿ, ಸಿಕ್ಕಷ್ಟು ಕಚ್ಚಿಕೊಂಡು ಮತ್ತದೇ ಎತ್ತರಕ್ಕೆ—ಅದೇ ಅಂತರಾಳದಲ್ಲಿ ಏರಿ ಆಕಾಶದಲ್ಲಿ ಸ್ಥಾನ ಪಡೆಯುವಂತೆ—

ಮತ್ತೆ ನಾವು ನಮ್ಮದನ್ನೇನು ಕಳೆದುಕೊಂಡೆವೋ-ಎಂದು ನೋಡಿಕೊಳ್ಳುತ್ತಿರಬೇಕು.

—ಕೇವಲ ನೋಡಿಕೊಳ್ಳುತ್ತಿರಬೇಕು? *



## ನಾಯಿಗಳು ಕಚ್ಚುವುದು ಏತಕ್ಕೆ?

ನಾಯಿಗಳು ಕಚ್ಚುವುದು ಏತಕ್ಕೆ? ಪ್ರತೀಕಾರಕ್ಕಾಗಿಯೇ? ಅಥವಾ ಹಾಗೆ ಕಚ್ಚುವುದರಿಂದ ಅವಕ್ಕೆ ಆನಂದ ಉಂಟಾಗುವುದೇ? ಮುಂತಾದ ಪ್ರಶ್ನೆಗಳು ನಮ್ಮ ಮುಂದೆ ಬರಬಹುದು.

ವಾಷಿಂಗ್‌ಟನ್‌ನಲ್ಲಿನ ಸಾರ್ವಜನಿಕ ಆರೋಗ್ಯ ಇಲಾಖೆಯವರು ನಡೆಸಿದ ಸಂಶೋಧನೆಯಿಂದ ಕೆಳಕಂಡ ಅಂಶಗಳು ವ್ಯಕ್ತಪಟ್ಟವೆ: ನಾಯಿ ಕಚ್ಚುವುದು, ಅಂತರದ ಆಶಾಭಂಗದಿಂದಾದ ಪ್ರೇರಣೆಯಿಂದ ಮಾತ್ರ. ಹಾಗೆ ಕಚ್ಚುವ ಪ್ರಸಂಗಗಳಲ್ಲಿ ಮೂರರಲ್ಲಿ ಎರಡು ಭಾಗ ಯಾವ ತರಹದ ಹೊಟ್ಟೆಕಿಚ್ಚಿನಿಂದ ನಡೆದದಾಗಿರುವುದಿಲ್ಲ. ನಾಯಿಗಳು ಹೆಂಗಸರನ್ನು ಕಚ್ಚುವುದಕ್ಕಿಂತ ಗಂಡಸರನ್ನು ಕಚ್ಚುವುದು ಜಾಸ್ತಿ. ಹಾಗು ಹೆಣ್ಣು ನಾಯಿಗಳು ಗಂಡು ನಾಯಿಗಳಿಗಿಂತ ಹೆಚ್ಚಾಗಿ ಕಚ್ಚುವುವು. ಈ ನಾಯಿಗಳ ಕಚ್ಚುವಿಕೆಯಿಂದ ತಪ್ಪಿಸಿಕೊಳ್ಳುವ ಉಪಾಯವಿಲ್ಲವೆ? ಎಂದರೆ, ಈ ನಾಯಿಗಳು ಸಾಮಾನ್ಯವಾಗಿ ಜುಲೈ-ಆಗಸ್ಟ್ ತಿಂಗಳುಗಳಲ್ಲಿ ಕಚ್ಚುವುದು ಹೆಚ್ಚು. ಆಗ ಸ್ವಲ್ಪ ಹುಷಾರಾಗಿದ್ದರೆ ಸಾಕು ಎನ್ನುತ್ತಾರೆ ಸಂಶೋಧನೆ ನಡೆಸಿದ ತಜ್ಞರು.

'—ಇಂದಿರಾಪ್ರಿಯ'

## ವಿವಾಹ ಎಂದರೇನು?

ವಿವಾಹವು ದುಃಖವನ್ನು ಅರ್ಧ, ಸಂತೋಷವನ್ನು ಎರಡು ಪಟ್ಟು, ಖರ್ಚನ್ನು ಮೂರು ಪಟ್ಟು ಹೆಚ್ಚಿಸುತ್ತದೆ.

—ಗ್ರೀಕ್ ಗಾದೆ

ಪ್ರೇಮಕ್ಕೋಸ್ಕರ ವಿವಾಹವಾಗುವವನು ನಿಕೃಷ್ಟನಾದ ದುರ್ಬಲ ಮನುಷ್ಯ.

ಸಾಮ್ಯುಯಲ್ ಜಾನ್ಸನ್

ಹಣವಿಲ್ಲದವನು ಶ್ರೀಮಂತನ ಪುತ್ರಿಯನ್ನು ಮದುವೆಯಾದರೆ ಅವನು ಪಡೆಯುವುದು ಪತ್ನಿಯನ್ನಲ್ಲ, ಶಾಸಕಳನ್ನು.

—ವಾಲ್ಟೇರ್

ಸಂಗ್ರಹ: ಎಚ್. ಎಲ್. ಅಮರನಾಥ

# ಅನುಭವ ವಾಣಿ

ಬಳಲಿಕೆಯಾಗಲಿ, ರುಜೆಯಾಗಲಿ, ಶೋ-
ಕವೊ ಭಂಗವೊ ಇರಲಿ,
ನವವಯಸರ ಮಿಡಿಯೆದೆಯನು ಚಿವುಟುವೆ
ಮದನ, ಹೃದಯಹೀನ!

ಮನೆಯೊಲವನು ಜನದೊಲವನು ಸಂಪದ-
ದೊಲವ ಗೆಲವಿನೊಲವ,
ಮನದೊಲವಿನ ಸುಳಿಗುಂಡಿಗಿಡುಕೆ ಮಗು-
ಳನನು ಪಡೆಯಲಹುದೆ?

ಒಮ್ಮೆ ಕಪ್ಪದಿನ್ನೊಮ್ಮೆ ಬಿಳುಪು ಮಗು-
ಳೊಮ್ಮೆ ಕೆಂಪು; ಮತ್ತೆ
ಒಮ್ಮೆ ಸೋರುವುದು, ಸಾರ್ವುದೊಮ್ಮೆ; ಪುರು-
ಷರ ಮನ ಮುಗಿಲಂತೆ

ಜಗದೊಡೆಯನು ಸೃಜಿಸಿದ ವಸ್ತುಗಳಲಿ
ಹೃದಯಕೆ ದೊರೆಯಿಲ್ಲ;
ಆದರೊಳಗುದಿಸಿದ ದೇಹಕೆ ಮಿಕ್ಕಿದ
ಭಾಗ್ಯವೆ ಬೇರಿಲ್ಲ

ನೆಲಕೆ ನೀರು, ಮಾನಸಕೆ ನೇಹ, ಪಾ-
ವನ ಸಾಮಗ್ರಿಗಳು;
ಕೆಸರ, ಕಿಸುರ, ತೊಳೆತೊಳೆಯುತ ತಿಳಿತಿಳಿ-
ಯಾಗುತ ಹರಿಯುವವು

ರತ್ನ ಪರ್ವತದ ಗಾತ್ರವಿಹುದೆ? ಮ-
ಲ್ಲಿಗೆ ಮರುದಿನಕಿಹುದೆ?
ಉತ್ತಮವೆಲ್ಲ ಕಿರಿದು; ಯೌವನವಂ-
ತಿರೆ ದೂಷಿಸಬಹುದೆ?

ಮನಸು ಮೆಚ್ಚೆ ಮಾಡುವುದೆ ಧರ್ಮ, ಧಾ-
ರ್ಮಿಕನೆ ಧೈರ್ಯಶಾಲಿ;
ಜನಕೆ ಬೆಚ್ಚಿ ಮನಮುಚ್ಚಲು, ಬೇಲಿಯು
ಹೊಲದಿ ಮೇವ ಗೂಳಿ!

— ಶ್ರೀ ಸೇಡಿಯಾಪು ಕೃಷ್ಣ ಭಟ್ಟರ 'ತರುಣ ತಪಸಿ'ಯಿಂದ
ಸಂಗ್ರಹ : ನಾ. ರಾಮಚಂದ್ರ

# ಮೋಸಗಾರ ಆನೆ, ಧೀರೋದ್ಧತ ಹುಲಿ

ಶ್ರೀನಿಧಿ ಸಿದ್ಧಾಂತಾಲಂಕಾರ

ಅರಣ್ಯದ ಪ್ರಾಣಿಗಳ ಸ್ವಭಾವಕ್ಕೊಂದು ಅನುಭವಪೂರ್ಣ ಕೈದೀವಿಗೆ.

ಮಾರ್ಗಶೀರ್ಷದ ಚಳಿಗಾಲ. ಶಿವಾಲಿಕ ಕಣಿವೆಗಳು ಬಣ್ಣಬಣ್ಣದ ಹೂಗಳಿಂದಲಂಕೃತವಾಗಿವೆ. ಪ್ರಭಾತಕಾಲದ ಇಬ್ಬನಿ ಕಾಡನ್ನಾವರಿಸಿದೆ. ನಿಸರ್ಗವು ಅಲಂಕೃತ ಅವಗುಂಠನವತಿಯಂತೆ ರಮ್ಯವಾಗಿದೆ. ನಾನು ಮುಗ್ಧನಾಗಿ ಆ ದಟ್ಟ ಕಾಡಿನಲ್ಲಿ ಅಲೆಯುತ್ತಿದ್ದೆ. ಕಾಡು ಸುಂದರವಾಗಿತ್ತು. ಹಾಗೆಯೆ ಭೀಕರವೂ ಆಗಿತ್ತು. ಗೂಗೆಗಳು ಕೂಗುತ್ತಿದ್ದವು. ಮುಂದೆ-ಮುಂದೆ ಹೋದಂತೆ ಕಾಡು ದಟ್ಟವಾಗಿತ್ತು. ಪಕ್ಷಿಗಳೂ ಹೆದರಿದಂತೆ ಮೌನವಾಗಿ ಕೂತಿದ್ದವು.

ಆಗಲೇ ಕೇವಲ ಐದೇ ಅಡಿ ದೂರದಲ್ಲಿ ಬಿಸಿಲಲ್ಲಿ ತರಗೆಲೆಗಳ ಮೇಲೆ ಹೆಬ್ಬುಲಿಯೊಂದು ಮೈಚೆಲ್ಲಿ ನಿದ್ರಿಸಿದ್ದನ್ನು ನಾನು ನೋಡಿದೆ. ನನ್ನ ಎದೆ ಡವಡವನೆ ಬಡಿದುಕೊಳ್ಳತೊಡಗಿತು. ಹಿಂದೆ ಹೋಗಲಿಕ್ಕೂ ಆಗದೆ ಮುಂದೆಯೂ ಹೋಗಲಿಕ್ಕಾಗದೆ ನಾನು ದಿಙ್ಮೂಢನಾಗಿ ನಿಂತೆ.

ಹುಲಿ ಶಿವನ ಹಣೆಗಣ್ಣಿನಂತೆ ಒಂದು ಕಣ್ಣು ತೆರೆದು ನನ್ನನ್ನು ದಿಟ್ಟಿಸಿತು. ಇನ್ನು ನನಗೆ ಉಳಿಗಾಲವಿಲ್ಲೆಂದುಕೊಂಡು ಹಿಂದೆ ಹೊರಳಿದೆ. ಆದರೆ ಅದು ಎದ್ದಿತು. ಎಚ್ಚರಾಗಿ ಆಕಳಿಸಿ ನನ್ನ ಮೇಲೆ ಹಾರುವಂತೆ ನನ್ನತ್ತ ನೋಡತೊಡಗಿತು.

ಆದರದು ಕೂಡಲೆ ನನ್ನ ಕಡೆಗೆ ಬೆನ್ನು ತಿರುಗಿಸಿ ಮತ್ತೆ ಕಾಡಿನಲ್ಲಿ ಹೊರಟುಹೋಯಿತು. ನಾನು ಆಶ್ಚರ್ಯಗೊಂಡೆ. ಇಷ್ಟು ಹತ್ತಿರದಲ್ಲಿದ್ದ ನನ್ನನ್ನದು ಏಕೆ ಬಿಟ್ಟಿತು ಎಂದುಕೊಂಡೆ. ಆದರೆ ಹುಲಿ ಸಹಸಾ ಕಾರಣವಿಲ್ಲದೆ ಆಕ್ರಮಣ ಮಾಡುವಂಥ ಕ್ಷುಲ್ಲಕ ವೃತ್ತಿಯ ಪ್ರಾಣಿಯಲ್ಲ.

ಆದರೂ ಸಣ್ಣಕಾರಣಕ್ಕಾಗಿಯೂ ಆಕ್ರಮಣ ಮಾಡಬಲ್ಲ ಕ್ರೂರಿಯೇ ಅದು. ಇದರ ಕೋಪ ಕೆರಳಲು ಸಾಮಾನ್ಯವಾಗಿ ಎರಡೇ ಕಾರಣಗಳಿರುತ್ತವೆ. ಒಂದು, ಗುಂಡಿನೇಟು. ಇನ್ನೊಂದು, ಮಿಥುನ ಕಾಲದಲ್ಲಿ ತನ್ನ ಜೊತೆಯನ್ನು ಹುಡುಕುವಾಗ ಆತಂಕವಾದರೆ. ಉಳಿದ ಹೊತ್ತಿನಲ್ಲಿ ಇದು ಶಾಂತವಾಗಿರುತ್ತದೆ.



"ಧನುರ್ಗಂಬಗ" ಕೃಪೆ

ಇದು ಸಾಮಾನ್ಯ ನಿಯಮವಾದರೂ ಅಕಾ-ರಣ ಆಕ್ರಮಣ ಮಾಡುವ ಹುಲಿಗಳೂ ಇವೆ.

ಈ ಕಣಿವೆಗಳಲ್ಲಿ ಸಿದ್ಧಸ್ರೋತವೆಂಬ ಒಂದು ದಟ್ಟಡವಿ ಇದೆ. ಅಲ್ಲೊಂದು ದೊಡ್ಡ ಹಳೇ ಆಲದ ಮರವಿದೆ. ನಾನದನ್ನು ಆಲದ ಮರಗಳ ಹಿರಿಯಣ್ಣನೆಂದು ಕರೆಯುತ್ತೇನೆ. ಎಂಟು ಹತ್ತು ಅಡಿ ಎತ್ತರದ ದಿನ್ನೆಯ ಮೇಲೆ ಈ ಮರ ನಿಂತಿದೆ. ವರ್ಷಕ್ಕೆ ಒಮ್ಮೆಯಾದರೂ ಇಲ್ಲಿ ಬಂದು ಇದರ ಮೇಲೆ ಅಟ್ಟ ಕಟ್ಟಿಕೊಂಡು ಕೆಲ ದಿನಗಳಾದರೂ ನಾನು ತಪ್ಪದೇ ಇದ್ದು ಹೋಗುತ್ತೇನೆ. ಆ ದಿನವೂ ನಾನು ಇದೇ ಉದ್ದೇಶದಿಂದ ಹೊರಟಿದ್ದೆ. ಹಗಲಿಡೀ ಅಟ್ಟ ಕಟ್ಟುವುದರಲ್ಲಿ ಕಳೆದೆ. ಒಬ್ಬನೇ ಇದ್ದದ್ದರಿಂದ ಕಟ್ಟಲಿಕ್ಕೆ ಸ್ವಲ್ಪ ತಡವಾದರೂ ಸಾಯಂಕಾಲದೊಳಗೇ ಅದನ್ನು ಮುಗಿಸಿದೆ. ಒಂದೂವರೆ ಫೂಟಿನ ಕಟಾಂಜನ ಮಾಡಿಕೊಂಡೆ. ನಾಲ್ಕೈದು ಅಡಿ ಎತ್ತರಕ್ಕೆ ಚಪ್ಪರ ಬಿಗಿದುಕೊಂಡೆ. ಒಟ್ಟಿನಲ್ಲಿ ಅದು ಒಂದು ಕುಟೀರವೇ ಆಯಿತು.

ಎದುರಿಗೇ ಇದ್ದ ಹಳ್ಳದಲ್ಲಿ ಕೈಕಾಲು ಮುಖ ತೊಳೆದುಕೊಂಡು ಪಾತ್ರೆಯಲ್ಲಿ ನೀರು ತುಂಬಿಕೊಂಡು ಬಂದು ಕುಟೀರದಲ್ಲಿ ಕೂತೆ.

ಆ ದಿನ ನಿಶ್ಚಿಂತೆಯಿಂದ ಇರಲು ಮಾತ್ರ ಸಾಧ್ಯವಾಗಲಿಲ್ಲ. ಇನ್ನೂ ನಡುರಾತ್ರಿಯಾಗಿರಲಿಲ್ಲ. ಹಳ್ಳದಲ್ಲಿ ಯಾವುದೊ ಕಾಲಿನ ಸಪ್ಪಳ ಕೇಳಬಂತು. ಯಾರಾದರೂ ನನ್ನ ಕಡೆಗೇ ಸಾವಕಾಶ ಬರುತ್ತಿರಬೇಕೆನಿಸಿ ನಾನು ಎದ್ದು ಕೂತೆ. ಯಾರಿರಬೇಕೆಂದು ಯೋಚಿಸುವುದರಲ್ಲಿ ಅದು ತಾನೇ ಪ್ರತ್ಯಕ್ಷವಾಯಿತು. ಪ್ರಚಂಡ ಹುಲಿಯೊಂದು ಗುಡುಗಿ ಕಾಡನ್ನೆ ನಿನದಿಸಬಿಟ್ಟಿತು.

ನಾನು ಕಟ್ಟಿದ ಅಟ್ಟ ನೆಲದಿಂದ ೧೫ ಅಡಿ ಎತ್ತರವಿತ್ತಾದರೂ ಗಿಡ ನಿಂತ ದಿನ್ನೆಯಿಂದ ಎಂಟೇ ಅಡಿ ಎತ್ತರದಲ್ಲಿತ್ತು. ಆದ್ದರಿಂದ ಒಂದು ವೇಳೆ ಅದು ಗಿಡದಡಿಗೆ ಬಂದು ಮೇಲೆ ನೋಡಿ ನನ್ನನ್ನೇ ತನ್ನ ಆಹಾರ ಮಾಡುವ ಸಂಕಲ್ಪ ಮಾಡಿದರೆ ನನಗೆ ಉಳಿಗಾಲವಿರಲಿಲ್ಲ.

ಹುಲಿ ತಾನಾಗಿ ಯಾರ ಮೇಲೂ ಎರಗುವ ಪ್ರಾಣಿಯಲ್ಲವೆಂದು ನನಗೆ ಗೊತ್ತಿತ್ತಾದರೂ ಒಳಗೆ ಯಾರೊ 'ಎಲ್ಲ ಹುಲಿಗಳ ಬಗ್ಗೆ ಹಾಗೇ ತಿಳಿಯಲಾಗದು' ಎಂದು ಪದೇಪದೇ ಎಚ್ಚರಿಸುತ್ತಿದ್ದಂತೆ ಭಾಸವಾಯಿತು.

ಎದೆಬಡಿತ ಸುರುವಾಯಿತು. ಹೆದರುವ ಸಂದರ್ಭವೇ ಅದಾಗಿತ್ತು. ಏಕೆಂದರೆ ನನ್ನ ಹತ್ತಿರ ರ್‍ಯಾಫಲ್ಲಾಗಲಿ ದೀವಟಿಗೆಯಾಗಲಿ ಅಥವಾ ಬೇರಾವ ಸಾಧನವಾಗಲಿ ಇರಲಿಲ್ಲ. ನನ್ನ ಬಳಿ ಇದ್ದದ್ದು ಒಂದು ಸಣ್ಣ ಕೊಡಲಿ. ಆದರೆ ಅದರಿಂದ ಈ ದೈತ್ಯ ಪ್ರಾಣಿಯನ್ನು ಎದುರಿಸಲು ಹೇಗೆ ಆದೀತು? ಆದರೂ—"ಶಲ್ಯೋ ಜೇಷ್ಯತಿ ಪಾಂಡವಾನ್" ಎಂಬಂತೆ ನಾನು ನಂಬಿ ಸಾವಧಾನನಾಗಿ ಕೂತೆ.

ನನ್ನ ಪರೀಕ್ಷೆಯ ಕಾಲ ಸಮೀಪಿಸಲು ತಡವಾಗಲಿಲ್ಲ. ಹುಲಿ ಬಂದು ಗಿಡದಡಿಗೆ ನಿಂತಿತು. ಕೆಳಗೆ ನೋಡಿದೆ. ಕೆಂಡದಂಥ ಕಣ್ಣುಗಳು ನನ್ನನ್ನೇ ನೋಡುತ್ತಿದ್ದವು. ಇನ್ನೇನು ಹಾರಬಹುದು. ನನ್ನ ಕುಟೀರವನ್ನು ಬಿಟ್ಟು ನಾನು ಮೇಲಿನ ಎತ್ತರದ ಟೊಂಗೆಯನ್ನೇರಬೇಕೆಂದು ವಿಚಾರಮಾಡುತ್ತಿರುವಾಗಲೇ ಹುಲಿ ದಡುಮ್ಮನೆ ಜಗಿದು ನನ್ನ ಅಟ್ಟದ ಚಪ್ಪರದ ಮೇಲೆ ನಿಂತಿತು. ಅದರ ಭಾರಕ್ಕೆ ಚಪ್ಪರ ತತ್ತರಿಸಿತು.

ಹುಲಿಯ ಭಾರಕ್ಕೆ ಚಪ್ಪರ ಕುಸಿಯಬಹುದು. ಇನ್ನೇನು ಮಾಡಲಿ ಎಂದೆ. ಚಪ್ಪರವನ್ನೇ ಕೆಡವಿದರೆ? ಒಳಿತಾಗಬಹುದು. ಅಥವಾ ಕೆಡಕೂ ಆಗಬಹುದು. ಆದರೂ ಯೋಚಿಸಲು ಸಮಯವೆಲ್ಲಿ? ಹುಲಿ ಒಳಗೆ ಹಾರುವ ಮೊದಲೆ ನಾನು ಏನಾದರೂ ಮಾಡಬೇಕಿತ್ತು. ಕೊಡಲಿಯಿಂದ ಬಲವಾದ ಎಂಟು ಹತ್ತು ಪೆಟ್ಟುಗಳನ್ನು ಹಾಕಿ ಚಪ್ಪರವನ್ನು ಕೆಳಗೆ ಬೀಳುವಂತೆ ಮಾಡಿದೆ. ಚಪ್ಪರ ಕೆಳಗೆ ಬಿತ್ತು. ಆದರೆ ಈ ಆಕಸ್ಮಿಕದಿಂದ ಹುಲಿ ನನ್ನ ಮೇಲೆ ಆಕ್ರಮಿಸುವ ಬದಲು ತನ್ನ ಪ್ರಾಣಕ್ಕೆ ಅಪಾಯವಿರಬಹುದೇ ಎಂದು ಹೆದರಿ ಭೂಕಂಪವಾದರೆ

ಜನರು ಹೌಹಾರುವಂತೆ ಹೌಹಾರಿ ಓಡಿಹೋಯಿತು. ಮುರಿದ ಚಪ್ಪರದ ಬಿದಿರುಗಳು ಹಲವು ಹಾಸಿದ ಹುಲ್ಲಿನ ಮೇಲೆ, ಹಲವು ನನ್ನ ಮೇಲೆ ಇನ್ನು ಹಲವು ಕೆಳಗೆ ನೆಲದ ಮೇಲೆ ಬಿದ್ದವು. ಎದ್ದು ನೋಡಿದಾಗ ಹುಲಿಯ ಸುಳಿವೇ ಇಲ್ಲ.

ಪ್ರಸಂಗ ಅದ್ಭುತವೂ ಅಭೂತಪೂರ್ವವೂ ಆಗಿತ್ತಾದರೂ ಎಲ್ಲ ಹುಲಿಗಳು ತಾವಾಗಿ ಯಾರ ಮೈಮೇಲೂ ಏರಿಬರುವುದಿಲ್ಲೆಂಬ ಮಾತನ್ನೇ ಪೂರ್ಣ ನಿಶ್ಚಿಂತೆಯಿಂದ ನಂಬಲಾಗದೆಂಬುದು ಮಾತ್ರ ಸ್ಪಷ್ಟವಾಯಿತು.

ಆದರೂ ಈ ಪ್ರಾಣಿ (ನರಭಕ್ಷಕ ಹುಲಿಯನ್ನುಳಿದು) ಸಹಸಾ ಮೋಸದಿಂದ ಆಕ್ರಮಿಸುವುದಿಲ್ಲವೆಂಬುದು ನಿಜ. ಆಕ್ರಮಿಸುವ ಮೊದಲು ಗುಡುಗು ಹಾಕಿ ಅದು ಎಚ್ಚರಿಕೆ ಕೊಡುತ್ತದೆ. ಈ ಎಚ್ಚರಿಕೆಯಿಂದ ಆತ್ಮರಕ್ಷಣೆಯ ಏರ್ಪಾಟು ಮಾಡಿಕೊಳ್ಳಲು ಅವಕಾಶ ಕೊಟ್ಟಂತೆ ಆಗುವುದಿಲ್ಲವಾದರೂ ಧೈರ್ಯಗೆಡದೆ ಯುಕ್ತಿಯಿಂದ ಯತ್ನಿಸಿದರೆ ಆಗಲೂ ಮನುಷ್ಯ ಹುಲಿಯ ಆಕ್ರಮಣದಿಂದ ಯಶಸ್ವಿಯಾಗಿ ಪಾರಾಗಬಹುದು.

ಒಮ್ಮೆ ನಾನು ಗಂಗಾನದಿಯನ್ನು ದಾಟಿ ಕಾಡಿನತ್ತ ನಡೆದಿದ್ದೆ. ಹೊಳೆ ದಾಟಿದ ಮೇಲೆ ಆರೇಳು ಮೈಲುದ್ದದ ಬಯಲನ್ನು ದಾಟಬೇಕಾಗಿತ್ತು. ಈ ಬಯಲಿಗೆ ನಾನು ಹೊಸಬನು. ಬಯಲು ಉಸುಬು, ಮಣ್ಣು, ಕಲ್ಲುಗಳಿಂದ ಕೂಡಿದ ಗಂಗೆಯ ಪಾತ್ರದಂತಿತ್ತು. ಅಲ್ಲಲ್ಲಿ ಪೊದೆಗಳೂ ಕಾಡುಗಿಡಗಳೂ ಬೆಳೆದು ನಿಂತಿದ್ದವು. ಗಂಗೆಯ ತೀರದವರೆಗೆ ನನ್ನನ್ನು ಮುಟ್ಟಿಸಲು ಬಂದಿದ್ದ ಗ್ರಾಮಸ್ಥರು, "ಕಾಡಿನಲ್ಲಿ ಶಾಕಾಹಾರಿ ಹಾಗು ಮಾಂಸಾಹಾರಿ ಎರಡೂ ಬಗೆಯ ಪ್ರಾಣಿಗಳು ಬಹಳಷ್ಟು ಇವೆ. ಹಾಗೂ ಕಾಡು ಮುಳ್ಳುಗಳಿಂದ ತುಂಬಿದೆ ರಾತ್ರಿಯಲ್ಲಿ ಕಾಡಿನಲ್ಲಿ ಅಡ್ಡಾಡುವುದು ಅಪಾಯಕರ" ವೆಂದು ಹೇಳಿದ್ದರು. ಅದಕ್ಕೆ ನಾನು ಒಂದು ಒಣಗಿದ ಹಳ್ಳದಲ್ಲಿಳಿದು ನಡೆದೆ.

ಒಂದು ಮೈಲು ರಸ್ತೆಯೂ ಚೆನ್ನಾಗಿತ್ತು. ನಿಶ್ಚಿಂತೆಯಿಂದ ಹೋದೆ. ಮುಂದೆ ಕೊರಕಲು ಬಂತು. ಅದರ ಎರಡೂ ಮಗ್ಗಲಿಗೆ ದಟ್ಟವಾಗಿ ಮರಗಳು ಬೆಳೆದಿದ್ದವು; ನನ್ನ ಹಿಂದಿನಿಂದೇ ಯಾರದೋ ನಡಿಗೆಯ ಸದ್ದು ಕೇಳಿಸಿದಂತಾಯಿತು. ನಾನು ಹೆದರಿದೆ. ಹೊರಳಿ ಹಿಂದೆ ನೋಡಿದೆ. ಎರಡು ಉರಿಯುವ ಕಣ್ಣುಗಳು ಕಾಣಿಸಿದವು. ಇದು ಹುಲಿಯೇ ಇರಲಿಕ್ಕೆಬೇಕು. ಇನ್ನು ನಾನು ಪಾರಾಗಲು ಸಾಧ್ಯವಿರಲಿಲ್ಲ.

ಆದರೂ ಪೂರ್ಣ ಎದೆ ಕಳೆದುಕೊಳ್ಳಲಿಲ್ಲ. ಬೇಗನೆ ಹೆಗಲ ಮೇಲೆ ಹೊತ್ತಿದ್ದ ಟಾರ್ಚಿನ ಬಟನ್ ಒತ್ತಿದೆ. ಆದರದು ಹೊತ್ತಲಿಲ್ಲ. ಕೋಟಿನ ಜೇಬಿನಿಂದ ಕಡ್ಡಿಪೆಟ್ಟಿಗೆ ತೆಗೆದೆ. ಒಂದು ಕಡ್ಡಿ ಗೀರಿದೆ. ಗಾಳಿಗದು ಆರಿತು. ಸಂಕಟ ಸಮೀಪಿಸುತ್ತಲಿತ್ತು. ಕೋಟು ತೆಗೆದು ತಲೆಯ ಮೇಲೆ ಹೊತ್ತುಕೊಂಡು ಗಾಳಿ ಹತ್ತದಂತೆ ಆಸರೆ ಮಾಡಿಕೊಂಡು ಕಡ್ಡಿ ಗೀರಿದೆ. ಆದರೆ ಅಷ್ಟರಲ್ಲಿ ಆ ಕಾಲಿನ ಸಪ್ಪಳ ತೀರ ನನ್ನ ಹತ್ತಿರ ಬಂತು. ಹಿಂಸ್ರ ಪ್ರಾಣಿ ಗುಡುಗಿತು. ನನಗೆ ಅದರ ಕಾಲಿನ ಏಟು ಬಿತ್ತು. ನಾನು ನೆಲಕ್ಕುರುಳಿದೆ.

ಈ ವರೆಗೆ ಕಡ್ಡಿಯನ್ನು ಆರಿಸುತ್ತಿದ್ದ ಗಾಳಿ ಈಗ ಬೆಂಕಿಯನ್ನು ಹೆಚ್ಚಿಸಲು ಅನುಕೂಲವಾಯಿತು. ಬೆಂಕಿ ನನ್ನ ಕೋಟಿಗೇ ಹತ್ತಿತು. ಅದೂ ಒಳ್ಳೆಯದೇ ಆಯಿತೆಂದು ಕೋಟನ್ನು ಒಂದು ಟೊಂಗೆಗೆ ತೂಗಹಾಕಿ ಧೈರ್ಯದಿಂದ ನಿಂತೆ. ಈ ಬೆಂಕಿಯ ಹತ್ತಿರ ನಾನಿರುವ ವರೆಗೆ ನನಗೆ ಹುಲಿಯ ಭಯವಿಲ್ಲ ಎಂದುಕೊಂಡೆ.

ಆದರೂ ಈ ರಕ್ಷಣೆ ಬಹಳ ಹೊತ್ತಿನದಲ್ಲ. ಐದಾರು ನಿಮಿಷ ಆದೀತು ಅಷ್ಟೇ. ಆಮೇಲೆ? ಆಮೇಲೆ ಶರ್ಟು. ಅದಾದ ಮೇಲೆ ಬನಿಯನ್ನು. ಆಮೇಲೆ ನನ್ನ ಪ್ಯಾಂಟು. ಇಷ್ಟೆಲ್ಲ ಬಟ್ಟೆಗಳ ಬಲಿದಾನವಾದರೂ ಎಷ್ಟು ಕಾಲ ನನ್ನ ಕಾವಲು ಮಾಡೀತು? ಹನ್ನೆರಡು ಹದಿನೈದು ನಿಮಿಷ. ಆಮೇಲೆ?

ಒಂದು ಉಪಾಯ ಹೊಳೆಯಿತು. ಒಣ ಕಟ್ಟಿಗೆಗಳನ್ನು ತಂದು ಬೆಂಕಿಗೆ ಹಾಕುವುದು ಮತ್ತು ಬೆಂಕಿಯನ್ನು ಉರಿಸುತ್ತ ಕೂಡುವುದು.

ಸುತ್ತಮುತ್ತ ನೋಡಿದೆ. ಒಣ ಕಟ್ಟಿಗೆಗಳೇ ಇರಲಿಲ್ಲ. ಕಂಟಿ (ಪೊದೆ) ಗಳನ್ನು ಹೊತ್ತಿಸಿದರೂ ಕೆಲಸವಾಗುವುದು. ಆದರೆ ಮಾರ್ಗಶೀರ್ಷವಿದ್ದುದರಿಂದ ಅವೂ ಹಸಿಯಾಗಿದ್ದವು. ಕೋಟಿನ ರಕ್ಷಣೆಯ ಅವಧಿ ಮುಗಿಯುತ್ತ ಬಂತು. ಕಡೆಗೆ ಪಂಚತಂತ್ರಕಾರನಾದ ವಿಷ್ಣುಶರ್ಮನ 'ಯಃ ಪಲಾಯತಿ ಸ ಜೀವತಿ' ಎಂಬ ನೀತಿಯನ್ನು ಸ್ಮರಿಸಿಕೊಂಡು ದಾರಿ ಸಿಕ್ಕತ್ತ ಓಟಕಿತ್ತೆ. ಶರ್ಟನ್ನಂತೂ ತೆಗೆದು ಕೈಯಲ್ಲಿ ಹಿಡಿದಿದ್ದೆ. ಅದರ ಸರತಿ ಬಂದೊಡನೆಯೇ ಅದರ ಬಲಿದಾನ ಮಾಡಲಿದ್ದೆ.

ಉರಿಯುವ ಕೋಟನ್ನು ಕಟ್ಟಿಗೆಗೆ ಹಾಕಿಕೊಂಡು ನಾನು ಓಡುವಾಗ ಆ 'ಓಡುವ ಬೆಂಕಿ' ಯನ್ನು ಕಂಡು ಹುಲಿ ಏನು ಬಗೆಯಿತೋ—ಬಹುಶಃ ಹೆದರಿರಬೇಕು.—ನನ್ನ ಬೆನ್ನುಹತ್ತಿ ಬರಲಿಲ್ಲ. ಏನೇ ಆಗಲಿ, ಅಂತೂ ನನ್ನ ರಕ್ಷಣೆಯಾಯಿತು.

ಕೊನೆಯ ಗಳಿಗೆಯ ವರೆಗೂ ನಾನು ಧೈರ್ಯಗೆಡದೆ ಯುಕ್ತಿಗಳನ್ನು ಮಾಡುತ್ತಿದ್ದುದರಿಂದ ನನ್ನ ರಕ್ಷಣೆಯಾಯಿತೆಂಬುದು ಎಷ್ಟೇ ನಿಜವಿದ್ದರೂ ಹುಲಿ ತನ್ನ ಬರವಿನ ಎಚ್ಚರಿಕೆ ಕೊಡದೆಹೋಗಿದ್ದರೆ ನಾನಾದರೂ ಏನು ಮಾಡಬಹುದಿತ್ತು?

ಹುಲಿಯನ್ನು ಬಿಟ್ಟು ಸಹಸಾ ಉಳಿದೆಲ್ಲ ಮಾಂಸಾಹಾರಿ ಪ್ರಾಣಿಗಳು ಮನುಷ್ಯನ ಮೇಲೆ ಅಕಸ್ಮಾತ್ ಎರಗುತ್ತವೆ. ಕೆಲ ಶಾಕಾಹಾರಿಗಳೂ ಈ ರೀತಿ ಒಮ್ಮೆಲೆ ಆಕ್ರಮಣ ಮಾಡಿ ಮೋಸಮಾಡುತ್ತವೆ. ಆನೆ ಆ ಜಾತಿಯದು. ಅದು ಹುಲಿಯಂತೆ ಉದಾರನಾಗಿರದೆ ಮೋಸದಿಂದೇ ಮನುಷ್ಯನನ್ನು ಸದ್ದಿಲ್ಲದೆ ಬಂದು ಆಕ್ರಮಿಸುತ್ತದೆ.

ಒಮ್ಮೆ ನಾವು ಗಢವಾಲದ ರವಾಸನ ನದಿಯ ಕಾಡುಗಳಲ್ಲಿ ಅಡ್ಡಾಡುತ್ತಿದ್ದಾಗ ಇಂಥದೇ ಒಂದು ವಿಪತ್ತು ಬಂದೊದಗಿತು. ವೈಶಾಖಮಾಸವದು. ಕಾಡೆಲ್ಲ ಹೂಬಿಟ್ಟು ಮೆರೆಯುತ್ತಿತ್ತು. ಅಲ್ಲಲ್ಲಿ ಪಕ್ಷಿಗಳ ಸಂಗೀತ ಕೇಳಬರುತ್ತಿತ್ತು. ಆದರೆ ದಾರಿ ನಿರ್ಜನವಾಗಿತ್ತು. ಮನುಷ್ಯರ ಸುಳಿವೇ ಇಲ್ಲದ ಪ್ರದೇಶವಿದೆನ್ನಿಸುತ್ತಿತ್ತು. ಕಾಡಿನ ಸೊಬಗು ನಮ್ಮನ್ನು ಮುಂದೆ ಮುಂದೆ ಕರೆದೊಯ್ಯುತ್ತಿತ್ತು. ಐದು ಗಂಟೆಯ ಹೊತ್ತಿಗೆ ನಾವು ಒಂದು ಕೊರಕಲು ದಾರಿಗೆ ಬಂದೆವು. ಎರಡೂ ಕಡೆಗೆ ಎಂಟು ಹತ್ತು ಅಡಿ ಎತ್ತರದ ಕೊರಕಲು ದಿನ್ನೆಗಳು. ಮಳೆಗಾಲದಲ್ಲಿ ಇದು ತುಂಬಿ ಹರಿಯುತ್ತಿರಬಹುದು. ಈಗ ಅದು ಬರಿದಾಗಿತ್ತು. ಕೆಳಗೆಲ್ಲ ಉಸುಬು ಹರಡಿತ್ತು. ಅದರಲ್ಲಿ ಬೇಗ ಬೇಗ ನಡೆಯಲಿಕ್ಕೆ ಬರುತ್ತಿದ್ದಿಲ್ಲ. ಪರಿಣಾಮತಃ ಕೊರಕಲು ದಾಟುವ ಮುಂಚೆಯೆ ಕತ್ತಲಾಯಿತು. ಅಲ್ಲಿಯೇ ಒಂದು ಒಳ್ಳೇ ಜಾಗ ನೋಡಿಕೊಂಡು ವಸತಿ ಮಾಡಬೇಕಾಯಿತು. ನಾವು ನಿಂತ ಸ್ಥಳದ ಕೊರಕಲಿನ ಆಳ ೩೦ ಅಡಿ. ಮೇಲೆ ದಟ್ಟಡವಿ. ಹತ್ತಿರದಲ್ಲೇ



ನೂರು ಹೆಜ್ಜೆ ದೂರದಲ್ಲೊಂದು ನೀರಿನ ಕುಂಡ ವಿತ್ತು : ಅದು ಕುಡಿಯುವ ನೀರಿನದು. ಅಲ್ಲಿಯೇ ಹೋಗಿ ನಾವು ಊಟ ಮಾಡಿ ಮರಳಿ ನಮ್ಮ ವಸತಿಯ ಸ್ಥಳಕ್ಕೆ ಬಂದೆವು. ಸ್ವಲ್ಪ ಹೊತ್ತು ಹರಟೆ ಹೊಡೆದು ಒಬ್ಬೊಬ್ಬರಾಗಿ ಕಾವಲು ಮಾಡುವ ನಿರ್ಣಯ ಮಾಡಿ ಎಲ್ಲರೂ ಮಲಗಿದೆವು.

ಬೆಳಗಾಗುವ ವರೆಗೂ ಯಾವ ಆಪತ್ತೂ ಬರಲಿಲ್ಲ. ಆದರೆ ಮುಂಜಾನೆ ಕುಂಡದ ಹತ್ತಿರ ಹೋಗಿ ನೋಡಿದರೆ ಆನೆಯ ಹೆಜ್ಜೆಗಳು ಮೂಡಿದ್ದವು. ಅದೇ ಆಗ ಆನೆ ನೀರು ಕುಡಿದು ಬೇಕಾದಲ್ಲಿ ಕುಡಿಯಲೋ ಮೈಮೇಲೆ ಹಾಕಿಕೊಳ್ಳಲೋ ನೀರನ್ನು ಸೊಂಡಿಲಲ್ಲಿ ತುಂಬಿಕೊಂಡು ಹೋಗಿರಬೇಕು ಎಂದು ತೋರಿತು. ಅದು ಚಿಮುಕಿಸಿದ ನೀರು ಉಸುಬಿನಲ್ಲಿ ಬಿದ್ದಿತ್ತು; ಇನ್ನೂ ಆರಿರಲಿಲ್ಲ.

ಈ ಸಂಗತಿ ಅಷ್ಟೊಂದು ವಿಶೇಷವಲ್ಲದಿದ್ದರೂ ಮುಂದೆ ಹೋಗುವಾಗ ಎಚ್ಚರದಿಂದಿರಬೇಕಾದ್ದು ಮಾತ್ರ ಅಗತ್ಯವಿತ್ತು. ಏಕೆಂದರೆ ಈ ಆನೆ ಒಂಟಿಯಾಗಿ ತಿರುಗುವ ಮದವೇರಿದ ಸಲಗ ಎಂದು ತೋರುತ್ತಿತ್ತು. ಮುಂದೆ ನಡೆದಂತೆ ಕೊರಕಲು ಅಗಲವಾಗತೊಡಗಿತು. ಅಲ್ಲಲ್ಲಿ ಬಿದಿರ ಬೆಟ್ಟಗಳಿದ್ದವು. ಹಗಲೂ ಕೆಳಗೆ ಕತ್ತಲೆಯಾಗುವಂಥ ದಟ್ಟ ಪೊದೆಗಳಿದ್ದವು ನೂರು ಅಡಿ ದೂರದಲ್ಲೇ ಕೊರಕಲು ೪೫ ಅಂಶ ಕೋನ ಮಾಡಿ ಪೂರ್ವಕ್ಕೆ ತಿರುಗಿತ್ತು. ಈ ತಿರುಗುವ ಸ್ಥಳದಲ್ಲಿ ಪೊದೆ ದಟ್ಟವಾಗಿ ಬೆಳೆದಿವೆ. ಇದು ಭಯಂಕರ ಸ್ಥಳ.

ಎಲ್ಲಕ್ಕೂ ಮುಂದೆ ಶ್ಯಾಮನಿದ್ದ. ಅವನ ಹಿಂದೆ ನಾನಿದ್ದೆ. ನನ್ನ ಹಿಂದೆ ಶೇಖರ, ಬಿಪಿನ ಮತ್ತು ಕುಮಾರರಿದ್ದರು. ಸಾಲುಗಟ್ಟಿ ನಾವು ನಡೆದಿದ್ದೆವು. ಶ್ಯಾಮನಿಂದ ನಾನು ಹತ್ತೇ ಅಡಿ ದೂರವಿದ್ದೆ. ಆತ ಬೇಗನೆ ಸಾಗಿದ್ದ. ನಾನೂ ಅವನನ್ನು ತೀವ್ರವಾಗಿ ಹಿಂಬಾಲಿಸುತ್ತಿದ್ದೆ. ತಿರುವಿನ ಹತ್ತಿರ ಶ್ಯಾಮ ಹೋಗುತ್ತಲೆ ಪೊದೆಯೊಳಗಿಂದೊಂದು ಸೊಂಡಿಲು ಕರೀ ನಾಗರದಂತೆ ಹೊರಬಂದು ಚಾಚಿ ಇವನ ಮೇಲೆ ಚೆಲ್ಲಿತು.

ಕುಂಡದ ಹತ್ತಿರ ಆನೆಯ ಪದಚಿನ್ಹೆಗಳನ್ನು ನೋಡಿದಾಗಿಂದ ನನ್ನ ಎದೆ ಬಡಿದುಕೊಳ್ಳುತ್ತಿತ್ತು. ಆ ಪೊದೆಗಳನ್ನೇ ನೋಡುತ್ತ ನಡೆದಿದ್ದ ನನಗೇ ಆ ಸೊಂಡಿಲು ಪ್ರಥಮತಃ ಕಾಣಿಸಿತು. ಅದು ಕಾಣಿಸುತ್ತಲೇ ನಾನು ಕೂಗಿದೆ. "ಶ್ಯಾಮ, ಆನೆ ಬಂತು." ನನ್ನ ಎಚ್ಚರಿಕೆಯಿಂದ ಶ್ಯಾಮನು ಸಾವಧಾನನಾಗಿ ಹಿಂದೆ ಸರಿಯಲೆತ್ನಿಸಿದನಾದರೂ ಆನೆಯೂ ಅಷ್ಟೊತ್ತಿಗೆ ಪೊದೆಯನ್ನು ಸರಿಸಿ ಎದ್ದು ಅವನತ್ತ ಬರತೊಡಗಿತು.

ಒಣಗಿದ ಬಿದಿರಿನ ಎಲೆಗಳುದುರಿ ಜಾರಿಕೆಯಾಗಿತ್ತು. ಪೊದೆಗಳು ದಟ್ಟವಾಗಿದ್ದವು. ಇವುಗಳಿಂದ ಶ್ಯಾಮ ಭಾರೀ ವಿಪತ್ತಿಗೊಳಗಾಗಿದ್ದ. ಕಾಡಿನದೇ ಪ್ರಾಣಿಯಾದ ಆನೆಗೆ ಈ ಒಣ ಎಲೆಗಳ ಮೇಲೆ ಓಡುವ ಅಭ್ಯಾಸವಿದ್ದರೂ ಶ್ಯಾಮನಿಗೆ ಆ ಅಭ್ಯಾಸ ಇದ್ದಿಲ್ಲ. ಮೇಲಾಗಿ ಆತ



ಕ್ಯಾನ್ವಾಸ್ ಬೂಟು ಹಾಕಿಕೊಂಡಿದ್ದ. ಓಡುವುದರಲ್ಲಿ ಶ್ಯಾಮ ನಿಷ್ಣಾತನಾದರೂ ಆ ಜಾರಿಕೆಯ ಅಭ್ಯಾಸವಿಲ್ಲದ್ದರಿಂದ ಬಹು ತೊಂದರೆಗೊಳಗಾದ. ಆನೆಯ ಸೊಂಡಿಲಿನಿಂದ ತಪ್ಪಿಸಿಕೊಳ್ಳುವುದು ಅಸಾಧ್ಯವಾಗಿತ್ತು.

ಆಗ ನನಗೆ ನಡುವಿಗೆ ತೂಗುಹಾಕಿದ ಬಿಗುಲಿನ ನೆನಪಾಯಿತು. ಯಾವ ವಿಚಾರವನ್ನೂ ಮಾಡದೆ ನಾನು ಬಿಗುಲು ಊದತೊಡಗಿದೆ. ಇಡೀ ಕೊರಕಲೇ ಪ್ರತಿಧ್ವನಿಸಿತು.

ಬಿಗುಲು ಊದುವ ಕೇಳುವ ಎರಡೂ ಅನುಭವಗಳನ್ನು ಅನೇಕ ಬಾರಿ ನಾನು ಹೊಂದಿರುವೆನಾದರೂ ಅಂದಿನ ಬಿಗುಲಿನ ನಾದದ ಅದ್ಭುತತೆ ಮರೆಯಲಸಾಧ್ಯ. ನನ್ನ ಬಿಗುಲಿನ ಸ್ವರ ಜಯಜನಕವಾಗಿತ್ತು. ಅದರ ಪರಿಣಾಮವೂ ಒಳ್ಳೆಯದೇ ಆಯಿತು. ವೇಗದಿಂದ ಶ್ಯಾಮನ ಬೆನ್ನು ಹತ್ತಿದ್ದ ಆನೆ ಆ ಸ್ವರವನ್ನು ಕೇಳಿ ಚಿತ್ರವತ್ ಸ್ತಬ್ಧವಾಗಿ ನಿಂತುಬಿಟ್ಟಿತು. ಎಡಗಾಲನ್ನೆತ್ತಿ ಸೊಂಡಿಲನ್ನು ಮುಂದೆ ಚಾಚಿ ಗೌತಮನ ಇನ್ನೊಂದು ಶಾಪದಿಂದ ಕಲ್ಲಾದನೊ ಎಂಬಂತೆ ಆ ಗಜರಾಜನು ನಿಂತ ಆ ಶೈಲಿ ಇಂದಿಗೂ ನನ್ನ ಕಣ್ಮುಂದೆ ಅಚ್ಚಳಿಯದೆ ನಿಂತಂತಿದೆ. ಆ ಮುದ್ರೆಯಲ್ಲಿ ಅದರ ಫೋಟೊ ತೆಗೆಯಬಹುದಿತ್ತು. ಆ ರೀತಿ ಅದು ಕೇವಲ ಮೂರು ನಾಲ್ಕು ನಿಮಿಷ ಮಾತ್ರ ನಿಂತಿತ್ತು. ಆ ಮೇಲೆ ಸರಕ್ಕನೆ ಹಿಂದೆ ಹೊರಳಿ ಲಗುಬಗೆಯಿಂದ ಕೊರಕಲಿನೊಳಗಿಂದ ಮುಂದೆ ನಡೆಯಿತು.

ಅದು ಓಡಿಹೋಯಿತಾದರೂ ಪೂರ್ವಸೂಚನೆಯಿಲ್ಲದೆ ಮೋಸದಿಂದ ಒಮ್ಮೆಲೇ ಆ ರೀತಿ ಶ್ಯಾಮನನ್ನು ಆಕ್ರಮಿಸಿದ್ದು ಅಂಥ ಸರ್ವಮಾನ್ಯ ಶಕ್ತಿಶಾಲಿ ಪ್ರಾಣಿಗೆ ಭೂಷಣಾಸ್ಪದವೆ? *



## ಆರ್ಯನೆಂದರಾರು

ನ ವೈರಮುದ್ದೀಪಯತಿ ಪ್ರಶಾಂತಂ
ನ ದರ್ಪಮಾರೋಹತಿ ನಾಸ್ತಮೇತಿ ।
ನ ದುರ್ಗತೋಽಸ್ಮೀತಿ ಕರೋತ್ಯಕಾರ್ಯಂ
ತಮಾರ್ಯಶೀಲಂ ಪರಮಾಹುರಾರ್ಯಾಃ ॥

ಶಣಿದುಹೋದ ಹಗೆತನವನ್ನು ಪುನಃ ಕೆದಕದವನು,
ದರ್ಪವನ್ನಾಗಲಿ ಅತಿ ದೈನ್ಯವಾಗಲಿ ತೋರಿಸದವನು,
ಕಷ್ಟಕಾಲ ಬಂದರೂ ಅಕಾರ್ಯ ಮಾಡಲೊಲ್ಲದವನು—
ಅವನೇ ಆರ್ಯಶೀಲನೆಂದು ಆರ್ಯರು ಹೇಳುವರು.

* *

ನ ಸ್ವೇ ಸುಖೇ ವೈ ಕುರುತೇ ಪ್ರಹರ್ಷಂ
ನಾನ್ಯಸ್ಯ ದುಃಖೇ ಭವತಿ ಪ್ರಹೃಷ್ಟಃ ।
ದತ್ವಾ ಚ ಪಶ್ಚಾತ್ ಕುರುತೇ ನ ತಾಪಂ
ಸ ಕಥ್ಯತೇ ಸತ್ಪುರುಷಾರ್ಯಶೀಲಃ ॥

ಸ್ವಂತ ಸುಖದಲ್ಲೇ ಹರ್ಷಗೊಳ್ಳದವನು,
ಪರದುಃಖದಲ್ಲಿ ಉತ್ಸಾಹ ತಾಳದವನು,
ದಾನ ಕೊಟ್ಟು ಪಶ್ಚಾತ್ತಾಪಪಡದವನು,—
ಅವನೇ ಆರ್ಯಶೀಲ, ಅವನೆ ಸತ್ಪುರುಷ.

—ಮಹಾಭಾರತ

# ನಗೆಮಲ್ಲಿಗೆ

"ಅಮ್ಮ, ಬಿಳಿಯ ಕೋಳಿಗಿಂತಲೂ ಕಪ್ಪು ಕೋಳಿಗೆ ಶಕ್ತಿ ಜಾಸ್ತಿ," ಮಗ ತಾಯಿಗೆ ಹೇಳಿದ.

"ಹೇಗೆ?" ತಾಯಿ ಕೇಳಿದಳು.

"ಹೇಗೆಂದರೆ, ಕಪ್ಪು ಕೋಳಿ ಬಿಳಿಯ ಮೊಟ್ಟೆಯಿಡುತ್ತದೆ, ಆದರೆ ಬಿಳಿಯ ಕೋಳಿ ಕಪ್ಪು ಮೊಟ್ಟೆಯಿಡುತ್ತದೋ?"

—ಡಿ. ಕೆ. ಪದ್ಮಾ

*

"ಓ! ನೋಡು, ಜಗದೀಶ ಎಲ್ಲ ವಿಷಯ ಗಳಲ್ಲಿ ಪಾಸಾಗಿದ್ದಾನೆ. ಆದರೆ ಇತಿಹಾಸ ವೊಂದರಲ್ಲಿ ನಪಾಸಾಗಿದ್ದಾನೆ."

"ಪಾಪ, ಅದರಲ್ಲಿ ಜಗದೀಶನದೇನೂ ತಪ್ಪಿಲ್ಲ. ಆತ ಹುಟ್ಟುವುದಕ್ಕಿಂತ ೧೦೦೦ ವರ್ಷಗಳ ಹಿಂದಿನ ಸಂಗತಿಗಳ ಬಗ್ಗೆ ಕೇಳಿದರೆ ಅವನಾದರೂ ಹೇಗೆ ಹೇಳಿಯಾನು?"

—ವಿ. ಜೆ. ಪ್ಯಾಟ

*

ಸಿನೇಮಾ ಮತ್ತು ಜೀವನದಲ್ಲಿ ಇರುವ ಅಂತರವೆಂದರೆ, ಸಿನೇಮಾದಲ್ಲಿ ಜಗಳ-ತಂಟೆ-ಕಷ್ಟಗಳೆಲ್ಲ ಮುಗಿದ ಮೇಲೆ ಲಗ್ನವಾಗುತ್ತದೆ. ಆದರೆ ನಿಜ ಜೀವನದಲ್ಲಿ ಲಗ್ನವಾದ ಮೇಲೆ ಇವೆಲ್ಲ ಆರಂಭವಾಗುತ್ತವೆ.

*

ಫಾಯರ್ ಸ್ಟೇಶನ್ನಿನಲ್ಲಿ ಒಮ್ಮೆಲೇ ಫೋನ್ ಗಂಟೆ ಬಾರಿಸಿತು. ಅಗ್ನಿಶಾಮಕ ದಲದವ ಎತ್ತಿದಾಗ ಕೂಗು ಕೇಳಿಸಿತು: "ಬೆಂಕಿ! ಬೆಂಕಿ!"

ಫೋನ್ ಎತ್ತಿದವ: "ಎಲ್ಲಿ? ಎಲ್ಲಿ?"

"ನನ್ನ ಮನೆಯಲ್ಲಿ..."

"ಅದು ಹೌದು; ಆದರೆ ಬೆಂಕಿ ಎಲ್ಲಿ ಎಂದು ನಾನು ಕೇಳುತ್ತೇನೆ."

"ನನ....ನ..ನ್ನ... ಅಡುಗೆ, ಅಡುಗೆ ಮನೆಯಲ್ಲಿ..."

"ಹೌದು; ಆದರೆ ನಿಮ್ಮ ಮನೆಗೆ ಹೇಗೆ ಬರಲೆಂದು ನಾನು ಕೇಳುತ್ತೇನೆ?"

"ಅರೆ! ನಿಮ್ಮಲ್ಲಿ ಫಾಯರ್ ಎಂಜಿನ್ ಗಳಿಲ್ಲವೆ ಬರಲಿಕ್ಕೆ ಮತ್ತೆ?"

— ಕೆ. ರಮೇಶ ಪೈ

*

ಧನಿಕ ವ್ಯಾಪಾರಿಯೊಬ್ಬ ರಾತ್ರಿ ತಡವಾಗಿ ಮನೆಗೆ ಹೊರಟದ್ದಾಗ ಕತ್ತಲಿನ ನಿರ್ಜನ ಪ್ರದೇಶದಲ್ಲಿ ಧಾಂಡಿಗರಿಬ್ಬರು ಅವನಿಗೆದುರಾದರು. ಅವರ ಭೀಕರ ಆಕೃತಿ ಕಂಡು ಅವರು ಕಳ್ಳರೇ ಎಂದು ವ್ಯಾಪಾರಿಗೆ ಮನವರಿಕೆಯಾಯಿತು. ಅವರಿಬ್ಬರಲ್ಲಿ ದೊಡ್ಡವನಾಗಿದ್ದಾತ ಮುಂದೆ ಬಂದು ವ್ಯಾಪಾರಿಯೊಡನೆ "ದಯವಿಟ್ಟು ಒಂದಾಣೆ ಕಡ ಕೊಡುತ್ತೀರಾ?" ಎಂದು ಯಾಚಿಸಿದ. ವಿಸ್ಮಿತನಾದ ವ್ಯಾಪಾರಿ ಕಿಸೆಯಿಂದ ಒಂದಾಣೆಯನ್ನು ತೆಗೆದುಕೊಡುತ್ತಾ "ಒಂದಾಣೆ ಏಕೆ?" ಎಂದು ಕೇಳಿದ.

ಆ ಧಾಂಡಿಗ ಉತ್ತರಿಸಿದ— "ಮತ್ತೇಕಿಲ್ಲ! ನಿಮ್ಮ ಉಂಗುರ ಯಾರಿಗೆ, ನಿಮ್ಮ ಕೈಯಲ್ಲಿರುವ ಚೀಲ ಯಾರಿಗೆ ಎಂದು ನಿಶ್ಚಯಿಸಲು 'ಟಾಸ್' ಹಾಕಲಿಕ್ಕಾಗಿ ಬೇಕಿತ್ತು!"

—ಯು. ನಾಗೇಶರಾವ್

*

ಆ ಒಕ್ಕಲಗಿತ್ತಿ ಕಿರಾಣಿ ಅಂಗಡಿಕಾರನಿಗೆ ಆಗಾಗ್ಗೆ ಬೆಣ್ಣೆ ಮಾರುತ್ತಾ ಇದ್ದಳು. ಒಮ್ಮೆ ಅಂಗಡಿಯವನ ಆಳೊಬ್ಬ ಅವಳಲ್ಲಿಗೆ ಬಂದು, "ತಾಯೀ, ನೀನು ನಿನ್ನೆ ಕೊಟ್ಟ ಅರ್ಧ ಪೌಂಡ್ ಬೆಣ್ಣೆ ತೂಕದಲ್ಲಿ ಬಹಳ ಕಮ್ಮಿ ಇತ್ತೆಂದು ನಿನಗೆ ತಿಳಿಸಲು

ನಮ್ಮ ಯಜಮಾನರು ಹೇಳಿದ್ದಾರೆ" ಎಂದನು.

ಅವಳೆಂದಳು: "ಅದು ಹೇಗೆ ಕಮ್ಮಿ ಯಾದೀತು? ನಾನು ನಿಮ್ಮಲ್ಲಿಂದ ನಿನ್ನೆ ಬೆಳಿಗ್ಗೆ ಅರ್ಧ ಪೌಂಡ್ ಸಕ್ಕರೆ ತಂದಿದ್ದೆ. ನನ್ನ ಹತ್ತಿರವಿದ್ದ ಅರ್ಧ ಪೌಂಡ್ ತೂಕದ ಕಲ್ಲು ಎಷ್ಟು ಹುಡುಕಾಡಿದರೂ ಸಿಗಲಿಲ್ಲ ವಾದ್ದರಿಂದ ಎಡ ತಟ್ಟೆಯಲ್ಲಿ ಆ ಸಕ್ಕರೆಯ ಪೊಟ್ಟಣವನ್ನೇ ಇರಿಸಿ ತೂಗಿ ಕೊಟ್ಟಿದ್ದೆ-ನಲ್ಲಾ!"

—ಯು. ಎಸ್. ಶೆಣೈ

*

"ನಿಮ್ಮ ಬಂಗಲೆಯಲ್ಲಿ ಭಿಕ್ಷುಕರು ಬರುವ ಹಾಗೆ ಕಾಣುವುದಿಲ್ಲ?"

"ಛೆ? ಛೆ! ನಾವು ಗೇಟಿನ ಹತ್ತಿರವೇ ಹೀಗೊಂದು ಬೋರ್ಡ್ ಹಾಕಿಬಿಟ್ಟಿದ್ದೇವೆ: 'ಮಾಲಿಕರು ಶಾಕಾಹಾರಿಗಳಿದ್ದರೂ ನಾಯಿಗಳ ಬಗ್ಗೆ ಏನೂ ಹೇಳಲು ಬರುವಂತಿಲ್ಲ.'

—ವಿ. ಜೆ. ಪ್ಯಾಟಿ

*

"ಡಾಕ್ಟರೇ, ನನಗೆ ನಿದ್ರೆಯೇ ಬರುವುದಿಲ್ಲ" ರೋಗಿ ಹೇಳಿದ, "ನಿದ್ದೆ ಮಾಡಲು ಯತ್ನಿಸಿ ಕಣ್ಣು ಮುಚ್ಚಿ ಮಲಗಿದರೂ ಸಹ ಬೆಕ್ಕಿನ ಹೆಜ್ಜೆಯ ಸದ್ದು ಕೇಳಿದರೆ ಸಾಕು, ಎಚ್ಚರವಾಗಿಬಿಡುತ್ತದೆ."

ಡಾಕ್ಟರು ಒಂದು ಕಾಗದದಲ್ಲಿ ಔಷಧಿಯನ್ನು ಕಟ್ಟಿ "ತೆಗೆದುಕೊಳ್ಳಿ" ಎಂದರು.

"ಇದನ್ನು ನಾನು ರಾತ್ರಿ ತೆಗೆದುಕೊಳ್ಳಬೇಕೇ?" ರೋಗಿ ಕೇಳಿದ.

"ನಿಮಗಲ್ಲ ಇದು ಕೊಟ್ಟಿದ್ದು, ಬೆಕ್ಕಿಗೆ" ಎಂದರು ಡಾಕ್ಟರ್.

—ಡಿ. ಕೆ. ಪದ್ಮಾ

"ನನ್ನ ಹೆಂಡತಿ ತನ್ನ ಬೊಜ್ಜು ನೈಕರಗಿಸಿಕೊಳ್ಳಲೆಂದು ಈಗ ಮೂರು ತಿಂಗಳಿಂದಲೂ ಪ್ರತಿನಿತ್ಯ ಮುಂಜಾನೆ ಒಂದು ತಾಸು ಹಿಟ್ಟು ಬೀಸುತ್ತಿದ್ದಾಳೆ."

"ಹೀಗೇನು! ಏನಾದರೂ ಪ್ರಯೋಜನವಾಯಿತೆ?"

"ಹೂಂ. ಬೀಸುವ ಕಲ್ಲು ಸವೆದು ಸವೆದು ಅರ್ಧದಷ್ಟಾಗಿ ಬಿಟ್ಟಿದೆ."



"..ಯಾಕೋ ನಿದ್ರೇನೇ ಬರೋಲ್ಲಡಾಕ್ಟ್ರೆ. ಹರಿಕಥೆ, ಭಾಷಣ ಕೇಳೋವಾಗ ಒಂದಿಷ್ಟು ಕಣ್ಣುಮುಚ್ಚಿದ್ದು ಬಂತು—ಬೇರೆ ಸುತರಾಂ ನಿದ್ರೆ ಅಂಬೋದು ಕೇಳಬೇಡಿ.."

—ವಿಶಾಲು ರಾಮಕೃಷ್ಣ



# ಈ ಸ್ಥಳಕ್ಕೆ ಶಾಪ ತಟ್ಟಿದೆ

"ಹಿಂದುಸ್ಥಾನ ಟೈಮ್ಸ್"ನಿಂದ

ಕೆಲ ವರ್ಷಗಳ ಹಿಂದಿನ ಮಾತು. ತಮ್ಮ ರಾಯಭಾರಿಗಳ ಕಚೇರಿ - ವಸತಿ ಮುಂತಾದ್ದಕ್ಕಾಗಿ ಕಟ್ಟಡಗಳನ್ನು ಕಟ್ಟಿಕೊಳ್ಳಲು ಅಮೇರಿಕನ್ ಅಧಿಕಾರಿಗಳು ಕರಾಚಿಯಲ್ಲಿ ಸ್ಥಳ ಹುಡುಕುತ್ತ ಅಡ್ಡಾಡುತ್ತಿದ್ದಾಗ ವಿಕ್ಟೋರಿಯ ರೋಡಿನಲ್ಲಿ ೧೦,೦೦೦ ಚದುರಡಿ ಬಯಲು ಜಾಗೆಯೊಂದನ್ನು ಕಂಡರು. ಕರಾಚಿಯಲ್ಲಿ ವಿಕ್ಟೋರಿಯ ರೋಡೆಂದರೆ ಮುಖ್ಯ ಬೀದಿ. ಅಲ್ಲಿ ಹೊಟೆಲ್, ರೆಸ್ಟಾರೆಂಟ್, ಕ್ಲಬ್, ವಿಧವಿಧದ ಅಂಗಡಿಗಳು ತುಂಬಿ ಹೋಗಿವೆ. ಅಮೇರಿಕನ್ ಅಧಿಕಾರಿಗಳು ಹಿಂದೆ - ಮುಂದೆ ನೋಡದೆ ೫ ಲಕ್ಷ ರೂಪಾಯಿಗಳನ್ನು ಕೊಟ್ಟು ಆ ಸ್ಥಳವನ್ನು ಖರೀದಿ ಮಾಡಿಬಿಟ್ಟರು. ಆ ಮೇಲೆ ಅವರಿಗೆ ಈಗೊಂದು ನೂರು ವರ್ಷಗಳಿಂದಲೂ ಆ ಜಾಗೆ ಖಾಲಿಯಾಗಿಯೇ ಇತ್ತೆಂದು ತಿಳಿಯಿತು. ಅದಿದ್ದ ಪರಿಸರದಲ್ಲಿ ಒಂದೊಂದು ಅಂಗುಲ ಸ್ಥಳಕ್ಕೂ ಸಹಸ್ರ ಸಹಸ್ರ ಬೆಲೆ ಎನ್ನುವ ಪರಿಸ್ಥಿತಿಯಿರುವಾಗ ಇಷ್ಟು ವಿಶಾಲವಾದ ಸ್ಥಳ ಖಾಲಿಯಿದ್ದದ್ದಾದರೂ ಏಕೆ? ಹೇಗೆ?

ಕರಾಚಿಯ ಜನರನ್ನು ಕೇಳಿದರೆ ಆ ಸ್ಥಳಕ್ಕೆ



ಶಾಪವಿದೆ, ಅಲ್ಲಿ ವಾಸಿಸುವವರೆಲ್ಲ ಸತ್ತು ಸರ್ವನಾಶ ಹೊಂದುತ್ತಾರೆ ಎನ್ನುತ್ತಾರೆ.

'ಬ್ಯು ಜೆಸ್ಟೆ' ಎಂಬ ಪುಸ್ತಕ ಬರೆದು ಪ್ರಸಿದ್ಧನಾದ ಪಿ. ಸಿ. ರೆನ್ ಎಂಬ ಇಂಗ್ಲಿಷ್ ಲೇಖಕ ಈ ಶತಮಾನದ ಆರಂಭದಲ್ಲಿ ಕರಾಚಿಯಲ್ಲಿದ್ದ. ಆತ ತನ್ನ "ಡ್ಯು ಆ್ಯಂಡ್ ಮಿಲ್ಡ್ಯು' ಎಂಬ ಪುಸ್ತಕದಲ್ಲಿ ಈ ಶಾಪದ ಭಯಾನಕ ಕಥೆಯನ್ನು ಹೇಳಿದ್ದಾನೆ.

ಈ ಸ್ಥಳದಲ್ಲಿ ಮೊದಲು ಒಬ್ಬ ಮುಸಲ್ಮಾನ ಸಂತನ ಗೋರಿಯಿದ್ದಿತು. ಫಕೀರನೊಬ್ಬ ಅದರ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದ. ಯಾತ್ರಿಕರು ಭಯಭಕ್ತಿಯಿಂದ ಬಂದು ಗೋರಿಗೆ ಧೂಪವನ್ನರ್ಪಿಸಿ ಹೋಗುತ್ತಿದ್ದರು. ಹೀಗಿರುವಾಗ ಸೊಹ್ರಾಬಜಿ ರುಸ್ತುಮಜಿ ಪೋಟವಾಲಾ ಎಂಬ ಪಾರ್ಸಿ ವ್ಯಾಪಾರಿಯೊಬ್ಬ ಈ ಸ್ಥಳವನ್ನು ಕೊಂಡುಕೊಂಡ. ಗೋರಿಯನ್ನು ಅಪವಿತ್ರಗೊಳಿಸಬೇಡಿ ಎಂದು ಫಕೀರ ಆ ವ್ಯಾಪಾರಿಯನ್ನು ಬೇಡಿಕೊಂಡರೂ ಆತ ಕೇಳಲಿಲ್ಲ. ಆಗ ಆ ಫಕೀರ ರುಸ್ತುಮಜಿಯನ್ನೂ ಅವನ ವಂಶದವರನ್ನೂ ಶಪಿಸಿದ; ಅಲ್ಲಿ ಕಟ್ಟಲ್ಪಡಲಿದ್ದ ಕಟ್ಟಡಕ್ಕೂ ಅದರಲ್ಲಿ ಇರಬಹುದಾದವರಿಗೂ ಅದನ್ನು ಕಟ್ಟಲು ನೆರವಾಗುವವರಿಗೂ ಶಾಪವಿತ್ತು ತತ್‌ಕ್ಷಣ ಸತ್ತುಬಿದ್ದ.

ಆದರೆ ರುಸ್ತುಮಜಿ ಶಾಪಕ್ಕಂಜದೆ ತನ್ನ ಕನಸಿನ ಮನೆಯನ್ನು ಕಟ್ಟಿಸಲಾರಂಭಿಸಿದ. ಶಾಪದ ಮೊದಲ ಆಹುತಿಯಾಗಿ ಕಟ್ಟಡಕ್ಕಾಗಿ ತಳಪಾಯ ಅಗೆಯುತ್ತಿದ್ದ ಕೆಲಸಗಾರನೊಬ್ಬ ಸತ್ತ. ಆತ ಅಗಿಯುತ್ತಿದ್ದಾಗ ಸರ್ಪಗಳ ಬಿಲವೊಂದನ್ನು ಅಗೆದಿದ್ದ.

ಅವನ ನಂತರ ಇನ್ನೊಬ್ಬ ಕೆಲಸಗಾರ ಮೇಲಿಂದ ಬಿದ್ದು ಸತ್ತ. ಕಾವಲುಗಾರನ ಮಗ ಕುದಿಯುವ ದ್ರವವನ್ನು ಮೈಮೇಲೆ ಚೆಲ್ಲಿಕೊಂಡು ನಂತರ ಪ್ರಾಣನೀಗಿದ. ಮಗ ಸತ್ತ ಕೆಲದಿನಗಳ ಮೇಲೆ ಸ್ವತಃ ಕಾವಲುಗಾರನ ತಲೆಯ ಮೇಲೊಂದು ಇಟ್ಟಿಗೆ ಬಿದ್ದು ತಲೆಯೊಡೆದು ಆತ ಸತ್ತ.

ಇಷ್ಟು ಮರಣಗಳಾದರೂ ಕಟ್ಟಡದ ಕೆಲಸ ನಿಲ್ಲಲಿಲ್ಲ. ರುಸ್ತುಮಜಿ ಮನೆಯಲ್ಲಿರತೊಡಗಿದರು. ಶಾಪ ಅವರ ಬೆನ್ನು ಹತ್ತಿತ್ತು. ಒಂದು ದಿನ ಮಾಳಿಗೆಯ ಕಟಾಂಜನದ ಮೇಲೆ ತನ್ನ ತಮ್ಮನ ಚಿಕ್ಕ ಮಗ ಆಡುತ್ತಿರುವುದನ್ನು ಕಂಡು ರುಸ್ತುಮಜಿ "ಕೆಳಗೆ ಬಾ" ಎಂದು ಕೂಗಿದರು. ಕೂಗನ್ನು ಕೇಳಿ ಬೆಚ್ಚಿದ ಹುಡುಗನ ತೂಕ ತಪ್ಪಿತು. ಕೆಳಗೆ ಬೀಳುತ್ತಿದ್ದ ಅವನನ್ನು ಹಿಡಿಯಲು ರುಸ್ತುಮಜಿ ಓಡಿದರು. ಆದರೆ ಕಾಲೆಡವಿದ್ದರಿಂದ ಅವರು ಮುಗ್ಗರಿಸಿ ಹುಡುಗನನ್ನು ಹಿಡಿದುಕೊಳ್ಳುವ ಬದಲು ಕೆಳಗೆ ಬಿದ್ದ ಹುಡುಗನ ಮೇಲೆ ತಾವೇ ಬಿದ್ದರು. ಹುಡುಗನೂ ಸತ್ತ, ರುಸ್ತುಮಜಿಯೂ ಸತ್ತರು.

ಇಷ್ಟರಲ್ಲಿ ಈ ನೂತನ ಕಟ್ಟಡಕ್ಕೆ 'ಆಕಸ್ಮಿಕ ಮರಣದ ಮನೆ' ಎಂಬ ಹೆಸರು ಬಂದಿತ್ತು. ರುಸ್ತುಮಜಿಯವರ ಹಿರೇಮಗ ಆ ಕಟ್ಟಡದ ಒಡೆಯನಾದ ಮೇಲೆ ಕೆಲವೇ ಸಮಯದಲ್ಲಿ ಒಂದು ಕಿಡಿಕಿಯನ್ನು ತೆರೆಯ ಹೋದಾಗ ಮೊಳೆ ತಗಲಿ ಅವನ ಕೈಗೆ ಗಾಯವಾಯಿತು. ಅದೇ ವಿಷವಾಗಿ ನಂಜೇರಿ ಆತ ಅದರಿಂದಲೇ ಸತ್ತ. ಈ ಎಲ್ಲ ಮರಣಗಳನ್ನು ಕಂಡು ಮತಿಗೆಟ್ಟ ಅವನ ಮಗ—ರುಸ್ತುಮಜಿಯ ಮೊಮ್ಮಗ—ಹೊರ್ಮಸಜಿ ಆತ್ಮಹತ್ಯೆ ಮಾಡಿಕೊಂಡ. ಜನರಲ್ಲೆಲ್ಲ ಫಕೀರನ ಶಾಪದ ಪ್ರಖರತೆಯ ಬಗ್ಗೆ ನಂಬಿಗೆಯುಂಟಾಯಿತು. ಜನ ಈ ಕಟ್ಟಡದ ಎಡಬಲದಲ್ಲೆಲ್ಲೂ ಸುಳಿಯದಾದರು.

ರುಸ್ತುಮಜಿಯ ಕುಟುಂಬದ ಜನ ಈ ಮನೆಯನ್ನು ಬಿಟ್ಟು ಹೋದ ಮೇಲೆ ಶ್ರೀ ಮತ್ತು ಶ್ರೀಮತಿ ರೀಲ್ಡ್ ಎಂಬ ಬ್ರಿಟಿಶ್ ದಂಪತಿಗಳು ಅಲ್ಲಿ ವಾಸಿಸಲು ಬಂದರು. ಬಂದ ಐದು ವಾರಗಳ ನಂತರ ರೀಡ್‌ರಿಗೆ ಹುಚ್ಚು ಹಿಡಿದು ಆತ ರೇಝರಿನಿಂದ ಹೆಂಡತಿಯ ಕೊರಳು ಕೊಯ್ದು ಆ ಮೇಲೆ ಆತ್ಮಹತ್ಯೆ ಮಾಡಿಕೊಂಡರು.

ಆ ಮೇಲೆ ಜರುಗಿದ ದುರಂತ ಈ 'ಆಕಸ್ಮಿಕ ಮರಣದ ಮನೆ'ಯಲ್ಲಿ ಜರುಗಿದ ದುರಂತಗಳಲ್ಲಿ ಅತಿ ಭೀಕರವಾದುದೆನ್ನಬಹುದು. ರೀಲ್ಡ್‌ರ ನಂತರ ನಾಲ್ವರು ಬ್ರಿಟಿಶ್ ಸೈನಿಕರು ಈ ಮನೆಗೆ ಬಂದರು. ಅವರು ಬಂದ ಕೆಲ ದಿನಗಳಲ್ಲಿ ಅವರಲ್ಲೊಬ್ಬ, ಶಾಪವಿತ್ತ ಫಕೀರ ನಾಲ್ಕು ತೆರೆದ ಗೋರಿಗಳ ಎದುರು ನಿಂತುಕೊಂಡು "ನೆಲ, ಗಾಳಿ, ಬೆಂಕಿ, ನೀರು" ಎಂದು ಕೂಗಿದಂತೆ ಕನಸು ಕಂಡ. ಆ ಫಕೀರ ಸರತಿಯಂತೆ ನಾಲ್ವರ ಕನಸಿನಲ್ಲಿಯೂ ಕಾಣಿಸಿಕೊಂಡು "ಬೇಗನೆ ಈ ಮನೆಬಿಟ್ಟು ಹೋಗದಿದ್ದರೆ ಈ ನಾಲ್ಕು ಗೋರಿಗಳು ನಿಮ್ಮದಾಗುವವು" ಎಂದು ಎಚ್ಚರಿಕೆಯನ್ನಿತ್ತ.

ಈ ನಾಲ್ವರು ಸಿಪಾಯಿಗಳು ಈ ಎಚ್ಚರಿಕೆಯನ್ನು ಧಿಕ್ಕರಿಸಿದರು. ಆದರೆ ಮುಂದೊಂದು ದಿನ ದಟ್ಟವಾದ ಮಂಜು ಬಿದ್ದು ಏನೂ ಕಾಣಿಸದಂತಿದ್ದಾಗ ಅವರಲ್ಲೊಬ್ಬ ಒಂದು ದೊಡ್ಡ ತಗ್ಗಿನಲ್ಲಿ ಬಿದ್ದ. ಆಗಲ್ಲಿ ಪೆರೇಡ್ ಗ್ರೌಂಡ್ ಒಂದನ್ನು ತಯಾರಿಸುವ ಕೆಲಸ ನಡೆದಿತ್ತು. ಈ ಸಿಪಾಯಿ ತಗ್ಗಿನಲ್ಲಿ ಬಿದ್ದದ್ದನ್ನು ಕಾಣದ ಕೆಲಸಗಾರರು ತಗ್ಗು ಮುಚ್ಚಿ ಅವನ ಜೀವಂತ ಸಮಾಧಿ ಮಾಡಿಬಿಟ್ಟರು. ಕನಸಿನಲ್ಲಿ ಫಕೀರ ಹೇಳಿದಂತೆ ಭೂಮಿ ಮೊದಲನೆಯ ಆಹುತಿ ತೆಗೆದುಕೊಂಡಿತ್ತು.

ಎರಡನೆಯವ ಇಂಗ್ಲಂಡಿಗೆ ಮರಳಿ ಅಲ್ಲಿ ವೈಮಾನಿಕ ತರಬೇತಿ ಪಡೆದು ವಿಮಾನ ಅಪಘಾತದಲ್ಲಿ ಸತ್ತ.

ಮೂರನೆಯವನನ್ನು ಬೆಂಕಿ ಆಹುತಿ ತೆಗೆದುಕೊಂಡಿತು. ಆತ ಉರ್ದು ಕಲಿಯುತ್ತಿದ್ದ. ಒಂದು ದಿನ ತನ್ನ ಮುಸ್ಲಿಂ ಶಿಕ್ಷಕನ ಗುಡಿಸಲಿನಲ್ಲಿ ಆತ ಓದುತ್ತ ಕುಳಿತಿದ್ದಾಗ ಕಂದೀಲು ಮಗುಚಿ ಬಿದ್ದು ಗುಡಿಸಲಿಗೆ ಬೆಂಕಿ ಹತ್ತಿ ಆತ ಸುಟ್ಟು ಬೂದಿಯಾಗಿ ಹೋದ.

ನಾಲ್ಕನೆಯವ ನೀರಿನ ಸಂಪರ್ಕವೇ ಬರದಂತೆ ತುಂಬ ಜಾಗ್ರತೆ ವಹಿಸತೊಡಗಿದ. ಆತ ಈಸುವುದನ್ನು ಬಿಟ್ಟ. ಸ್ನಾನ ಮಾಡುವುದನ್ನು ಕಡಿಮೆ ಮಾಡಿದ. ಉಗುರು ಬೆಚ್ಚಗಿನ ನೀರನ್ನಷ್ಟೇ ಕುಡಿಯತೊಡಗಿದ. ಆದರೂ ಅವನಿಗೆ ಶಾಪದಿಂದ ಉಳಿದುಕೊಳ್ಳುವುದಾಗಲಿಲ್ಲ. ಸೋಡಾವಾಟರ್ ಬಾಟ್ಲಿಯೊಂದು ಅವನ ಮುಖದ ಹತ್ತಿರವೇ ಸ್ಫೋಟವಾಗಿ ಅವನು ಸತ್ತ.

ಮುಂದಿನ ಕೆಲ ವರ್ಷಗಳಲ್ಲಿ 'ಆಕಸ್ಮಿಕ ಮರಣದ ಮನೆ' ಇನ್ನೂ ಅನೇಕರನ್ನು ಆಹುತಿ ತೆಗೆದುಕೊಂಡಿತು. ಕೊನೆಗೆ ಆ ಮನೆಯ ಆವಾರದಲ್ಲಿ ಯಾರೂ ಕಾಲಿಡದಂತಾದರು. ಮನೆ ಮುರಕಳಿಗೆ ಬಂತು. ೧೯೨೫ ರಲ್ಲಿ ಕಟ್ಟಡವನ್ನು ಕೆಡವಿ ನೆಲಸಮ ಮಾಡಲಾಯಿತು. ಬಳಿಕ ಅಲ್ಲಿ ಎರಡು ಸಲ ಮನೆ ಕಟ್ಟಲು ಮಾಡಿದ ಪ್ರಯತ್ನಗಳು ವಿಫಲವಾದವು.

ಅಲ್ಲೀಗ ಕಟ್ಟಲ್ಪಟ್ಟಿರುವ ನೂತನ ಅಮೇರಿಕನ್ ರಾಯಭಾರಿ ಕಚೇರಿಯ ಕಟ್ಟಡವನ್ನು ಯೋಜಿಸಿದ ರಿಚಾರ್ಡ್ ಜೆ. ನ್ಯೂಟ್ರಾರಿಗೆ ೧೯೫೫ ರಲ್ಲಿ ಆ ಸ್ಥಳ ಸಂದರ್ಶಿಸಿದಾಗ ಏನೊ ಒಂದು ವಿಧವೆನಿಸಿ ಅವರು ಆ 'ಪೀರ'ನನ್ನು ಸಂತಯಿಸಲು ಏನು ಮಾಡಬೇಕೆಂದು ಹಲವಾರು ಮುಲ್ಲಾ-ಮೌಲ್ವಿಗಳನ್ನು ಕೇಳಿದರು.

೧೯೫೭, ಸೆಪ್ಟೆಂಬರ್ ೯ ರಂದು ರಾಯಭಾರಿ ಕಟ್ಟಡದ ಅಡಿಗಲ್ಲು ಅಸಾಮಾನ್ಯ ರೀತಿಯಲ್ಲಿ ಇಡಲ್ಪಟ್ಟಿತು. ಅಮೇರಿಕದ ಸರಕಾರೀ ಕಾರ್ಯಗಳಲ್ಲಿ ಪ್ರಪ್ರಥಮವಾಗಿ ಅಂದು ವೇದಿಕೆಯ ಮೇಲೆ ಪ್ರಮುಖರೊಂದಿಗೆ ಒಬ್ಬ ಮೌಲ್ವಿ ಮತ್ತು ಒಬ್ಬ ಪಾದ್ರಿ ಕುಳಿತಿದ್ದರು. ಅವರಿಬ್ಬರನ್ನು ಭೂಶುದ್ಧಿಗಾಗಿ ಕರೆಸಲಾಗಿತ್ತು.

ಕಳೆದ ವರ್ಷದ ಆರಂಭದಲ್ಲಿ ಈ ಏರ್‌ಕಂಡೀಶಂಡ್ ರಾಯಭಾರಿ ಕಚೇರಿಯನ್ನು ಔಪಚಾರಿಕವಾಗಿ ಆರಂಭಿಸಲಾಯಿತು. ಶಿಲ್ಪಿ ನ್ಯೂಟ್ರಾ ತಮ್ಮ ಮಾತನ್ನು ನಡೆಸಿದ್ದರು. ಅವರು 'ಪೀರ'ನ ಗೋರಿಯ ಮೇಲೆ ಕಟ್ಟಡ ಕಟ್ಟದೆ ಅದರ ಸುತ್ತ ಕಟ್ಟಿದ್ದರು. ಗೋರಿಯ ಎದುರು ಖಾಲಿ ಸ್ಥಳ ಇಡಲ್ಪಟ್ಟಿತ್ತು.

ಈ ಕಟ್ಟಡ ಪೂರ್ತಿಯಾಗಲು ಇನ್ನೂ ಎರಡು ವರ್ಷಗಳಿದ್ದಾಗ ಪಾಕಿಸ್ತಾನ ಸರಕಾರ ರಾಜಧಾನಿಯನ್ನು ಕರಾಚಿಯಿಂದ ರಾವಳಪಿಂಡಿಗೆ ಸ್ಥಳಾಂತರಿಸಿತು. ಅದರಿಂದ ಒಂಬತ್ತಂತಸ್ತಿನ ಕಟ್ಟಡವಾಗಲಿದ್ದ ಈ ಭವನ ನಾಲ್ಕಂತಸ್ತುಗಳ ಕಟ್ಟಡವಾಗಿಯೇ ಉಳಿಯಿತು. ರಾವಳಪಿಂಡಿಯ ಬಳಿ ಇರುವ ಇಸ್ಲಾಮಾಬಾದ ರಾಜಧಾನಿ ನಗರ ಪೂರ್ತಿ ತಯಾರಾದೊಡನೆ ಅಮೇರಿಕನ್ ರಾಯಭಾರಿ ಕಚೇರಿ ಕೂಡ ಅಲ್ಲಿಗೆ ಹೋಗುವುದು. ಈ ಕಟ್ಟಡ ಆಮೇಲೆ ಕಾನ್ಸಲೇಟ್ ಜನರಲ್ ನದಾಗುವುದು.

ಆದರೆ ಫಕೀರನ ಶಾಪ ಇನ್ನೂ ಜೀವಂತವಾಗಿರುವಂತಿದೆ ಎಂದೇ ಕರಾಚಿಯ ಜನ ಅಂದುಕೊಳ್ಳುತ್ತಿದ್ದಾರೆ. *



## ಗೋವಮಾಂತಕ ವಿಜಯ

೧೯೪೮ ರಲ್ಲಿ ಸರದಾರ ವಲ್ಲಭಭಾಯಿ ಪಟೇಲರು ಮುಂಬಯಿ ಬಂದರದಿಂದ ಯುದ್ಧ ಹಡಗವೊಂದರಲ್ಲಿ ಹೊರಟಿದ್ದರು. ಗೋವೆಯ ಸಮೀಪಕ್ಕೆ ಹಡಗು ಬಂದಾಗ ಸರದಾರ ಪಟೇಲರು ಗೋವೆಯನ್ನಷ್ಟು ನೋಡಲೆಂದು ಹಡಗನ್ನು ಗೋವೆಗೆ ಇನ್ನಿಷ್ಟು ಸಮೀಪ ಒಯ್ಯಲು ಕಪ್ತಾನನಿಗೆ ತಿಳಿಸಿದರು. ಕಪ್ತಾನ ಗೋವೆಗೆ ಸಮೀಪವಿರುವ ಸಮುದ್ರ ಪ್ರದೇಶದ ಮೇಲೆ ಪೋರ್ತುಗೀಜರಿಗೆ ಅಧಿಕಾರವಿರುವುದನ್ನು ಹೇಳಲು ಸರದಾರರು ಮುಗುಳ್ನಕ್ಕು "ಇರಲಿ ಇರಲಿ. ಸಮೀಪ ಹೋಗಿ ನೋಡೋಣ" ಎಂದರು. ಕಪ್ತಾನ ಸರದಾರರನ್ನು ಸಂತೋಷಪಡಿಸಲು ಹಡಗನ್ನು ಪೋರ್ತುಗೀಜ ಸಮುದ್ರದಲ್ಲಿ ಒಂದು ಮೈಲು ಒಳಕ್ಕೆ ಸಾಗಿಸಿದ.

"ಹಡಗದಲ್ಲಿ ಎಷ್ಟು ಜನ ಸೈನಿಕರಿದ್ದಾರೆ?" ಎಂದು ಸರದಾರರು ಕೇಳಲು ಕಪ್ತಾನ "೮೦೦" ಎಂದುತ್ತರವಿತ್ತ. "ಗೋವೆಯನ್ನು ಗೆಲ್ಲಲು ಇಷ್ಟು ಜನ ಸಾಕೆ?" ಕೇಳಿದರು ಸರದಾರ ಪಟೇಲರು. ಕಣ್ಣು ರೆಪ್ಪೆ ಕೂಡ ಮಿಟುಕಿಸದೆ ಕಪ್ತಾನ "ಸಾಕೆಂದು ನನಗನಿಸುತ್ತದೆ" ಎಂದುತ್ತರವಿತ್ತ. "ಸರಿ ಹಾಗಾದರೆ ಹೇಗೂ ಬಂದಿದ್ದೇವೆ. ಹೋಗಿ ಗೋವೆಯನ್ನು ಗೆಲ್ಲೋಣ" ಸರದಾರರೆಂದರು.

ಕಪ್ತಾನ ಅವರ ಮುಖವನ್ನೊಮ್ಮೆ ನೋಡಿ ಆ ಮಾತನ್ನು ಮತ್ತೊಮ್ಮೆ ಅನ್ನಲು ಕೇಳಿಕೊಂಡ. ಸರದಾರರು ಗಂಭೀರವಾಗಿ ಪುನಃ ಅದೇ ಮಾತನ್ನಂದರು.

"ನನಗೆ ಲಿಖಿತ ಆಜ್ಞೆ ಕೊಡಿ ಸ್ವಾಮಿ. ರಿಕಾರ್ಡಿಗೆ ಅದು ಬೇಕು" ಎಂದ ಕಪ್ತಾನ.

ಆಗ ಸರದಾರರು ಮತ್ತೆ ಮುಗುಳ್ನಕ್ಕು, "ಬೇಡ. ತಿರುಗಿ ಹೋಗುವುದೇ ವಾಸಿ ಎಂದು ಕಾಣುತ್ತದೆ. ನಿಮಗೆ ಗೊತ್ತಿದೆಯಲ್ಲ, ಜವಾಹರಲಾಲರು, ಅವರು ಇಂಥ ಕಾರ್ಯಕ್ಕೆ ಆಕ್ಷೇಪವೆತ್ತಿಯಾರು!" ಎಂದರು.

# ಕಿಡಿಕಿ ತೆರೆದಿರಲಿ !

ಜ. ಲಾ. ಶ್ರೀವಾಸ್ತವ

ಒಮ್ಮೆ ಚಳಿಗಾಲದ ಒಂದು ರಾತ್ರಿಯಲ್ಲಿ ನಾನು ನಮ್ಮ ನೆರೆಯವರೊಬ್ಬರ ಮನೆಗೆ ಹೋಗಬೇಕಾಯಿತು. ಅವರ ಆರು ತಿಂಗಳ ಮಗು ನಿಮೋನಿಯ ಬೇನೆಯಿಂದ ಬಳಲುತ್ತಿತ್ತು. ಅಂದು ರಾತ್ರಿ ೧ ಗಂಟೆಗೆ ಅವರ ಮನೆಯಲ್ಲಿ ಅಳುವಿನ ಧ್ವನಿ ಕೇಳಿಬರಲು ನಾನು ನೆರೆಯವನ ಕರ್ತವ್ಯ ಪೂರೈಸಲೇಬೇಕಾಯಿತು. ಮಗು ಈಗಲೊ ಇನ್ನೊಂದು ಕ್ಷಣದಲ್ಲೊ ಸಾಯುವ ಸ್ಥಿತಿಯಲ್ಲಿತ್ತು. ಆದರೂ ಡಾಕ್ಟರರು ಬಂದವರೇ ಮೊದಲು ಸ್ವತಃ ಕೋಣೆಯ ಕಿಡಿಕಿಗಳನ್ನು ತೆರೆದದ್ದನ್ನು ನಾನು ಕಂಡೆ. ಚಳಿಗಾಲದ ರಾತ್ರಿ, ಥಂಡಿ ಹವೆ, ನಿಮೋನಿಯಾದಿಂದ ಎಚ್ಚರ ತಪ್ಪಿ ಬಿದ್ದಿರುವ ಆರು ತಿಂಗಳ ಮಗು ! ಹಾಗಿದ್ದರೂ ಇಂಥ ಅವಸ್ಥೆಯಲ್ಲೂ ಕಿಡಿಕಿಗಳನ್ನು ತೆರೆದಿಟ್ಟು ಒಳಗೆ ಸ್ವಚ್ಛ ಹವೆ ಬರುವುದು ಅಗತ್ಯವಿದೆಂದು ಡಾಕ್ಟರರು ಹೇಳಿದರು. ಇಷ್ಟೇ, ರೋಗಿಯ ಮೈಮೇಲೆ ನೇರವಾಗಿ ಗಾಳಿ ಬೀಸದಂತೆ ನೋಡಿಕೊಳ್ಳಬೇಕು.

ಶರೀರ ಸ್ವಾಸ್ಥ್ಯಕ್ಕಾಗಿ ಕಿಡಿಕಿಗಳನ್ನು ತೆರೆದಿಡಬೇಕಾದ ಮಹತ್ವವನ್ನು ಬಹುಶಃ ಈಗ ಎಲ್ಲರೂ ಬಲ್ಲರು. ಆದರೆ ಮಾನಸಿಕ ಸ್ವಾಸ್ಥ್ಯಕ್ಕಾಗಿ ಮನದ ಕಿಡಿಕಿಗಳನ್ನು ತೆರೆದಿಡಬೇಕಾದ್ದೂ ಅಷ್ಟೇ ಅಗತ್ಯದ್ದಾಗಿದೆಯೆಂಬುದನ್ನು ವಿಚಾರ ಮಾಡಿರುವ ಜನರು ಬಹಳ ಕಡಿಮೆಯೆ ಇರಬಹುದು.

ಬಹಳ ಸ್ವಲ್ಪಕಾಲ ಅಂದರೆ ಹೆಚ್ಚೆಂದರೆ ೨೦-೨೫ ವರ್ಷಗಳ ವರೆಗೆ ಮಾತ್ರ ನಾವು ನಮ್ಮ ಮನಸ್ಸಿನ ಕಿಡಿಕಿಗಳನ್ನು ಒಂದಿಷ್ಟು ತೆರೆದಿಟ್ಟಿರುತ್ತೇವೆ. ವಿದ್ಯಾರ್ಥಿಜೀವನದ ನಂತರ ನಾವು ಒಂದೊಂದಾಗಿ ಈ ಕಿಡಿಕಿಗಳನ್ನು ಮುಚ್ಚತೊಡಗಿ ೩೦-೩೫ ವರ್ಷದವರಾಗುವಷ್ಟರಲ್ಲಿ ನಾಲ್ಕೂ ದಿಕ್ಕಿನ ಎಲ್ಲ ಕಿಡಿಕಿಗಳನ್ನೂ ಬಂದು ಮಾಡಿ ಸ್ವನಿರ್ಮಿತ ಕಾರಾಗೃಹದಲ್ಲಿ ನಮ್ಮನ್ನು ನಾವೇ ಕೈದಿಗಳನ್ನಾಗಿ ಮಾಡಿಕೊಳ್ಳುತ್ತೇವೆ.

ಈ ರೀತಿಯಾಗಿ ಹೊಸ ವಿಚಾರ ಮತ್ತು ಹೊಸ ಅನುಭವ ಸಂಭವಗಳ ಮಾರ್ಗವನ್ನು ತಡೆಗಟ್ಟಿ ನಾವು ನಮ್ಮ ವಿಚಾರ ಪರಿಪಕ್ವವಾಗಿದೆ, ಪೂರ್ಣವಾಗಿದೆ ಮತ್ತು ನಮ್ಮ ವಿಚಾರಗಳಿಗನುಗುಣವಾಗಿ ಜೀವನವನ್ನು ಬಾಳುತ್ತಿದ್ದೇವೆ ಎಂದು ತಿಳಿದುಕೊಳ್ಳುತ್ತೇವೆ. ಆದರೆ ಈ ರೀತಿಯಾಗಿ ನಮ್ಮನ್ನು ನಮ್ಮ ಮನಸ್ಸಿನ ಕಾರಾಗೃಹದಲ್ಲಿ ಕೂಡಿಕೊಳ್ಳುವುದು ವಿಚಾರಗಳ ಪರಿಪಕ್ವತೆಯೂ ಅಲ್ಲ, ಪೂರ್ಣತೆಯೂ ಅಲ್ಲ; ಆದರೆ ಅದು ಅವುಗಳ ಅಪರಿಪಕ್ವತೆ, ಅಪೂರ್ಣತೆ ಮತ್ತು ಅನುಭವಹೀನತೆಯ ದ್ಯೋತಕವಾಗಿದೆ.

ನಾವು ಬೇಕಾದಷ್ಟು ಅನುಭವಶಾಲಿಗಳಾಗಿರಬಹುದು, ವಿಚಾರದಲ್ಲಿ ಎಲ್ಲರಿಗಿಂತ ಮುಂದಿರಬಹುದು; ಆದರೆ ನಮ್ಮ ಅವೇ ವಿಚಾರಗಳಿಗೆ ಅಂಟಿಕೊಂಡಿರುವುದು ಮತ್ತು ಎರಡನೆಯವರ ಮಾತನ್ನು ಕೇಳದಿರುವುದು ನಮ್ಮನ್ನು ಬೇಗನೆ

ಹಿಂದೆ ದೂಡುವುದು. ಇಂದು ನಮ್ಮ ವಿಚಾರ ಎಷ್ಟೇ ಪ್ರಗತಿಶೀಲವಾಗಿದ್ದರೂ ಕ್ರಾಂತಿಕಾರಿಯಾಗಿದ್ದರೂ ನಾವು ಎಲ್ಲ ಕಡೆಗಳಲ್ಲೂ ಕಣ್ಣು ಮುಚ್ಚಿಕೊಂಡು ಕುಳಿತರೆ ಆ ವಿಚಾರಗಳು ಬೇಗನೆ ಹಳೆಯವಾಗಿ ಹೋಗುವವು. ಅವುಗಳಲ್ಲಿ ಕ್ರಾಂತಿಯೆಂಬುದು ನಾಮ ಮಾತ್ರಕ್ಕೂ ಉಳಿಯಲಾರದು.

ತಮ್ಮ ತಾರುಣ್ಯದಲ್ಲಿ ಅತ್ಯಂತ ಕ್ರಾಂತಿಕಾರಿ ಮತ್ತು ಪ್ರಗತಿಶೀಲ ವಿಚಾರದವರಾಗಿದ್ದ ಎಷ್ಟೋ ಜನರ ಉದಾಹರಣೆಗಳು ನಮಗೆ ಭೂತ ಮತ್ತು ವರ್ತಮಾನ ಕಾಲಗಳ ಮೇಲೆ ದೃಷ್ಟಿ ಹಾಯಿಸಿದಾಗ ಕಂಡುಬಂದಾವು. ಈ ಜನರ ಕಣ್ಸನ್ನೆ ಮಾತ್ರದಿಂದ ಏನನ್ನು ಮಾಡಲೂ ಜನ ಸಿದ್ಧವಿರುತ್ತಿತ್ತು. ಆದರೆ ಈ ಜನ ಮುಂದೆ ತಮ್ಮ ಮನದ ಕಿಡಿಕಿಗಳನ್ನು ಬಂದು ಮಾಡಿಕೊಂಡರು. ಅವರ ವಿಚಾರಗಳ ಬೆಂಕಿ ಮಾನಸಿಕ ದಾಸ್ಯದ ಗೋಡೆಗಳ ನಡುವೆ ನಂದಿಹೋಯಿತು. ಆದರೆ ತಮ್ಮ ಮಾತುಗಳಲ್ಲಿ ಮೊದಲಿನ ಶಕ್ತಿ ಯಾಕುಳಿದಿಲ್ಲ, ಪ್ರಭಾವ ಯಾಕುಳಿದಿಲ್ಲ ಎಂಬುದು ಈ ಜನರಿಗೆ ತಿಳಿಯುವುದಿಲ್ಲ.

ಕೆಲ ವಿಚಾರಗಳನ್ನು ನಮ್ಮವನ್ನಾಗಿ ಮಾಡಿಕೊಂಡ ಮೇಲೆ ಅವು ಉತ್ತಮೋತ್ತಮವಾಗಿಯೆ ಇರಲೊಲ್ಲವೇಕೆ, ಹೊಸ ವಿಚಾರಗಳನ್ನು ನೋಡದಿರುವುದು, ಮಾಡದಿರುವುದು, ಅವನ್ನು ನಮ್ಮವನ್ನಾಗಿ ಮಾಡಿಕೊಳ್ಳಲು ಯತ್ನಿಸದಿರುವುದು ಕೂಪಮಂಡೂಕ ವೃತ್ತಿಯೆನಿಸುವುದು. ಆಶ್ಚರ್ಯದ ಮಾತೆಂದರೆ ನಮ್ಮಲ್ಲಿ ಹೆಚ್ಚಿನವರು ಒಂದಲ್ಲ ಒಂದು ರೀತಿಯಲ್ಲಿ ಇಂಥ ಕೂಪಮಂಡೂಕ ವೃತ್ತಿಯವರೇ ಆಗಿರುತ್ತೇವೆ. ಪರಮೋಚ್ಚ ಪದವಿಗಳನ್ನು ಪಡೆದಿರುವ ವಿದ್ವಾಂಸರು, ಅಧಿಕಾಧಿಕ ಸಫಲತೆಯನ್ನು ಪಡೆಯುವ ಅನುಭವಿ ಕರ್ಮಶೀಲ ವ್ಯಕ್ತಿಗಳ ಕೂಡ ಈ ಕೂಪಮಂಡೂಕ ವೃತ್ತಿಯಿಂದ ತಪ್ಪಿಸಿಕೊಳ್ಳಲಾರದವರಾಗುತ್ತಾರೆ.

ನಾನೊಮ್ಮೆ ಒಬ್ಬ ವಿದ್ಯಾರ್ಥಿಯ ಹೆಸರು ಹಚ್ಚಿಸಲೆಂದು ವಿಶ್ವವಿದ್ಯಾಲಯಕ್ಕೆ ಹೋಗಿದ್ದೆ. ರಿಜಿಸ್ಟ್ರಾರರನ್ನು ಕಾಣಲು ಹೋದ ನಾನು ಬಾಗಿಲಲ್ಲಿಯೆ ನಿಲ್ಲಬೇಕಾಯಿತು. ರಿಜಿಸ್ಟ್ರಾರರು ಒಳಗೆ ಯಾವನೊ ವಿದ್ಯಾರ್ಥಿಯೊಡನೆ ಯಾವುದೊ ವಿಷಯದ ಬಗ್ಗೆ ಮಾತಾಡುತ್ತಲಿದ್ದರು. ವಿದ್ಯಾರ್ಥಿ ತುಂಬ ಉತ್ತೇಜಿತನಾಗಿ ಧಾರ್ಷ್ಟ್ಯದಿಂದ ರಜಿಸ್ಟ್ರಾರರಿಗೆ ಹೇಳುತ್ತಲಿದ್ದ, 'ಯೂ, ಶುಡ್ ಲರ್ನ್ ಎ ಲೆಸನ್ ಫ್ರಾಮ್ ದಿಸ್ ಇನ್ಸಿಡೆಂಟ್' (ನೀವು ಈ ಘಟನೆಯಿಂದ ಒಂದು ಪಾಠ ಕಲಿಯಬೇಕು.)

ವಿದ್ಯಾರ್ಥಿಯ ಮಾತು ಕೇಳಿ ರಿಜಿಸ್ಟ್ರಾರರೂ ಒಂದಿಷ್ಟು ಉತ್ತೇಜಿತರಾಗಿ "ನೀನಿನ್ನೂ ಚಿಕ್ಕ ಹುಡುಗ, ನನಗೆ ಪಾಠ ಕಲಿಸುವಿಯಾ? ನಾನು ಮೂರು ವಿಶ್ವವಿದ್ಯಾಲಯಗಳನ್ನು ಕಂಡಿದ್ದೇನೆ. ನೀನೆಷ್ಟು ನೋಡಿದ್ದಿ?" ಎಂದು ನುಡಿದರು.

ಇಲ್ಲಿ ವಿದ್ಯಾರ್ಥಿಯ ಧಾರ್ಷ್ಟ್ಯ ಎಷ್ಟಿತ್ತು ಎಂಬುದು ವಿಚಾರಣೀಯವಲ್ಲ. ಆದರೆ ರಿಜಿಸ್ಟ್ರಾರರು ಕೊಟ್ಟ ಉತ್ತರದ ರೀತಿ ಸರಿಯಾಗಿತ್ತೆ ಎಂದು ನೋಡಬೇಕು. ವಿದ್ಯಾರ್ಥಿಯ ಮಾತನ್ನು ಗ್ರಹಿಸಿ ಆ ಬಗ್ಗೆ ವಿಚಾರ ಮಾಡಿ ಅದರಿಂದ ಪಾಠ ಕಲಿಯುವಂತಿದ್ದರೆ ಪಾಠವನ್ನು ಕಲಿಯುವುದು ರಿಜಿಸ್ಟ್ರಾರರ ಕರ್ತವ್ಯವಾಗಿತ್ತು. ಮೂರು ವಿಶ್ವವಿದ್ಯಾಲಯಗಳಲ್ಲಿ ಕೆಲಸ ಮಾಡಿದ ಮಾತ್ರಕ್ಕೆ ಯಾವುದೋ ಒಂದು ಮಾತನ್ನು ಯಃಕಶ್ಚಿತವಾಗಿ ಮಾಡುವುದು ಸಮರ್ಪಕವೆನಿಸದು

ಆ ರಿಜಿಸ್ಟ್ರಾರರಂಥವರೇ ಆದ ಇನ್ನೊಬ್ಬ ಸದ್ಗೃಹಸ್ಥರನ್ನು ಕಂಡೆ. ಅವರು ತೀರ ಸಾಮಾನ್ಯ ಸ್ಥಿತಿಯಿಂದ ಮೇಲಕ್ಕೇರಿ ಇಂದು ಉಚ್ಚ ಸ್ಥಾನದಲ್ಲಿದ್ದಾರೆ. ತುಂಬ ಹಣ ಮತ್ತು ಯಶಸ್ಸುಗಳನ್ನು ಅವರು ಗಳಿಸಿದ್ದಾರೆ ಅವರು ತಮ್ಮ ಜೀವನದಲ್ಲಿ. ನಾನೊಮ್ಮೆ ಯಾವುದೊ ಕೆಲಸಕ್ಕಾಗಿ ಅವರನ್ನು ಕಾಣಲು ಹೋದಾಗ ಅವರು ತಾವು ಹೊಸತಾಗಿ ಕಟ್ಟಿಸುತ್ತಿದ್ದ ಮನೆಯ ಕೆಲಸದ ಮೇಲೆ ಉಸ್ತುವಾರಿ ನಡೆಸಿದ್ದರು. ಅಲ್ಲಿ

ಮಾತುಕತೆಯ ಕಾಲಕ್ಕೆ ನಾನು ಅವರಿಗೆ ಆಧುನಿಕ ಬಗೆಯ ಸ್ನಾನದ ಕೋಣೆ ಮುಂತಾದವುಗಳನ್ನು ಕಟ್ಟಿಸಲು ಸಲಹೆಯಿತ್ತೆ. ಅವರು ಬಲು ಕಾಳಜಿಪೂರ್ವಕವಾಗಿ ನನ್ನನ್ನು ಆಪಾದಮಸ್ತಕ ನೋಡಿ ನನ್ನ ಕಡಿಮೆ ವಯಸ್ಸು ಮತ್ತು ಸಣ್ಣ ಸಂಬಳದ ಅಂದಾಜು ಕಟ್ಟಿ ಆ ಮೇಲೆ ಬಲು ತೀಕ್ಷ್ಣವಾಗಿ ಹೇಳಿದರು: "ನೀವು ಏನೆಂದು ತಿಳಿದುಕೊಂಡು ನನಗೆ ಸಲಹೆ ಕೊಡುತ್ತಿದ್ದೀರಿ? ನಾನೇನು ಮೂರ್ಖನೆ? ಮನೆ ಕಟ್ಟಿಸಲು ನನಗೆ ತಿಳಿಯದೆ? ಕಳೆದ ೩೦ ವರ್ಷಗಳಲ್ಲಿ ನಾನು ಏಳೆಂಟು ಮನೆ ಕಟ್ಟಿಸಿದ್ದೇನೆ, ತಿಳಿಯಿತೆ?"

ಅಯಾಚಿತ ಸಲಹೆ ನೀಡಿ ನಾನು ನಾಚಿಕೆಯಿಂದ ಕುಗ್ಗಿ ಹೋದೆ. ಮೂವತ್ತು ವರ್ಷಗಳಿಂದ ಮನೆ ಕಟ್ಟಿಸುತ್ತ ಬಂದ ಮಾತ್ರಕ್ಕೆ ಯಾರೂ ಮನೆ ಕಟ್ಟಿಸುವ ಇಂಜನಿಯರನಾಗುವುದಿಲ್ಲ ಎಂಬ ಮಾತನ್ನು ಅವರಿಗಾರು ತಿಳಿಸಿ ಹೇಳಬೇಕು? ನಾನು ಮನೆ ಕಟ್ಟಿಸದಿದ್ದರೂ ಮನೆಗಳನ್ನು ನೋಡಿಲ್ಲವೆ? ಪ್ರತಿಯೊಂದನ್ನೂ ಸ್ವತಃ ಮಾಡಿಯೆ ಕಲಿಯಬೇಕಾಗುವುದೆ?

ಈ ಗೃಹಸ್ಥರು ತಮ್ಮ ಮನದ ಕಿಡಿಕಿಗಳನ್ನು ಮುಚ್ಚಿಕೊಂಡಿದ್ದಾರೆಂದು ನನಗೆ ತಿಳಿಯಿತು. ಆದ್ದರಿಂದಲೇ ಅವರಿಗೆ ನನ್ನ ಮಾತುಗಳಿಂದ ಸಿಟ್ಟು ಬಂತು. ಅವರು ಮನದ ಕಿಡಿಕಿಗಳನ್ನು ತೆರೆದಿಟ್ಟಿದ್ದರೆ ಆಗ ಅವರು ಇಪ್ಪತ್ತನೆಯ ಶತಮಾನದ ಈ ದಿನಗಳಲ್ಲೂ ಹತ್ತೊಂಬತ್ತನೆಯ ಶತಮಾನದ ಮನೆಗಳನ್ನು ಕಟ್ಟಿಸುತ್ತಿರಲಿಲ್ಲ. ಇಷ್ಟೇ ಅಲ್ಲ, ಮನದ ಕಿಡಿಕಿಗಳನ್ನು ಮುಚ್ಚಿಕೊಂಡಿರುವುದರಿಂದಲೇ ಈಗ ಕೆಲ ವರ್ಷಗಳ ಹಿಂದೆ ಅವರು ತಾವು ಮುಟ್ಟಿದ ಯಶಸ್ಸಿನ ಮೆಟ್ಟಲಿಗಿಂತ ಮೇಲಿನ ಮೆಟ್ಟಲನ್ನು ಏರಲಾರದೆ ಅಲ್ಲಿಯೆ ಕುಳಿತಿದ್ದಾರೆಂದು ನಾನು ತಿಳಿದುಕೊಂಡಿದ್ದೇನೆ.

ಜೀವನದಲ್ಲಿ ಸಫಲರಾಗಲು ಕಾಲಕ್ಕೆ ತಕ್ಕಂತೆ ನಡೆಯುವುದತ್ಯಗತ್ಯವಾಗಿದೆಯೆಂದು ಎಲ್ಲರೂ ಒಪ್ಪುತ್ತಾರೆ. ಆದರೆ ಮನದ ಕಿಡಿಕಿಗಳನ್ನು ತೆರೆದಿಟ್ಟುಕೊಂಡು ಹೊಸ ವಿಚಾರ ಹಾಗೂ ಹೊಸ ಗತಿಗಳನ್ನು ಗ್ರಹಿಸುತ್ತಿದ್ದರೆ ಮಾತ್ರ ಕಾಲಕ್ಕೆ ತಕ್ಕಂತೆ ನಡೆಯಲು ಸಾಧ್ಯವಿದೆ. ಈ ಮಾತನ್ನು ಕುರಿತು ಜನರು ವಿಚಾರ ಮಾಡುವುದು ಮಾತ್ರ ತೀರ ಕಡಿಮೆ.

ಎಲ್ಲಿಯ ವರೆಗೆ ನಾವು ನಮ್ಮ ಮನವನ್ನು ಈ ರೀತಿಯಲ್ಲಿ ಎಲ್ಲ ದಿಕ್ಕುಗಳಲ್ಲೂ ಗ್ರಹಣಶೀಲವನ್ನಾಗಿಟ್ಟುಕೊಳ್ಳುವೆವೊ ಅಲ್ಲಿಯವರೆಗೆ ನಾವು ಚಿರಯುವಕರಾಗಿರುವೆವು. ಜೀವನದಲ್ಲಿ ನಮ್ಮ ಉತ್ಸಾಹ ತಗ್ಗುವ ಬದಲು ಹೆಚ್ಚುತ್ತಲೇ ಹೋಗುವುದು. ನದಿ ಎಷ್ಟೇ ಚಿಕ್ಕದಾಗಿರಲಿ, ಅದು ಹರಿಯುತ್ತಿರುವ ವರೆಗೆ ಶುದ್ಧವೂ ಆರೋಗ್ಯದಾಯಿಯೂ ಆಗಿರುವುದು. ಅದರಂತೆ ನಮ್ಮ ವಿಚಾರದಲ್ಲಿ ಪ್ರವಾಹವಿರುವ ವರೆಗೆ, ಹೊಸ ವಿಚಾರಗಳನ್ನು ಗ್ರಹಿಸಲು ನಾವು ತತ್ಪರರಾಗಿರುವ ವರೆಗೆ ನಮ್ಮ ಮಾನಸಿಕ ಶಕ್ತಿಯೂ ವಿಕಸಿತವಾಗುತ್ತ ಹೋಗುವುದು, ಜೀವನದಲ್ಲಿ ಪ್ರಗತಿಯೆ ಪ್ರಗತಿ ಲಭಿಸುವುದು.

ವಾಸ್ತವವಾಗಿ ಗತಿಹೀನತೆಯೇ ಮೃತ್ಯುವಿನ ಮಾರ್ಗವಾಗಿದೆ. ನಾವು ಮೃತ್ಯುವನ್ನು ವರಿಸಬಾರದೆಂದಿದ್ದರೆ, ನಮಗೆ ಯೌವನ ಮತ್ತು ಜೀವನ ಪ್ರಿಯವಾಗಿದ್ದರೆ ನಾವು ಸದಾಕಾಲ ನಮ್ಮ ಮನಸ್ಸಿನ ಕಿಡಿಕಿಗಳನ್ನು ಹೊಸ ಹೊಸ ವಿಚಾರಗಳಿಗಾಗಿ ತೆರೆದಿಡಬೇಕಾಗುವುದು. ಏಕೆಂದರೆ ಯಾವ ಒಂದೇ ಒಂದು ಸತ್ಯ ಹಾಗೂ ಸುಂದರ ವಿಚಾರಗಳ ಮಾರ್ಗದಿಂದ ನಾವು ಚಿರಯೌವನ ಪಡೆಯಬಲ್ಲೆವೊ ಅದು ಕೇವಲ ಮನಸ್ಸಿನ ಕಿಡಿಕಿಗಳನ್ನು ತೆರೆದಿಟ್ಟಾಗಲಷ್ಟೇ ನಮಗೆ ಲಭ್ಯವಾಗುವುದು. *



ನಿಷ್ಪಕ್ಷಪಾತವೆಂದರೆ ತಾಟಸ್ಥ್ಯವಲ್ಲ, ನ್ಯಾಯಪಕ್ಷಪಾತ —ಸ್ಟಾನಿಸ್‌ಲಾವ್‌ಲೆಕ್




# ನೃತ್ಯ ಪ್ರದರ್ಶನದಲ್ಲಿ

ಎ. ಎಸ್. ರಾಮಕೃಷ್ಣ

ಬನ್ನಿ ಇಲ್ಲೇ ಕೂತ್ಕೊಳ್ಳೋಣ. ಡ್ಯಾನ್ಸ್ ಚೆನ್ನಾಗಿ ಕಾಣ್ಸುತ್ತೆ...... ಬೇಡಾಂತೀರಾ?... ಕಾಲು ತುಳೀತಾರೆಯೆ?... ಯಾರು?... ಆಚೀಚೆಗೆ ಓಡಾಡುವವರು?... ಓಡಾಡೋದ್ಯಾತಕ್ಕೆ? ...ಡ್ಯಾನ್ಸ್ ನೋಡೋದಕ್ಕಲ್ಲವೆ ಬರೋದು? ಪುರಾಣವೆಲ್ಲ ಬಿಚ್ಚ ಬೇಡ ಅಂತೀರ... ಅಯ್ಯೋ ಪುರಾಣ ಎಲ್ಲಿ ಬಂತೂಂದ್ರೆ... ಆಯ್ತು, ಮುಚ್ಚಿದೆ ಬಾಯಿ.

...ಆದರೆ ಇಲ್ಲಿ ಕೂತು ಮೋಸವಾಯ್ತೂಂದ್ರೆ, ...ನನ್ನೆದುರಿಗೇನೆ ಆ ಉದ್ದ ಟೋಪಿಯವರು ಕೂತುಕೊಂಡಿರಬೇಕೆ?... ನನಗೆ ಕಾಣಿಸೋದು ಆತನ ಟೋಪಿ ಮಾತ್ರ. ಆತ ಟೋಪಿ ತೆಗೆದು ಕೈಯಲ್ಲಿ ಹಿಡಕೋಬಾರದೆ......ಇಲ್ನೋಡಿ... ಅವರಿಗೆ ಕೊಂಚ ಹೇಳಿ ಹಾಗಂತ... ನನ್ನ ಮಾತು ಕೇಳಿ ಹಾಗೇನಾದರೂ ಹೇಳಿದರೆ ರಂಪಾ ಆದೀತು ಅಂತೀರ?... ಹೋಗಲಿ ಬಿಡಿ... ನಿಮ್ಮ ಆಚೆ ಪಕ್ಕದಲ್ಲಿ ಕೂತುಕೊಳ್ಳಲೆ?...ಸರಿ ಇಲ್ಲಿ ಸೊಗಸಾಗಿ ಕಾಣ್ಸುತ್ತೆ...... ಇನ್ನು ಮಾತಾಡೋದಿಲ್ಲ.

ಒಂದೇ ಒಂದು ಮಾತು...ಅಲ್ಲಿ...ಎದುರಿಗೆ ಎಳಸೆ ಸಾಲಿನಲ್ಲಿ ಕೂತಿದ್ದಾಳಲ್ಲ, ಆಕೆ ತುರುಬು ಕಂಡಿರಾ?... ತುರುಬಿನಲ್ಲಿ ಎಂಥೆಂಥ ಫ್ಯಾಶನ್ ಬಂದುಬಿಟ್ಟಿದೆ ಅಂತೀನಿ ಈಗ...... ತುರುಬು ಹಾಕಿಕೊಂಡರೆ ಲಕ್ಷಣವಾಗಿರುತ್ತೇನೊ ನಿಜ... ಆದರೆ ಫ್ಯಾಶನ್ನಿಗೂ ಒಂದು ಮಿತಿ ಬೇಕು. ಆಕೆದೇನು ತುರುಬೇ ಕುದುರೇ ಬಾಲವೇ... ಕೊಂಚ

ಚೇಳೆ? ಕಪ್ಪೆಯೇ? ಥೂ... ಅತಿಯಾಯಿತಪ್ಪ... ಅಲ್ಲದೆ ಆ ಸೀರೆ ಆಕೆಗೆ ಕೊಂಚಾನೂ ಒಪ್ಪೋದಿಲ್ಲ... ಚೋಳಿಯೇನೋ ಪರವಾಗಿಲ್ಲ...ಆದರೆ ಅಷ್ಟೊಂದು ಭಾಗ ಬೆನ್ನು ಕತ್ತು ತೋರಿಸೋದಕ್ಕೆ ನಾಚಿಕೆಯಾಗುಲ್ವೆ?... ನಾಚಿಕೆ ಮಾನ ಮರ್ಯಾದೆ ಎಲ್ಲಿ ಬಂತು ಈಗ...ನನ್ನ ಲೆಕ್ಚರು ಸಾಕು ಅಂತೀರ?... ಇಷ್ಟು ಮೆತ್ತಗೆ ಮಾತಾಡಿದರೆ ಯಾರಿಗೆ ತಾನೆ ಕೇಳ್ಸುತ್ತೆ ಅಂತೀನಿ... ಆಯಿತು...ಬಾಯಿ ಮುಚ್ಕೊಂಡೆ...

...ಅಗೊಳ್ಳಿ ವೆಂಕಟಲಕ್ಷ್ಮಿ, ಅವಳ ಗಂಡ, ಅತ್ತೆ ಎಲ್ಲಾ ಬಂದರು... ಓ... ಅಲ್ನೋಡಿ ಹದಿನೈದು ರೂಪಾಯಿ ಸೀಟಿಗೆ ಹೋಗ್ತಿದಾರಲ್ಲ, ಬಿಟ್ಟಿ ಪಾಸು ಎಲ್ಲಾದರೂ ಹೊಡೆದಿದಾರೋ ಏನೋ. ಮೆಂಬರೆ ಅವರು ನೃತ್ಯ ಏರ್ಪಡಿಸಿದ ಸಂಘಕ್ಕೆ?... ನೀವೂ ಆಗಬಹುದಿತ್ತಲ್ಲ...ಆದರೆ ಈ ಹತ್ತು ರೂಪಾಯಿ ಸೀಟೂ ಪರವಾಗಿಲ್ಲಾನ್ನಿ... ಹುಂ...ಹುಂ...ಹಿಂಬದಿ ಕೂತವರು ಸಿಗರೇಟ್ ಸೇದ್ತಿದಾರಲ್ಲ...ಹೊಗೆ ವಾಸನೆ... ಸಹಿಸೋಕಾಗೋಲ್ಲ...

ಡ್ಯಾನ್ಸ್ ಷುರುವಾಗೇ ಬಿಟ್ತು... ಆಯ್ತು ಮಾ ತಾಡೋಲ್ಲ... ಇನ್ನು ಮಾತಾಡೋಲ್ಲ... ಮಾತಾಡೋದೇ ಇಲ್ಲ...

ಎದುರುಗಡೆ ಕೂತ ಗಂಡಸು ಹೇಳ್ತೋದು ಕೇಳಿದಿರಾ? ಗೋಪಿಕೃಷ್ಣನ ಮೈ ಹೆಂಗಸಿನ ಮೈ ಇದ್ದ ಹಾಗಿದೆ ಅಂತೆ... ಹಾಗಿದ್ದ ಮಾತ್ರಕ್ಕೆ ಚೆಂದವೆ?... ಆತನ ಅಭಿನಯ ಮಾತ್ರ ಮುಖ್ಯ ...ಜನರ ಟೇಸ್ಟ್ ನೋಡೀಂದ್ರೆ...ನನ್ನ ಟೀಕೆ ಸಾಕೂ ಅಂತೀರ?... ಅಲ್ಲಾಂದ್ರೆ ಆ ಹಿನ್ನೆಲೆ ಹಾಡೋನು ತಕಿಟ ಧಿಕ್ಕಿಟ... ಅಂತ... ಅಷ್ಟೊಂದು ಎಗರಾಡೋದು ಯಾಕೆ ಅಂತೀನಿ? ಸುಮ್ಮನೆ ಕೂತು ಹೇಳಬಾರದೆ ಆತ?

ನನ್ನ ಪಕ್ಕದಲ್ಲಿ ಕೂತಿರೋಳು ಡ್ಯಾನ್ಸ್ ತಿಳಿದವಳು ಅಂತಿರಾ? ನಿಮಗೆ ಹೇಗೆ ಗೊತ್ತಾಯಿತು?......ನೋಡಿ...ಮಾತಾಡಬೇಡ ಅಂತ ನನಗೆ ಹೇಳಿದವರು ನೀವೇ ಮಾತು ತೆಗೆದಿದೀರ! ಇರಲಿ...ನಿಮಗೆ ಹೇಗೆ ಗೊತ್ತಾಯಿತು ಅಂತೀನಿ ಆಕೆ ಡ್ಯಾನ್ಸ್ ಮಾಡ್ತಾಳೆ ಅಂತ? ಅವಳ ಆಚೆ ಪಕ್ಕದಲ್ಲಿ ಕೂತಿರೋನು ಆಕೆ ಗುರೂನೆ? ಏನು ಗುರುವೋ......ಡ್ಯಾನ್ಸ್ ಮಾಸ್ಟರ ಜೊತೆಗೆ ಒಬ್ಬಳೇ ಬಂದುಬಿಟ್ಟಿದಾಳಲ್ಲ...ಬಂದರೇನಾಯಿತು ಅಂತೀರ? ಆಗೋದೇನಿಲ್ಲ...ಉಂ... ಅವಳನ್ನ ಕಂಡರೆ ಯಾಕೋ ಡ್ಯಾನ್ಸ್ ಮಾಡ್ತಿರೋ ಹಾಗೇ ಇದೆ...ತನಗೆಲ್ಲಾ ಗೊತ್ತು ಅನ್ನೋ ಹಾಗೆ ನಟಿಸ್ತಿದಾಳೆ...ಕಾಲು ಬೇರೆ ಕುಣಿಸ್ತಿದಾಳೆ ಕೂತಲ್ಲೆ......ಕೇಳಿಸಬಹುದು ಅಂತೀರ? ಕೇಳಿಸಿದರೆ ಕೇಳಿಸಲಿ ಬಿಡೀಂದ್ರೆ... ಆಕೇನ ಏನು ನೋಡ್ತೀರ? ಅಲ್ಲಿ ಡ್ಯಾನ್ಸ್ ನೋಡಿ.

ಇದೊಂದು ತಮಾಷೆ ನೋಡೀಂದ್ರೆ...ಒಂದು ಡ್ಯಾನ್ಸ್ ಮುಗಿದ ಕೂಡಲೆ ಆತ ಒಳಗಡೆ ಹೋಗಿಬಂದ...ಜನ ಚಪ್ಪಾಳೆ ತಟ್ಟಿದರು... ಅದು ಬಿಟ್ಟು ಒಂದು ಐಟಮ್ ಆದನಂತರ ಇನ್ನೊಂದು ಐಟಮ್ ಉದ್ದಕ್ಕೂ ಮಾಡ್ತಾ ಇದ್ದರೆ ಜನ ಚಪ್ಪಾಳೆ ತಟ್ಟೋದಿಲ್ಲ...ಅಂದರೆ ಒಂದು ಐಟಮ್ ಮುಗಿದಿದೆ ಅಂತ ಕೂಡ ಅವರಿಗೆ ತಿಳಿಯೋದಿಲ್ಲ. ಆತ stage ನೊಳಗ ನಡೆದರೇನೆ ಒಂದು ಐಟಮ್ ಮುಗೀತಂತ ಲೆಕ್ಕ ಇವರಿಗೆ. ಚಪ್ಪಾಳೆ ತಟ್ತಾರೆ...ಅಲ್ಲದೆ ಒಳ್ಳೇ ಸ್ವಾರಸ್ಯದ ಅಂಶಗಳಿದ್ದರೂ ಚಪ್ಪಾಳೆ ತಟ್ಟೋದಿಲ್ಲ ಕೆಲವು ಸಲ...ನೀನಾದರೂ ತಟ್ಟು ಅಂತೀರ... ತಟ್ತೀನೆ ನೋಡಿ...

...ಅಯ್ಯೋ... ಡ್ಯಾಮ್ ಆಯಿತು ನನಗೆ... ನಾನೇನೋ ತಟ್ಟಿದೆ...ಆದರೆ ಇಷ್ಟು ದೊಡ್ಡ ಸಭೆಯಲ್ಲಿ ಉಳಿದವರೆಲ್ಲ ಸುಮ್ಮನೆ ಕೂತುಕೋಬೇಕೆ?...ನನ್ನ ಮರ್ಯಾದೆ ತೆಗೆದಿರಿ ನೀವು... ಹೇಗೆ ಅಂತೀರ...ನೀವಲ್ಲವೆ ತಟ್ಟು ಅಂತ ಹೇಳಿದ್ದು...?

ಇದೇನು ಅರ್ಧಗಂಟೆ ಹೊತ್ತು ಮಾತಾಡದೆ ಸುಮ್ಮನೆ ಕೂತುಬಿಟ್ಟೆ ಅಂತ ಆಶ್ಚರ್ಯವೇ ನಿಮಗೆ?... ಸುಮ್ಮನಿರೋಕೆ ತಿಳೀದು ಅಂತಲ್ಲ. ಆದರೂ ಏನಾದರೂ ಹೇಳಬೇಕು ಅನಿಸಿದಾಗ

ಎರಡು ಮಾತು ಹೇಳೋದು...ಇಷ್ಟೆ...ಈಗ ನೋಡಿ ಈ ಜಟಾಯು ಮೋಕ್ಷ...ಬೆಸ್ಟ್ ಐಟಮ್ ಅನ್ನಿಸೋದಿಲ್ಲವೇ?...ನನಗೆ ಕಣ್ಣೀರೇ ಬಂತು... ರೆಕ್ಕೆಗಳನ್ನ ಕಳಕೊಂಡರೂ ಬರೆ ಕೊಕ್ಕಿನಿಂದಲೇ ರಾವಣನೊಡನೆ ಸೆಣಸಾಡೋದು ನೋಡಿ ಆ ಜಟಾಯು ಹಕ್ಕಿ...ಅಲ್ನೋಡಿ ಪಾಪ ಆ ಹೆಂಗಸಿನ ಕೈಯಲ್ಲಿ ಮಗು ನಿದ್ದೆ ಮಾಡಿಬಿಟ್ಟಿದೆ...ಅರ್ಧದಲ್ಲೇ ಎದ್ದು ಹೋಗ್ತಿದಾರೆ... ಅಡಿಗೆ ಆಗಿಲ್ಲವೇನೋ ಪಾಪ...

ಕೊನೇ ಐಟಮ್ ಫುಟ್‌ವರ್ಕ್ ಅಂತೆ... ಆದರೆ ಆತ ನೋಡಿ ಸುಮ್ಮನೆ ತೊಡೆ ಆಡಿಸಿ ಕಾಲಿನ ಗೆಜ್ಜೆ ಘಲ್ ಘಲ್ ಅನಿಸಿ ಜನರನ್ನ ಮರುಳುಮಾಡ್ತಿರೋ ಹಾಗಿದೆಯಲ್ಲ...ಇದೆಲ್ಲ ಕಸರತ್ತೋ...ನನಗೆ ಇಂಥ ಸರ್ಕಸ್‌ಗಳೇನೂ ಹಿಡಿಸೋದಿಲ್ಲಾಂದ್ರೆ...ಇಲ್ಲ, ನಿಲ್ಲಿಸಿದೆ ನನ್ನ ಕಮೆಂಟರಿ...

ನಮ್ಮ ಪಕ್ಕದಲ್ಲಿ ಏನು ತಮಾಷೆ ನಡೀತು ಗೊತ್ತೆ?...ಡ್ಯಾನ್ಸರ್ ತನ್ನ ಮೇಷ್ಟರೊಡನೆ ಗೋಪೀಕೃಷ್ಣನ ಬಾಡಿ ಎಷ್ಟು ಚೆನ್ನಾಗಿದೆ ಅಂದಳು. ಈ ಮೇಷ್ಟರೋ ಸಣಕಲ ನೋಡಿ... ಮುಖ ಹುಳಿಹುಳಿ ಮಾಡಿಕೊಂಡು ತೆಪ್ಪಗಿದ್ದ... ನಾನು ಮೆತ್ತಗೆ ಆಡ್ತಿದೀನಿ...ಆಕೆಗೆ ಕೇಳ್ಸೋ ಹಾಗಿಲ್ಲಾಂದ್ರೆ...

...ಅಮ್ಮಮ್ಮ ಡ್ಯಾನ್ಸ್ ಮುಗೀತು...ಅಗೋ ನೋಡಿ ಪಾರಿಜಾಂದ್ರೆ...ನನ್ನ ಕ್ಲಾಸ್‌ಮೇಟು ಪಾರಿಜಾಂತೀನಿ...ಯಾವ ಪಾರಿಜಅಂತೀರಲ್ಲ... ಅಲ್ನೋಡಿ ತಾನು ಮುಂದಿನ ಸೀಟಿನಲ್ಲಿ ಕೂತಿದ್ದಳೂಂತ ಕಂಡೂ ಕಾಣದವಳ ಹಾಗೆ ಹೋಗ್ತಿದಾಳಲ್ಲ......ಕರೀಲೇನು?......ಅವಳ ಗಂಡ ಏನಾದರೂ ಅಂದುಕೊಂಡಾರು. ಹೋಗಲಿ ಬಿಡಿ...

...ಕಿವಿ ತೂತಾಯಿತು ಅಂತೀರ...ಭಾರೀ ಬಿಡಿ!...ನಾನೆಲ್ಲಿ ಅಷ್ಟು ಮಾತಾಡಿದೀನೀಂದ್ರೆ? ಇತ್ಯಾದಿ...ಇತ್ಯಾದಿ. *



## ವಿಲಕ್ಷಣ ಬೆಲೆಯ ಪುಸ್ತಕಗಳು !

ನ್ಯೂಯಾರ್ಕ್‌ನಲ್ಲಿ ಪುಸ್ತಕಗಳ ಮಾರಾಟವಾದಾಗ, 'ರಾಬಿನ್‌ಸನ್ ಕ್ರೂಸೊ' (Robinson Crusoe) ಪುಸ್ತಕದ ಮೊಟ್ಟಮೊದಲ ಹಳೆಯ ಪ್ರತಿಯೊಂದಕ್ಕೆ ೩,೨೪೫ ಡಾಲರು (ಡಾಲರಿಗೆ ಆಗ ಸುಮಾರು ೩ ರೂಪಾಯಿಗಳು) ದೊರೆಯಿತು !

ಫಿಟ್ಸ್‌ಜರಾಲ್ಡನು ಬರೆದ 'ರುಬಾಯಿಯಾತ್' (Rubaiyat) ಪುಸ್ತಕದ ಪ್ರತಿಗೆ ೧,೭೦೦ ಡಾಲರುಗಳು ದೊರೆತವು! —ಸಂಗ್ರಹ: ಜಿ. ಎಸ್. ಉಬರಡ್ಕ

ರಾಬರ್ಟ್ ಬ್ರೌನಿಂಗನ ಒಂದು ಕವಿತೆ ಪ್ರಕಟವಾದೊಡನೆಯೇ ಜನಪ್ರಿಯತೆ ಗಳಿಸಿತ್ತು. ಆದರೆ ಲಂಡನಿನ ಪೋಯೆಟಿಕಲ್ ಸೊಸೈಟಿಗೆ ಅದರ ಕೆಲವಂಶ ಜಟಿಲವಾಗಿ ಕಂಡಿತು. ಅದರ ಸದಸ್ಯರು ಬ್ರೌನಿಂಗನೊಡನೆ ಅದರ ತಾತ್ಪರ್ಯ ಕೇಳಿದರು. ಬ್ರೌನಿಂಗ್ ಕವಿತೆಯ ಆ ಅಂಶವನ್ನು ಎರಡು ಬಾರಿ ಓದಿದ. ಇನ್ನೆರಡು ಬಾರಿ ಇಡೀ ಕವಿತೆಯನ್ನೇ ಓದಿದ. ಆಮೇಲೆ ಹೇಳಿದ:

"ಈ ಕವಿತೆಯನ್ನು ನಾನು ಬರೆದಾಗ ಬರೇ ಎರಡು ವ್ಯಕ್ತಿಗಳಿಗೆ ಮಾತ್ರ ಅದರ ತಾತ್ಪರ್ಯ ತಿಳಿದಿತ್ತು— ನನಗೆ ಹಾಗೂ ಆ ಭಗವಂತನಿಗೆ. ಆದರೆ ಈಗ ಒಬ್ಬನಿಗೆ ಅಂದರೆ ಆ ಮಹಾಮಹಿಮನಿಗೆ ಮಾತ್ರ ಇದರ ಅರ್ಥ ತಿಳಿದಿದೆ."

—"ಕೀರ್ತಿ" ಕುಂದಾಪುರ

ಕೆಲವೇ ತಾಸುಗಳಲ್ಲಿ ೫೭೦ ಜನರ ಜೀವ ತೆಗೆದುಕೊಂಡು ೬೦ ಕೋಟಿ ರೂಪಾಯಿ ಹಾನಿ ಮಾಡಿತು!

# ಟೆಕ್ಸಾಸಿನ ಅಗ್ನಿಕಾಂಡ



೧೯೪೭, ಏಪ್ರಿಲ್ ೧೬ ರಂದು ಮುಂಜಾನೆ ೮ ಗಂಟೆ. ಟೆಕ್ಸಾಸ್ (ಅಮೇರಿಕ) ಬಂದರದಲ್ಲಿ ಗ್ರ್ಯಾಂಡ್ ಕ್ಯಾಂಪ್ ಎಂಬ ಫ್ರೆಂಚ್ ಹಡಗ ಗೊಬ್ಬರವನ್ನು ಹೇರಿಕೊಳ್ಳತೊಡಗಿತ್ತು. ಅದರ ೨ ನೇ ನಂಬರಿನ ಉಗ್ರಾಣಕೋಣೆಯಲ್ಲಿ ಈಗಾಗಲೆ ೧೪೦೦ ಟನ್ ಮತ್ತು ೪ ನೇ ನಂಬರಿನ ಉಗ್ರಾಣ ಕೋಣೆಯಲ್ಲಿ ೮೮೦ ಟನ್ ಗೊಬ್ಬರ ತುಂಬಿತ್ತು. ಎಲ್. ಡಿ. ಬಾಸ್‌ವೆಲ್ ಎಂಬ ಕೆಲಸಗಾರ ಹಡಗದ ೪ ನೇ ನಂಬರಿನ ಉಗ್ರಾಣದ ಬಾಗಿಲ ಬಳಿ ನಿಂತಿದ್ದಾಗ ಯಾರೊ "ಹೊಗೆ" ಎಂದು ಕೂಗಿಕೊಂಡಿದ್ದು ಅವನಿಗೆ ಕೇಳಿಸಿತು.

"ಮೂರ್ಖ ಮಕ್ಕಳು!" ಎಂದು ಬಾಸ್‌ವೆಲ್ ತನ್ನಷ್ಟಕ್ಕೆ ಗೊಣಗಿಕೊಂಡು ಬಾಗಿಲ ಕಿಂಡಿಯಿಂದ ಕೆಳಗೆ ಇಣಿಕಿ ನೋಡಿದ. "ಕೆಲಸಗಾರರಲ್ಲಿ ಯಾವನಾದರೂ ಸಿಗರೇಟು ಸೇದುತ್ತಿರಬೇಕು. ಮೇಲೆ ಬರಲಿ. ಒಂದು ವಾರದ ಸಂಬಳವನ್ನು ದಂಡ ಹಾಕಿಸುತ್ತೇನೆ" ಎಂದು ಆತ ಮನದಲ್ಲಿ ಅಂದುಕೊಂಡ. ಆತನ ಸಿಟ್ಟಿಗೆ ಕಾರಣವಿತ್ತು. ಹಡಗಿನಲ್ಲಿದ್ದ ಗೊಬ್ಬರ ಬಹು ಬೇಗನೆ ಉರಿ ಹತ್ತಿಕೊಳ್ಳುವಂಥ ವಸ್ತುವಾಗಿತ್ತು.

ಬಾಸ್‌ವೆಲ್ ಗಾಬರಿಯಾಗಿದ್ದ. ಕೆಳಗೆ ಗೊಬ್ಬರದ ಕೋಣೆಯಲ್ಲಿದ್ದ ಕೆಲಸಗಾರನೊಬ್ಬನಿಗೆ ಹಡಗದ ತೀವವಾದ ಉಕ್ಕಿನ ಹಲಗೆ ಮತ್ತು ಗೊಬ್ಬರದ ಚೀಲಗಳ ಸಡುವೆ ಇದ್ದ ಮರದ ಹಲಗೆಗಳ ನಡುವೆ ಹೊಗೆಯೇಳುತ್ತಿರುವುದು ಕಾಣಿಸಿತ್ತು. ಬಾಸ್‌ವೆಲ್ ಒಂದು ಬಾಲ್ದಿ ನೀರನ್ನು ಉಕ್ಕು ಮತ್ತು ಮರದ ಹಲಗೆಗಳ ನಡುವೆ ಸುರಿದ. ಇನ್ನೊಬ್ಬಾತ ಮತ್ತೆರಡು ಬಾಲ್ದಿ ನೀರನ್ನು ಸುರುವಿದ. ಈಗ ಹೊಗೆ ಸುರುಳಿಸುರುಳಿಯಾಗಿ ಮೇಲೇರತೊಡಗಿತ್ತು. ಕೆಳಗೆ ಕೆಲಸ ಮಾಡುತ್ತಿದ್ದವರಿಗೆ ಬೇಗನೆ ಮೇಲಕ್ಕೆ ಬಂದು ಬಾಗಿಲು ಮುಚ್ಚಲು ಬಾಸ್‌ವೆಲ್ ಅಪ್ಪಣೆ ಮಾಡಿದ. ಬೆಲೆಬಾಳುವ ಗೊಬ್ಬರವನ್ನು ನೀರಿನಿಂದ ತೋಯಿಸಿ ಹಾಳು ಮಾಡುವುದಕ್ಕಿಂತ ಬಿಸಿ ಉಗಿಯನ್ನು ಬಿಟ್ಟು ಬೆಂಕಿ ನಂದಿಸುವುದು ಒಳ್ಳೆಯದು ಎಂದಾತ ಯೋಚಿಸಿದ. ಇದೇನು ಮಹಾ ಬೆಂಕಿ! ೮-೨೦ ಆಗುವುದರೊಳಗಾಗಿ ನಂದಿಸಬಹುದು ಎಂದಾತ ತಿಳಿದಿದ್ದ.

ಈ ಹೊತ್ತಿಗೆ ಮಾನ್‌ಸಾಂಟೊ ಗೊಬ್ಬರ ಕಂಪನಿಯ ಅಸಿಸ್ಟಂಟ್ ಮ್ಯಾನೇಜರನಿಗೆ ಗ್ರ್ಯಾಂಡ್ ಕ್ಯಾಂಪ್ ಹಡಗದಲ್ಲಿ ಗದ್ದಲವೆದ್ದಿರುವುದು ಕಾಣಿಸಿತು. ಅಲ್ಲೇನೊ ಸಣ್ಣ ಬೆಂಕಿ ಹತ್ತಿದೆ ಎಂಬ ಸಮಾಚಾರ ತಿಳಿದೊಡನೆ ಆತ ತನ್ನ ಕಂಪನಿಯ ಅಗ್ನಿಶಾಮಕ ದಲದವರಿಗೆ ಸಿದ್ಧರಾಗಿರಲು ತಿಳಿಸಿದ.

ಗ್ರ್ಯಾಂಡ್ ಕ್ಯಾಂಪಿನ ಆಚೆ ಬದಿಯಲ್ಲಿ ಸುಮಾರು ೬೦೦ ಅಡಿಗಳ ಅಂತರದ ಮೇಲೆ ಇನ್ನೆರಡು ಹಡಗಗಳು ನಿಂತಿದ್ದವು. ಅವುಗಳಲ್ಲೊಂದಾದ 'ಹಾಯ್‌ಫ್ಲಾಯರ್' ಹಡಗದಲ್ಲಿ ೨೦೦೦ ಟನ್ ಗಂಧಕ ಹಾಗೂ ಸುಲಭದಲ್ಲಿ ಬೆಂಕಿ ಹೊತ್ತಿಕೊಳ್ಳುವ ೯೬೧ ಟನ್ ಗೊಬ್ಬರ ಇದ್ದಿತು.

ಇನ್ನೊಂದು ಹಡಗ 'ವಿಲ್ಸನ್ ಬಿ. ಕೀನೆ'ಯಲ್ಲಿ ಚೀಫ್ ಮೇಟ್ ಫ್ರಾಂಕ್ಲಿನ್ ಆರ್. ಉಡ್‌ಯಾರ್ಡನಿಗೆ 'ಗ್ರ್ಯಾಂಡ್ ಕ್ಯಾಂಪ'ನಲ್ಲಿ ಬೆಂಕಿ ಹತ್ತಿರುವ ಸಮಾಚಾರ ೮.೨೫ ಕ್ಕೆ ತಿಳಿಯಿತು. ಆತ ಪ್ರಸಂಗ ಬಂದರೆ ಹಡಗನ್ನು ದೂರ ಸಾಗಿಸುವ ವಿಚಾರದಿಂದ ತನ್ನ ಇಂಜನಿಯರನಿಗೆ ಇಂಜಿನ್ ಆರಂಭಿಸಲು ಎಷ್ಟು ಸಮಯ ಬೇಕಾದೀತು ಎಂದು ಕೇಳಿದ. ಒಂದು ತಾಸಾದರೂ ಬೇಕು ಎಂದು ಇಂಜನಿಯರ್ ಹೇಳಿದ.

೮.೩೦ ಕ್ಕೆ 'ಗ್ರ್ಯಾಂಡ್ ಕ್ಯಾಂಪ್' ಬೆಂಕಿಯ ಗಂಡಾಂತರದ ಸೀಟಿಯನ್ನು ಊದಿತು. ಅಷ್ಟೊತ್ತಿಗೆ ಬಾಸ್‌ವೆಲ್ ೪ ನೇ ಉಗ್ರಾಣದ ಬಾಗಿಲು ಮುಚ್ಚಿ ಭದ್ರಪಡಿಸಿದ್ದ. ಅವನಿಗೆ ಅವನ ಕೆಲಸಗಾರರನ್ನು ಕರೆದುಕೊಂಡು ದಂಡೆಗೆ ಹೋಗಲು ಹಡಗಿನ ಅಧಿಕಾರಿಗಳು ತಿಳಿಸಿದರು.

೮.೪೦ ರಷ್ಟೊತ್ತಿಗೆ ಬಂದರದ ತೀರದಲ್ಲಿ ಸುಮಾರು ೧೦೦ ಜನ ಪ್ರೇಕ್ಷಕರು ನೆರೆದಿದ್ದರು. ಟೆಕ್ಸಾಸ್ ನಗರದ ಅಗ್ನಿಶಾಮಕದಲದ ೨೭ ಜನ ಬೆಂಕಿ ನಂದಿಸುವ ಕಾರ್ಯಕ್ಕಾರಂಭಿಸಿದ್ದರು.

'ಗ್ರ್ಯಾಂಡ್‌ಕ್ಯಾಂಪ'ನಲ್ಲಿ ಬಾಯ್ಲರುಗಳಿಂದ ಬಿಸಿ ಉಗಿಯನ್ನು ಬಿಟ್ಟು ಬೆಂಕಿ ನಂದಿಸುವ ಪ್ರಯತ್ನ ನಡೆದಿತ್ತು. ಆದರೆ ಬೆಂಕಿ ಕೈಮೀರುತ್ತಲೇ ನಡೆದಿತ್ತು. ಅಧಿಕಾರಿಗಳು ಎಲ್ಲ ಖಲಾಸಿಗಳಿಗೆ ದಂಡೆಗೆ ಹೋಗಲು ಅಪ್ಪಣೆ ಮಾಡಿದರು. ಇದೇ ಸಮಯದಲ್ಲಿ ಮಾನ್‌ಸಾಂಟೊ ಕಂಪನಿಯ ರಾಬರ್ಟ್ ಮಾರಿಸ್ ಎಂಬ ಅಧಿಕಾರಿ ಜೀಪಿನಲ್ಲಿ ಕುಳಿತು ಹೊಗೆ ತುಂಬಿಕೊಂಡಿದ್ದ ಸಮುದ್ರದ ದಂಡೆಗುಂಟ ಸಾಗಿದ್ದ. ಅವಶ್ಯಬಿದ್ದರೆ 'ಗ್ರ್ಯಾಂಡ್ ಕ್ಯಾಂಪ'ನ್ನು ದಂಡೆಗೆ ಎಳೆತರುವ ಜಗ್ಗುದೋಣಿಯೊಂದನ್ನು ಹುಡುಕಲೆಂದು ಆತ ಹೊರಟಿದ್ದ.

ಒಂಬತ್ತು ಹೊಡೆಯಿತು. ಅಷ್ಟರಲ್ಲಿ ಅಗ್ನಿಶಾಮಕ ದಲದ ಪ್ರಮುಖ ಎಚ್. ಜೆ. ಬಾಮ್‌ಗಾರ್ಟನರರು ತುಂಬಾ ಗಾಬರಿಯಾಗಿದ್ದರು. ರಾಸಾಯನಿಕ ಗೊಬ್ಬರಕ್ಕೆ ಬೆಂಕಿ ಹತ್ತಿದರೆ ಆಗುವ ಅನಾಹುತದ ಅರಿವು ಅವರಿಗಿತ್ತು. ಆದರೆ ನಿಮಿಷನಿಮಿಷಕ್ಕೆ ದಂಡೆಯಲ್ಲಿ ಹೆಚ್ಚುತ್ತಿದ್ದ ಪ್ರೇಕ್ಷಕರ ಗುಂಪನ್ನು ಚದುರಿಸುವುದು ಪೋಲೀ

ಸರಿಗಾಗಲಿ, ಅಗ್ನಿಶಾಮಕದಲದವರಿಗಾಗಲಿ ಸಾಧ್ಯವಾಗಲಿಲ್ಲ.

ಸರಿಯಾಗಿ ೯.೧೨ ಕ್ಕೆ 'ಗ್ರ್ಯಾಂಡ್‌ಕ್ಯಾಂಪ್' ಹಡಗದ ಕೆಳಗಿನ ಕೋಣೆಗಳ ಮುಚ್ಚಳಗಳೆಲ್ಲ ಆಕಾಶಕ್ಕೆ ಹಾರಿದವು. ಒಳಗಿಂದ ಕಂದು ಹಳದಿ ಬಣ್ಣದ ಹೊಗೆ ಹೊರಗೆ ರಾಶಿರಾಶಿಯಾಗಿ ಬಂತು. ಮುಂದೆ ಕೆಲವೇ ನಿಮಿಷಗಳಲ್ಲಿ ಸ್ಫೋಟವಾಯಿತು. ಹಡಗಿನ ಹಲಗೆಗಳ ತುಣುಕುಗಳು ಸಾವಿರಾರು ಅಡಿ ದೂರ ಗಾಳಿಯಲ್ಲಿ ಹಾರಿದವು. ಕೆಂಪಗೆ ಕಾಯ್ದ ಉಕ್ಕು ಮೊದಲಾದ ಧಾತುಗಳ ತುಣುಕುಗಳು ದಂಡೆಯಗುಂಟ ಅಲ್ಲಲ್ಲಿ ಇದ್ದ ಎಣ್ಣೆ ಪಂಪುಗಳತ್ತ ಹಾರಿದವು. ಆಕಾಶದಲ್ಲಿ ಹಾರುತ್ತಿದ್ದ ಎರಡು ವಿಮಾನಗಳಿಗೆ ಗುಂಡು ಬಡಿದಂತಾಗಿ ಅವು ಸಮುದ್ರದಲ್ಲಿ ಬಿದ್ದವು. ಪರ್ವತದೋಪಾದಿಯಲ್ಲಿ ಏರಿಬಂದ ಬಿಸಿ ಎಣ್ಣೆ ಮತ್ತು ನೀರಿನ ತೆರೆಯೊಂದು ಬಂದರದ ಧಕ್ಕೆಯೊಂದನ್ನು ಕೊಚ್ಚಿಕೊಂಡು ಹೋಯಿತು.

ಇನ್ನೊಂದು ಪ್ರಚಂಡ ತೆರೆ ಗರ್ಜಿಸುತ್ತ ೬೦೦ ಕಾರುಗಳು ನಿಂತಿದ್ದ ನಿಲ್ದಾಣವೊಂದರ ಮೇಲೆ ಹಾಯ್ದು ಹೋಯಿತು. ೧೫೦ ಅಡಿ ಉದ್ದದ ಉಕ್ಕಿನ ದೋಣಿಯೊಂದು ನೀರಿಂದ ಮೇಲಕ್ಕೆ ತೂರಲ್ಪಟ್ಟು ಹಾಗೆಯೆ ಮುಂದೆ ಸಾಗಿ ಈ ಕಾರುಗಳ ಮೇಲೆ ಮುಚ್ಚಳದಂತೆ ಬಂದು ಬಿತ್ತು. ಆನೆಯ ಕಾಲ ಕೆಳಗೆ ಸಿಕ್ಕ ತತ್ತಿಗಳಂತೆ ಕಾರುಗಳ ಅವಸ್ಥೆಯಾಯಿತು.

ರಾಬರ್ಟ್ ಮಾರಿಸ್‌ನ ಜೀಪ್ ಮೇಲಕ್ಕೆ ಹಾರಿತು. ತೆರೆಯು ತಂದಿದ್ದ ನೀರಿನ ಮೇಲೆ ಬಿದ್ದಿದ್ದರಿಂದ ಆತ ಬದುಕುಳಿದ. ಅವನ ಕಿವಿಯ ಪರೆಗಳು ಹರಿದುಹೋದವು. ಆತ ಸಮೀಪದಲ್ಲಿಯೆ ಕುಸಿದು ಬಿದ್ದಿದ್ದ ಗುದಾಮಿನ ಬುಡದಲ್ಲಿ ಸಿಕ್ಕು ಆರ್ತನಾದ ಗೈಯುತ್ತಿದ್ದವರ ಸಹಾಯಕ್ಕೆಂದು ಕುಂಟುತ್ತ ಅತ್ತ ನಡೆದ.

ಇಡೀ ಮಾನ್‌ಸಾಂಟೊ ಕಾರಖಾನೆ ಮುರಿದು ಬಿತ್ತು. ಗೊಬ್ಬರ ತಯಾರಿಕೆಗಾಗಿ ಕೂಡಿಟ್ಟಿದ್ದ ರಾಸಾಯನಿಕ ವಸ್ತುಗಳಲ್ಲಿ ಬೆಂಕಿ ಕ್ಷಣಾರ್ಧದಲ್ಲಿ ಹಬ್ಬಿತು. ಕಾರಖಾನೆಯಲ್ಲಿದ್ದ ಜ ಬೆಂಕಿಯ ಝಳಕ್ಕೆ ಹುರಿದುಹೋದರು. ನಿಂ ನಿಂತಲ್ಲಿಯೆ ಅವರ ಸಮಾಧಿಯಾಯಿತು. ಕಾ ಖಾನೆಯ ೧೭ ಜನ ಕೆಮಿಸ್ಟರಲ್ಲಿ ೧೬ ಜನ ಕ್ಷಣದಲ್ಲಿ ಸತ್ತುಹೋದರು.

'ಗ್ರ್ಯಾಂಡ್ ಕ್ಯಾಂಪ'ನಿಂದ೬೦೦ ಅಡಿ ದೂ ದಲ್ಲಿದ್ದ 'ಹಾಯ್ ಫ್ಲಾಯರ್' ಹಡಗಿನ ಡೆಕ್ಕಿ ಮೇಲೆ ನಿಂತಿದ್ದ ಸೆಕೆಂಡ್ ಮೇಟ್ ಲ್ಯಾಸ ಹ್ಯಾಮ್ ಇದ್ದಕ್ಕಿದ್ದಂತೆ ಅಂಗಾತಾಗಿ ನೆಲಕ್ಕೆ ಯಲ್ಪಟ್ಟ. ಅವನ ಕಣ್ಣಿಗೆ ಕತ್ತಲು ಕವಿಯಿತು ಅವನ ಸುತ್ತಲು ಉಕ್ಕಿನ ಚೂರುಗಳ ವರ್ಷ ವಾಯಿತು. ಗಾಯಗೊಂಡು ಚೀರುತ್ತಿದ ಖಲಾಸಿಗಳ ಧ್ವನಿ ಅವನಿಗೆ ಕೇಳಿಸಿತು. ಅವ ಸುದೈವದಿಂದ ಅವನಿಗೆ ಚಿಕ್ಕಪುಟ್ಟ ಗಾಯಗಳ ಮಾತ್ರ ಆದವು.

ದಂಡೆಯಲ್ಲಿದ್ದ ಒಂದು ಮನೆಯ ಬಾರದಲ್ಲಿ ಫ್ರ್ಯಾಂಕ್ ಟೇಲರ್ ನಿಂತಿದ್ದ. ಏನಾಯಿತ ಎಂದು ಅವನಿಗರಿವಾಗುವಷ್ಟರಲ್ಲಿ ಇಡೀ ಕಟ್ಟ ಕುಸಿದುಬಿತ್ತು. ಆತ ಅದು ಹೇಗೊ ಆ ಕಲ್ಲ ಮಣ್ಣುಗಳ ರಾಶಿಯಿಂದ ಹೊರಬಂದು ನೀರಿನಲ್ಲಿ ಬಿದ್ದಾಗ ಅವನ ಮೈಯಿಂದ ರಕ್ತ ಸುರಿಯು ತ್ತಿತ್ತು. ಆತ ಸುಮಾರು ಅರ್ಧ ಮೈಲು ಈಸಿ ತನ್ನ ಮನೆಯ ಬಳಿ ಬಂದಾಗ ಅಲ್ಲಿ ಮನೆ ಇರಲಿಲ್ಲ. ಅದು ಮುರಿದು ಮುದ್ದೆಯಾಗಿ ಬಿದ್ದಿತ್ತು. ಅವ ಕುಟುಂಬದವರೆಲ್ಲ ಮಾಯವಾಗಿದ್ದರು.

ನಗರದವರಿಗೆ ಏನು ಅನಾಹುತ ಜರುಗಿತ ಎಂದು ಮೊದಲಿಗೆ ಅರ್ಥವಾಗಲೇ ಇಲ್ಲ. ಹಡ ಗಿನ ಬೆಂಕಿ ನೋಡಲೆಂದು ದಂಡೆಯಲ್ಲಿ ನೆರೆದಿದ್ದ ಸುಮಾರು ೨೦೦ ಜನರಲ್ಲಿ ಹೆಚ್ಚಿನವರು ಸತ್ತಿ ದ್ದರು. ಬೆಂಕಿ ಆರಿಸಲೆಂದು ಬಂದಿದ್ದ ೨೭ ಜನ ಅಗ್ನಿಶಾಮಕ ದಲದವರಲ್ಲಿ ಎಲ್ಲರೂ ಸಾವನ್ನಪ್ಪಿ ದ್ದರು. ಅವರು ತಂದಿದ್ದ ನಾಲ್ಕು ಅಗ್ನಿಶಾಮಕ ಇಂಜಿನ್‌ಗಳಲ್ಲಿ ಒಂದು ಕಬ್ಬಿಣದ ಮುದ್ದೆ ಯಾಗಿ ಒಡೆದು ಚೂರುಚೂರಾದ 'ಗ್ರ್ಯಾಂಡ್ ಕ್ಯಾಂಪ'ನ ಮೇಲೆ ಬಿದ್ದಿತ್ತು. ಮಾನ್‌ಸಾಂಟೊ

ಕಾರಖಾನೆಯಲ್ಲಿ ಆಗ ಕೆಲಸ ಮಾಡುತ್ತಿದ್ದ ೪೩೧ ಜನರಲ್ಲಿ ೧೪೫ ಜನ ಸತ್ತಿದ್ದರು. ೨೦೦ ಜನರಿಗೆ ತೀವ್ರ ಸ್ವರೂಪದ ಗಾಯಗಳಾಗಿದ್ದವು.

ಇದು ಅನಾಹುತದ 'ಶ್ರೀಕಾರ' ವಾಗಿತ್ತು ಮಾತ್ರ. ಕಾದು ಕೆಂಡವಾಗಿದ್ದ ಉಕ್ಕಿನ ಚೂರುಗಳು ಆರು ದೊಡ್ಡ ಎಣ್ಣೆ ಟ್ಯಾಂಕುಗಳ ಮೇಲೆ ಬಿದ್ದಿದ್ದವು. ಎರಡು ಮೈಲುದ್ದದ ದಂಡೆಯ ಉದ್ದಕ್ಕೂ ಬೆಂಕಿ ಹರಡುವುದಕ್ಕೆ ಅವು ಕಾರಣವಾಗಿದ್ದವು. ಎಲ್ಲಿ ನೋಡಿದಲ್ಲಿ ಬೆಂಕಿ, ಸ್ಫೋಟ, ಆರ್ತನಾದ— ಅಂತಕನ ಕೋಲಾಹಲ ನಡೆಯಿತು.

'ಗ್ರ್ಯಾಂಡ್ ಕ್ಯಾಂಪ'ನಲ್ಲಿ ನಾರಿನ ಹಗ್ಗಗಳಿದ್ದವು. ಇವು ಉರಿಯುವ ಹಿಲಾಲುಗಳಾಗಿ ಬಾಣದಂತೆ ತೂರಿ ಬಂದು ಬಿದ್ದಲ್ಲೆಲ್ಲ ಬೆಂಕಿ ಹಚ್ಚಿದ್ದವು. ಒಂದು ಮನೆಯ ಬೆಂಕಿಯನ್ನಾರಿಸುವ ಪ್ರಯತ್ನವನ್ನು ಆರಂಭಿಸುವಷ್ಟರಲ್ಲಿ ಮತ್ತೆ ನಾಲ್ಕು ಮನೆಗಳಿಗೆ ಉರಿ ಹತ್ತಿದ್ದು ಕಾಣಿಸುತ್ತಿತ್ತು. ಸ್ಫೋಟದ ಬಲ ಎಷ್ಟಿತ್ತೆಂದರೆ ಹಡಗಿನಲ್ಲಿದ್ದ ೩೦ ಅಡಿ ಉದ್ದದ ೨,೭೦೦ ಪೌಂಡು ತೂಕದ ನೆಲ ಕೊರೆಯುವ ಡ್ರಿಲ್‌ಗಳು ೧೩,೦೦೦ ಅಡಿ ದೂರ ಗುಂಡಿನಂತೆ ಹಾರಿ ಬಿದ್ದಿದ್ದವು. 'ಓ' ಧಕ್ಕೆಯಿಂದ ಎರಡು ಮೈಲು ದೂರದಲ್ಲಿ ನಾಲ್ಕು ಚಕ್ರದ ಮುಚ್ಚುಗಾಡಿಯೊಂದಕ್ಕೆ ಹಾರಿಬಂದ ಉಕ್ಕಿನ ತಗಡೊಂದು ಬಡಿಯಿತು. ಆ ರಭಸಕ್ಕೆ ಒಳಗೆ ಕುಳಿತಿದ್ದ ದಂಪತಿಗಳು ಜಬ್ಬಿಯಾಗಿ ಹೋದರು.

ತಾಸುಗಟ್ಟಲೆ ಚಿಕ್ಕಪುಟ್ಟ ಸ್ಫೋಟಗಳು ಸಂಭವಿಸುತ್ತಲೇ ಇದ್ದವು ಊರು ಬಿಟ್ಟು ಹೋಗಿರೆಂದು ಪೋಲೀಸರು ಜನರಿಗೆ ಎಚ್ಚರಿಕೆ ಕೊಡುತ್ತಿದ್ದರು.

ಇನ್ನೂ ಒಂದು ಭೀಕರ ವಿಪತ್ತು ಕಾದಿತ್ತು. 'ಗ್ರ್ಯಾಂಡ್ ಕ್ಯಾಂಪ್' ಸ್ಫೋಟದಿಂದ ಗಂಧಕ ತುಂಬಿದ್ದ 'ಹಾಯ್ ಫ್ಲಾಯರ್' ಎಂಬ ಹಡಗ 'ವಿಲ್ಸನ್ ಬಿ. ಕೀನೆ'ಹಡಗಕ್ಕೆಬಂದು ಅಪ್ಪಳಿಸಿತು. 'ಹಾಯ್ ಫ್ಲಾಯರಿ'ನ ಇಂಜಿನನ್ನು ರಿಪೇರಿಗಾಗಿ ಕಳಚಿದ್ದರಿಂದ ಅದು ನಡೆಯುವಂತಿರಲಿಲ್ಲ. 'ಕೀನೆ' ಗೆ ಇಂಜಿನ್ ಚಾಲು ಮಾಡುವಷ್ಟು ಸಮಯ ಸಿಕ್ಕದೆ ಅದೂ ಸಿಕ್ಕಿಬಿದ್ದಿತ್ತು.

ಸಮುದ್ರದ ಮೇಲ್ಗಡೆಯೆಲ್ಲ ವಿಷಯುಕ್ತ ಜ್ವಾಲೆ-ಹೊಗೆ ತುಂಬಿಕೊಂಡಿದ್ದರೂ ಎರಡು ಜಗ್ಗುದೋಣಿಗಳು ಅಲ್ಲಿಗೆ ಬಂದವು. ನೀರಿನಲ್ಲಿ ಇನ್ನೂ ಜೀವ ಹಿಡಿದುಕೊಂಡಿದ್ದವರನ್ನು ಅವು ಮೇಲಕ್ಕೆತ್ತಿಕೊಂಡವಾದರೂ ಹಡಗುಗಳನ್ನು ಜಗ್ಗಿತರುವಷ್ಟು ಸಮೀಪ ಅವಕ್ಕೆ ಹೋಗಲಾಗಲಿಲ್ಲ.

ಧಕ್ಕೆಯಲ್ಲಿ ಸೇಂಟ್‌ಮೇರಿ ಚರ್ಚಿನ ಫಾದರ್ ವಿಲಿಯಂ ರೋಚ್ ಒಂದಿಷ್ಟು ಜನರನ್ನು ಕೂಡಿಸಿಕೊಂಡು ಮುರಿದುಬಿದ್ದ ಮನೆಗಳಲ್ಲಿ ಸಿಕ್ಕುಬಿದ್ದವರನ್ನು ಹೊರತೆಗೆಯುವ, ಮರಣೋನ್ಮುಖರಾದವರಿಗೆ ಪ್ರಾರ್ಥನೆಗಳನ್ನೋದಿ ಹೇಳುವ ಕಾರ್ಯಕ್ಕೆ ತೊಡಗಿದರು. ಮಧ್ಯ ರಾತ್ರಿಯ ಹೊತ್ತಿಗೆ 'ಹಾಯ್‌ಫ್ಲಾಯರ್'ಯಾವ ನಿಮಿಷದಲ್ಲಾದರೂ ಸ್ಫೋಟವಾಗಬಹುದು ಎಂದು ಅಧಿಕಾರಿಗಳು ಅವರನ್ನು ಎಚ್ಚರಿಸಿದರು. ರಕ್ಷಣಾಕಾರ್ಯದಲ್ಲಿ ತೊಡಗಿದ್ದವರನ್ನೆಲ್ಲ ಪೋಲೀಸರು ಚದುರಿಸತೊಡಗಿದರು. ಆದರೆ ಫಾದರ್ ರೋಚ್ ಮತ್ತು ಅವರ ದಲದ ಹೆಚ್ಚಿನವರು ಅಲ್ಲಿಂದ ಹೋಗಲೊಪ್ಪಲಿಲ್ಲ. ರಾತ್ರಿ ೧.೧೧ ಗಂಟೆಗೆ 'ಹಾಯ್ ಫ್ಲಾಯರ್' ಹಡಗ ಸ್ಫೋಟವಾಯಿತು. ಆ ಆಘಾತದಲ್ಲಿ ಫಾದರ್ ರೋಚ್ ಮತ್ತು ಅವರ ಸಹಾಯಕರು ಇಹಲೋಕ ತ್ಯಜಿಸಿದರು.

ನಗರದಲ್ಲಿ ಅಳಿದುಳಿದ ಜನ ಕೂಡ ಈ ಎರಡನೆಯ ಸ್ಫೋಟದಿಂದ ಕಂಗಾಲಾಗಿ ಹಾದಿ ಸಿಕ್ಕತ್ತ ಓಡಿದರು. ಆದರೆ ರಕ್ಷಣಾದಲದ ಕೆಲವರು ಮಾತ್ರ ಧೈರ್ಯದಿಂದ ತಮ್ಮ ಕೆಲಸ ನಡೆಸಿಯೇ ಇದ್ದರು. ೩೮ ವಯಸ್ಸಿನ ಕ್ಲೇಮಾರ್ಟಿನ್ ಎಂಬ ದಾಯಿ ತನ್ನ ಮುಖಕ್ಕೆ ಗಾಯವಾಗಿದ್ದರೂ ಎದೆಯ ಎಂಟು ಎಲುಬುಗಳು ಮುರಿದಿದ್ದರೂ ಗಾಯಗೊಂಡವರ ಉಪಚಾರ ಮಾಡುವುದನ್ನು ನಿಲ್ಲಿಸಲಿಲ್ಲ. ಟೆಲಿಫೋನ್ ನೌಕರರು

ಇಡೀ ಎರಡು ದಿನಗಳ ವರೆಗೆ ಅನ್ನ ನೀರು, ನಿದ್ರೆಯಿಲ್ಲದೆ ದುಡಿದರು.

ಮೂರು ದಿನಗಳ ನಂತರ ಒಟ್ಟು ಆದ ಹಾನಿಯ ಲೆಕ್ಕ ಸಿಕ್ಕಿತು. ನಗರದ ೧೭,೫೦೦ ಜನರಲ್ಲಿ ೫೭೦ ಜನ ಸತ್ತಿದ್ದರು. ೩,೫೦೦ ಜನರಿಗೆ ಗಂಭೀರ ಸ್ವರೂಪದ ಗಾಯಗಳಾಗಿದ್ದವು. ದಂಡೆಗುಂಟ ಇದ್ದ ೧೨,೫೦,೦೦,೦೦೦ ಡಾಲರ್ ಆಸ್ತಿ (ಕಾರಖಾನೆ, ಗುದಾಮು ಮೊದಲಾದವು) ಯಲ್ಲಿ ಮುಕ್ಕಾಲು ಪಾಲು ನಷ್ಟವಾಗಿ ಹೋಗಿತ್ತು.

ಆದರೆ ಇನ್ನೂ ನಗರದಲ್ಲಿ ಅಲ್ಲಲ್ಲಿ ಬೆಂಕಿ ಉರಿಯುತ್ತಿದ್ದಾಗಲೇ ಪುನರ್ನಿವೇಶನ ಕಾರ್ಯ ಆರಂಭವಾಯಿತು. ದೇಶದ ಸಂಘ ಸಂಸ್ಥೆಗಳು ಜನರ ನೆರವಿಗೆ ಬಂದಿದ್ದವು. *

## ಹದಿಮೂರು ಸಾವಿರ ಪೌಂಡಿನ ಚುಂಬನ !

೧೯೫೯ ಏಪ್ರಿಲ್ ೧೦ ರಂದು ತರುಣ ಪ್ರಣಯಿಗಳಿಬ್ಬರು ಲಂಡನ್ನಿನ ರಸ್ತೆಯ ಶಾಂತಪ್ರದೇಶವೊಂದರಲ್ಲಿ "ಚುಂಬನ ಮತ್ತು ಹರಟೆಗೆ" ಎಂದು ತಮ್ಮ ಕಾರನ್ನು ನಿಲ್ಲಿಸಿದರು. ಹುಡುಗಿಯ ತಂದೆ ತಾಯಿಯರು ಸಿನೆಮಾಕ್ಕೆ ಹೋಗಿದ್ದುದರಿಂದ ಅವರಿಗಾಗಿ ಇವರಿಬ್ಬರು ಒಂದು ಘಂಟೆ ಕಾಯಬೇಕಿತ್ತು. ಆದರೆ ಕೆಲವೇ ನಿಮಿಷಗಳಲ್ಲಿ ಇಬ್ಬರು ಪೋಲೀಸರು ಅಲ್ಲಿಗೆ ಬಂದು ಸಾರ್ವಜನಿಕ ಸಭ್ಯತೆಯನ್ನು ಮುರಿದರೆಂದು ಆಪಾದಿಸಿ ಅವರನ್ನು ದಸ್ತಗಿರಿ ಮಾಡಿದರು.

ಕೊನೆಗೆ ಪ್ರಣಯಿಗಳ ಪರವಾಗಿಯೆ ಕೋರ್ಟು ತೀರ್ಮಾನಿಸಿತು. ಆದರೆ ಇದಕ್ಕೆ ಮೊದಲು ಅವರನ್ನು ಮೂರು ಕೋರ್ಟುಗಳಲ್ಲಿ ವಿಚಾರಣೆಗೆ ಒಳಪಡಿಸಲಾಯಿತು. ಈ ಮೊಕದ್ದಮೆ ಎರಡು ವರ್ಷಗಳಷ್ಟು ಸಮಯ ತೆಗೆದುಕೊಂಡಿತು-ಕೊನೆಯ ತೀರ್ಪಿನಲ್ಲಿ ಅವರಿಗೆ ಹದಿಮೂರು ಸಾವಿರ ಪೌಂಡಿಗಿಂತಲೂ ಹೆಚ್ಚಿನ ಪರಿಹಾರಧನ ನೀಡಲಾಯಿತು. (ಅಂದರೆ ನೂರತ್ತೊಂಭತ್ತ ಐದು ಸಾವಿರ ರೂಪಾಯಿ.)

ಇಬ್ಬರು ಪೋಲೀಸರು ಈ ಹಿಂದೆ ಇಂಥ ತೊಂಭತ್ತು ಕೇಸುಗಳನ್ನು ಕೋರ್ಟಿನ ಮುಂದೆ ತಂದು ಪ್ರತಿಯೊಂದರಲ್ಲಿಯೂ ಗೆದ್ದವರಾಗಿದ್ದರು.

ಈ ತರುಣ ಪ್ರಣಯಿಗಳು (ಮೂವತ್ತೊಂದು ವರ್ಷದ ಜೆರಾಲ್ಡ್ ಸೆಲ್ಬಿ ಮತ್ತು ಇಪ್ಪತ್ತನಾಲ್ಕು ವರ್ಷದ ಎನ್ನೆ ರೋಸಾ ಫರ್ಮನ್) ಪೋಲೀಸರ ಆಪಾದನೆಯನ್ನು ಕೇಳಿ ಮೊದಲು ದಿಗ್ಭ್ರಾಂತಿಗೊಂಡರೂ ತಮ್ಮ ನಿರ್ದೋಷಿತ್ವವನ್ನು ಸಿದ್ಧಪಡಿಸಲು ಟೊಂಕ ಕಟ್ಟಿದರು.

ಮೊದಲನೆಯ ವಿಚಾರಣೆಯಲ್ಲಿ ಅವರು ಆಪಾದನೆಯಿಂದ ಬಿಡುಗಡೆ ಹೊಂದಿದರೂ ಕೋರ್ಟು ಪರಿಹಾರಧನ ಕೊಡಲು ನಿರಾಕರಿಸಿತು. ತಮಗಾದ ಅನ್ಯಾಯಕ್ಕೆ ಪರಿಹಾರ ಕೊಡಬೇಕೆಂದು ಎರಡನೆಯ ಬಾರಿ ಅವರು ದಾವೆ ಹೂಡಿದಾಗಲೂ ಜ್ಯೂರಿ ಒಪ್ಪಲಿಲ್ಲ. ಮೂರನೆಯ ಬಾರಿ ಜ್ಯೂರಿ ಅವರ ಕೇಳಿಕೆಗೆ ಒಪ್ಪಿತು. ಇಬ್ಬರ ನಡತೆಯೂ ನಿಷ್ಕಳಂಕವಾಗಿತ್ತೆಂದು ಸಿದ್ಧವಾಯಿತು.

ಸಾರ್ವಜನಿಕರು ಇವರ ಬಗ್ಗೆ ತುಂಬಾ ಸಹಾನುಭೂತಿ ತೋರಿದ್ದರು. ಅವರು ಕೋರ್ಟಿನಲ್ಲಿ ಜಯಗಳಿಸಿ ಹೊರಬರುತ್ತಿದ್ದ ಹಾಗೆಯೆ ತಲೆಗೂದಲು ಹಣ್ಣಾದ ಮುದುಕಿಯೊಬ್ಬಳು ಗುಂಪಿನಲ್ಲಿ ದಾರಿ ಮಾಡಿಕೊಂಡು ಅವರಿದ್ದಲ್ಲಿಗೆ ಬಂದು ಮಿಸ್ ಫರ್ಮನ್‌ಳಿಗೆ ಒಂದು ಚಾಕೊಲೇಟ್ ಡಬ್ಬವನ್ನು ಉಡುಗೊರೆಯಿತ್ತಳು. ನೂರಾರು ಜನರು ಅವರನ್ನು ಮೆಚ್ಚಿ ಜಯಕಾರಗೈದರು.

ಸಂಗ್ರಹ:— ಲಕ್ಷ್ಮೀನಾರಾಯಣ

ಸಿಡಿತಗಳಿಗೂ ನೋವುಗಳಿಗೂ

# ಸಾರಿಡಾನ್

'ರೋಶ್'

ತೆಗೆದುಕೊಳ್ಳಿರಿ !















**ಒಂದೇ ಒಂದು ಮಾತ್ರೆ ಸಾಕು**

**ಒಂದು ಮಾತ್ರೆಗೆ 13 ಪೈಸೆ**

ಸಾರಿಡಾನ್ ಸಿಡಿತಗಳನ್ನೂ, ನೋವುಗಳನ್ನೂ ಬಲು ಬೇಗನೆ ನಿವಾರಿಸಿ, ಶರೀರಕ್ಕೆ ಆರಾಮವನ್ನೂ, ಮನಸ್ಸಿಗೆ ಉಲ್ಲಾಸವನ್ನೂ ನೀಡುತ್ತದೆ. ಇದೇ ಸಾರಿಡಾನ್‌ನ ತ್ರಿವಿಧ-ಕ್ರಿಯೆ. ತಲೆನೋವು, ಮೈಕೈನೋವು, ಹಲ್ಲುನೋವು, ಮೈ ಬಿಸಿಯಾಗುವುದು ಮತ್ತು ಅಸ್ವಸ್ಥತೆ— ಇವುಗಳಿಗೆ ಸಾರಿಡಾನ್ ತೆಗೆದುಕೊಳ್ಳಿರಿ. ಅದು ಬಲು ಬೇಗನೆ, ನಿಶ್ಚಿತವಾಗಿ, ನಿರಪಾಯಕರವಾಗಿ ಉಪಶಮನಗೊಳಿಸುತ್ತದೆ. ದೊಡ್ಡವರಿಗೆ ಒಂದು ಮಾತ್ರೆ ಸಾಕಾಗುತ್ತದೆ. ಮಕ್ಕಳಿಗೆ ¼ ನಿಂದ ½ ಮಾತ್ರೆ ಸಾಕು.

'ರೋಶ್' ಉತ್ಪಾದನ

ಸೋಲ್ ಡಿಸ್ಟ್ರಿಬ್ಯೂಟರ್ಸ್: ವೋಲ್ಟಾಸ್ ಲಿಮಿಟೆಡ್

JWT VT 3938

ಅವನು ರಾಷ್ಟ್ರಗಳ ಅಧ್ಯಕ್ಷರನ್ನೂ ಪ್ರಧಾನಮಂತ್ರಿಗಳನ್ನೂ ಅರಿತಿದ್ದ; ಸರಕಾರಗಳಿಗೆ ಸಾಲ ಕೊಟ್ಟಿದ್ದ.

# ಜಗತ್ತಿನ ಅಪ್ರತಿಮ ದಗಾಖೋರ

ಪ್ರ. ಮ. ಗಲಗಲಿ

ಇಂದಿಗೆ ೩೦ ವರ್ಷಗಳ ಕೆಳಗೆ, ೧೯೩೨ ಮಾರ್ಚ್ ತಿಂಗಳ ಒಂದು ಶನಿವಾರ ಪ್ಯಾರೀಸಿನ ಒಂದು ಆಢ್ಯ ಹೋಟೆಲಿನಲ್ಲಿಯ ತನ್ನ ಸುಸಜ್ಜಿತ ಕೋಣೆಯಲ್ಲಿ ಮಲಗಿಕೊಂಡು ಐವರ್ ಕ್ರೂಗರ್ ತನ್ನ ಹೃದಯದ ನಟ್ಟನಡುವಿಗೆ ಗುರಿಯಿಟ್ಟು ಗುಂಡಿಕ್ಕಿಕೊಂಡು ಸತ್ತನು. ಹತ್ತು ಸಾವಿರ ಪ್ರಯತ್ನಗಳಲ್ಲಿ ಒಮ್ಮೆ ಇಂಥ ಆತ್ಮಹತ್ಯೆ ಯಶಸ್ವಿಯಾಗುತ್ತದೆಂದು ಫ್ರೆಂಚ್ ಪೋಲೀಸರು ಹೇಳಿದರು. ಈ ಅಸಾಧಾರಣ ಆತ್ಮಹತ್ಯೆಯ ಬೆನ್ನಿಗೆ ಅಸಾಧಾರಣ ಘಟನೆಗಳೇ ಜರಗಿದವು: ಹತ್ತಿಪ್ಪತ್ತು ಅಂತಾರಾಷ್ಟ್ರೀಯ ಖ್ಯಾತಿಯ ಬ್ಯಾಂಕುಗಳೂ ಲಕ್ಷಾವಧಿ ಜನರೂ ದಿವಾಳಿಯೆದ್ದರು. ಸ್ವೀಡನ್ನಿನ ಸರಕಾರ ರಾಜೀನಾಮೆಯಿತ್ತಿತು. ನ್ಯೂಯಾರ್ಕ್, ಲಂಡನ್ ಶೇರ್ ಪೇಟೆಗಳಿಗೆ ಈ ಹೊಡೆತದಿಂದ ಚೇತರಿಸಿಕೊಳ್ಳಬೇಕಾದರೆ ನಾಲ್ಕೈದು ವರ್ಷ ಹಿಡಿಯಿತು.

ಐವರ್ ಕ್ರೂಗರ್ ಬಹುಶಃ ಜಗತ್ತಿನ ಅತ್ಯದ್ಭುತ ಮೋಸಗಾರನಾಗಿದ್ದನು. ೧೮೮೦ ರಲ್ಲಿ



ಸ್ವೀಡನ್ನಿನ ಕಲ್ಮರ್ ಎಂಬಲ್ಲಿ ಹುಟ್ಟಿದ ಆತನಿಗೆ ಚಿಕ್ಕಂದಿನಲ್ಲಿ ನೆಪೋಲಿಯನ್ ಆದರ್ಶಪುರುಷನಾಗಿದ್ದ. ಆದರೂ ತಾನು ನೆಪೋಲಿಯನ್ನನಂತೆ ಸೆಂಟ್ ಹೆಲೆನಾದಲ್ಲಿ ಸಾಯಲಾರೆ ಎನ್ನುತ್ತಿದ್ದನಾತ. ಬಾಲಕನಾಗಿದ್ದಾಗಿನಿಂದಲೇ ಇತರ ಬಾಲಕರಂತೆ ಆಟಪಾಟ ಹೊಡೆದಾಟಗಳಲ್ಲಿ ಸೇರದೆ ಚೆನ್ನಾಗಿ ಊಟ ಮಾಡಿ ಆಲಸಿಯಂತೆ ನಟಿಸುತ್ತ, ಸುತ್ತಲಿನ ಪ್ರಪಂಚವನ್ನು ತೀಕ್ಷ್ಣ ದೃಷ್ಟಿಯಿಂದ ನೋಡುತ್ತ, ಜನರ ರೀತಿನೀತಿ ಆಶೆದುರಾಶೆಗಳನ್ನು ಗಮನಿಸುತ್ತ ತನ್ನವೇ ಹಗಲುಗನಸುಗಳಲ್ಲಿ ಮುಳುಗಿರುತ್ತಿದ್ದನವನು. ಅವನ ಸ್ಮರಣ ಶಕ್ತಿ ಎಷ್ಟು ಸೂಕ್ಷ್ಮವಾಗಿತ್ತೆಂದರೆ ಒಮ್ಮೆ ಚರ್ಚಿನಿಂದ ತಿರುಗಿ ಬಂದ ಮೇಲೆ ಕ್ರೂಗರ್ ಪಾದ್ರಿಯ ಅಂದಿನ ಭಾಷಣವನ್ನು ಅಕ್ಷರಶಃ ಮೊದಲಿಂದ ಕೊನೆಯ ವರೆಗೆ ಮತ್ತು ತಿರುಗಿ ಕೊನೆಯಿಂದ ಮೊದಲ ವರೆಗೆ ಅಂದು ತೋರಿಸಿದನು. ಇತರರು ಓದಿದ್ದನ್ನು ಕೇಳಿ ಕೊಂಡೇ ಅವನು ವಿದ್ಯಾಭ್ಯಾಸವನ್ನು ಪೂರ್ಣ ಮಾಡಿದನು.

ಕ್ರೂಗರನಿಗೆ ತನ್ನ ವಯಸ್ಸುಮೀರಿದ ಬುದ್ಧಿ ಮತ್ತೆಯ ಅರಿವಿತ್ತು. ಅದಕ್ಕಾಗಿ ಹೆಮ್ಮೆಯೂ ಇತ್ತು. ಚಿಕ್ಕವನಾಗಿದ್ದಾಗಲೆ ದಕ್ಕಿಸಿಕೊಳ್ಳಲು ಸಾಧ್ಯವಿದ್ದಲ್ಲೆಲ್ಲ ಅವನು ಮೋಸ ಮಾಡುತ್ತಿದ್ದನು. ಅರ್ಧ ಸತ್ಯ ಅರ್ಧ ಅಸತ್ಯವನ್ನು ಬೆರಸಿ ಹೇಳಿದರೆ ತಪ್ಪಿಸಿಕೊಳ್ಳುವುದು ಸುಲಭವೆಂದು ಮನಗಂಡ ಅವನಿಗೆ ಈ ದಾರಿಯಿಂದ ತಂದೆತಾಯಿ ಗೆಳೆಯರು ಶಾಲೆ ಕಾಲೇಜುಗಳ ಅಧ್ಯಾಪಕರಾದಿಯಾಗಿ ಸಕಲರನ್ನೂ ಮೋಸಗೊಳಿಸುವ ಕಲೆ ಸಾಧಿಸಿತ್ತು.

ಸ್ಟಾಕ್‌ಹೋಂನಲ್ಲಿ ಎಂಜಿನಿಯರಿಂಗ್ ಕಾಲೇಜಿನಲ್ಲಿ ಕಲಿಯುತ್ತಿದ್ದಾಗ ಕ್ರೂಗರ್ ತನ್ನ ಸೂಕ್ಷ್ಮ ನಿರೀಕ್ಷಣ ಶಕ್ತಿಯಿಂದ ಎಲ್ಲ ಪ್ರೊಫೆಸರರ ದೌರ್ಬಲ್ಯಗಳನ್ನು ಗುರುತಿಸಿ ಅವರ ಪ್ರಶ್ನೆಗಳಿಗೆ, ಅವರಿಗೆ ತಿಳಿಯದ ವಿಷಯಗಳನ್ನು ಬೆರಸಿ ಉತ್ತರ ಕೊಟ್ಟು ಅವರನ್ನು ಮಂಕುಗೊಳಿಸುತ್ತಿದ್ದನು. ಒಮ್ಮೆ ರೇಲ್ವೆ ಎಂಜಿನಿನ ಮಾದರಿ ತಯಾರಿಸಬೇಕಾಗಿ ಬಂದಾಗ ಅವನು ಹಿಂದಿನ ವರ್ಷ ಎಂಜಿನ್ ತಯಾರಿಸಿ ಪಾಸಾಗಿ ಹೋದ ವಿದ್ಯಾರ್ಥಿಗಳನ್ನು ಹುಡುಕಿ ತೆಗೆದು ಮೂರು ಎಂಜಿನ್ನುಗಳನ್ನು ದೊರಕಿಸಿ ಅವನ್ನೆಲ್ಲ ಬಿಚ್ಚಿ ತನ್ನದೊಂದು ಬೇರೆಯೆ ಎಂಜಿನ್ ತಯಾರಿಸಿ ಪ್ರೊಫೆಸರರನ್ನೂ ಅವನ ಮೂವರು ಮಿತ್ರರನ್ನೂ ಸೇರಿಯೇ ಅಪ್ರತಿಭರಾಗಿ ಮಾಡಿದನು.

ಕ್ರೂಗರ್ ೨೦ ನೇ ವಯಸ್ಸಿಗೆ ಎಂಜಿನಿಯರನಾಗಿ ಕಾಲೇಜಿನಿಂದ ಹೊರಬಂದನು. ಬಳಿಕ ಹತ್ತು ವರ್ಷ ಕಾಲ ಅಮೇರಿಕ ಮೆಕ್ಸಿಕೋ ಮೊದಲಾದ ದೇಶಗಳಲ್ಲಿ ಸಂಚರಿಸಿ ಪ್ರಪಂಚದ ಬಗ್ಗೆ ಅಪಾರ ಜ್ಞಾನವನ್ನೂ ಅನುಭವವನ್ನೂ ಸಂಪಾದಿಸಿಕೊಂಡು ಬಂದನು. ಅವನು ಮಾತಾಡುವುದೂ ಜನರೊಡನೆ ಬೆರೆಯುವುದೂ ಅಪರೂಪವಾದರೂ ಒಮ್ಮೆ ಬಾಯಿ ತೆರೆದನೆಂದರೆ ಅವನ ವಾಕ್ಚಾತುರ್ಯಕ್ಕೂ ಸಂಮೋಹಕ ಧ್ವನಿಗೂ ಮರುಳಾಗದವರೇ ಇರಲಿಲ್ಲ. ಜೀವನದಲ್ಲಿ ಯಶಸ್ಸು ಸಿಗಬೇಕಾದರೆ ಚಾಣಾಕ್ಷತೆಯೊಂದೇ ಸಾಲದು. ಪ್ರಾಮಾಣಿಕ ಮುಖಮುದ್ರೆಯೂ ಬೇಕೆಂದು ಅವನಿಗೆ ಗೊತ್ತಿತ್ತು. ಈ ಮುಖವಾಡ ಧರಿಸಲು ಅವನಿಗೆ ಕಷ್ಟವಾಗಲಿಲ್ಲ.

ಈ ಮೂಲಧನದೊಂದಿಗೆ ಒಬ್ಬ ಗೆಳೆಯನ ಸಂಗಡ "ಕ್ರೂಗರ್ ಮತ್ತು ಟೋಲ್" ಎಂಬ ಎಂಜಿನಿಯರಿಂಗ್ ಕಂಪೆನಿ ಪ್ರಾರಂಭಿಸಿದನು. ಐದೇ ವರ್ಷಗಳಲ್ಲಿ ಸ್ಟಾಕ್‌ಹೋಂನಲ್ಲಿ ಕಟ್ಟಡಗಳ ನಿರ್ಮಾಣದ ಸ್ವರೂಪವೇ ಬದಲಾಗಿ ಬಿಡುವಂತೆ ಅವನು ಮಾಡಿದನು. ಅಲ್ಲಿನ ಒಲಂಪಿಕ್ ಸ್ಟೇಡಿಯಂ, ನಗರ ಭವನ ಮೊದಲಾದವು ಅವನ ಪ್ರತಿಭೆಗೆ ಸಾಕ್ಷಿಯಾಗಿ ಇಂದಿಗೂ ಇವೆ. ಅವನ ಕರ್ತೃತ್ವ ಶಕ್ತಿಗೊಂದು ಉದಾಹರಣೆ ಹೇಳುತ್ತಾರೆ. ಮೊದಲನೇ ವರ್ಷವೇ ಅವನು, ಅವಧಿ ಮೀರಿದರೆ ದಿನಕ್ಕೆ ೫೦೦ ಕ್ರೋನರ್ ದಂಡ; ಅವಧಿಯೊಳಗೆ ಮುಗಿಸಿದರೆ ದಿನಕ್ಕೆ ಅಷ್ಟೇ ಬಹುಮಾನ ಎಂಬ ಕರಾರಿನಿಂದ ಒಂದು

ಕಂಟ್ರ್ಯಾಕ್ಟ್ ಹಿಡಿದನು. ಹಗಲಿರುಳು ದುಡಿದು ಅವಧಿಗಿಂತ ಎರಡು ತಿಂಗಳು ಮೊದಲೇ ಕಟ್ಟಡ ಮುಗಿಸಿ ಕ್ರೂಗರ್ ೩೦,೦೦೦ ಕ್ರೋನರ್ ಬಹುಮಾನ ಹೊಡೆದನು.

ಸಿಮೆಂಟ್, ಮರ ಮೊದಲಾದ ಅಭಾವದಿಂದ ಅವನ ಎಂಜಿನಿಯರಿಂಗ್ ಉದ್ಯಮ ಅವನತಿಗೆ ಬಂದಾಗ ಅವನು ತನ್ನ ಮನೆತನದ ಬೆಂಕಿಪೆಟ್ಟಿಗೆ ಉದ್ಯಮದಲ್ಲಿ ತಂದೆಗೆ ನೆರವಾಗಲು ಹೋದನು. ಐದಾರು ವರ್ಷಗಳಲ್ಲಿ ಅವನಿಗೆ "ಬೆಂಕಿಪೆಟ್ಟಿಗೆ ರಾಜ" ಎಂಬ ಹೆಸರು ಬಂತು. ಪ್ರಪಂಚದಲ್ಲೇ ದೊಡ್ಡದಾದ ಬೆಂಕಿಪೆಟ್ಟಿಗೆ ಉತ್ಪಾದಿಸುವ ಅದ್ಭುತ ಗುತ್ತಿಗೆಯನ್ನವನು ಕಟ್ಟಿದನು. ಉತ್ಪಾದನೆಯ ಪದ್ಧತಿಗಳ ಸುಧಾರಣೆಯನ್ನಷ್ಟೇ ಆತ ಅವಲಂಬಿಸಲಿಲ್ಲ. ಇತರ ಬೆಂಕಿಪೆಟ್ಟಿಗೆ ಉತ್ಪಾದಕರನ್ನು ತಳಕಾಣಿಸಲು ರಾಜಕೀಯ ಮತ್ತು ಹಣಕಾಸಿನ ಒತ್ತಾಯ, ಸುಳ್ಳು ಪ್ರಚಾರ, ಕೊರಳುಕೊಯ್ಕ ಪೈಪೋಟಿ ಸವಿಮಾತಿನ ಮೋಸ ಇವೆಲ್ಲವುಗಳನ್ನೂ ಉಪಯೋಗಿಸಿ ಕೊನೆಗೆ ಯಾವುದೂ ನಡೆಯದಿದ್ದರೆ ಎದುರಾಳಿಗಳು ಕೇಳಿದ್ದಕ್ಕಿಂತ ನಾಲ್ಕೈದು ಪಟ್ಟು ಬೆಲೆ ತೆತ್ತು ಇಡೀ ಕಾರ್ಖಾನೆಗಳನ್ನೇ ಕೊಂಡುಕೊಳ್ಳುತ್ತಿದ್ದನು. ಅವನೊಡನೆ ವ್ಯವಹಾರ ಮಾಡಿದ ಉದ್ಯಮಿಯೊಬ್ಬನು "ಕ್ರೂಗರನ ಅತಿ ಹೇಯ ಉಪಾಯವೆಂದರೆ ಅವನ ಔದಾರ್ಯ" ಎಂದು ಉದ್ಗಾರ ತೆಗೆದಿದ್ದನು. ಬೆಂಕಿಪೆಟ್ಟಿಗೆ ಉದ್ಯಮದ ಮೇಲೆ ಸರ್ವಾಧಿಕಾರ ಸ್ಥಾಪಿಸುವಾಗ ಕೆಲವೊಮ್ಮೆ ಕ್ರೂಗರ್ ಪಿಶಾಚಿ ಹಿಡಿದವನಂತೆ ಕಾರ್ಯತತ್ಪರನಾಗಿರುತ್ತಿದ್ದ.

ಸ್ಟಾಕ್‌ಹೋಂನಲ್ಲಿ ಅವನು ಕಟ್ಟಿಸಿದ್ದ ೧೨೫ ಕೋಣೆಗಳ "ಬೆಂಕಿಪೆಟ್ಟಿಗೆಯ ಅರಮನೆ" ಎಂಬ ಭವ್ಯ ಕಚೇರಿ ಅವನ ಕಲ್ಪನಾಚಾತುರ್ಯದ ಪರಮಾವಧಿಯಾಗಿತ್ತು. ಅಲ್ಲಿ ಅವನು ತನ್ನ ಕೋಣೆಯಲ್ಲಿ ಮೂರು ಅಪೂರ್ವ ಟೆಲಿಫೋನುಗಳನ್ನು ಹಾಕಿಸಿಕೊಂಡಿದ್ದನು. ಒಂದನ್ನೆತ್ತಿ ಮೇಜಿನ ಮೇಲಿಟ್ಟರೆ ಆ ವಿಶಾಲ ಕೋಣೆಯಲ್ಲಿ ಎಲ್ಲಿ ನಿಂತು ಕ್ರೂಗರ್ ಮಾತಾಡಿದರೂ ಟೆಲಿಫೋನಿನ ಆ ತುದಿಯಲ್ಲಿದ್ದು ಮಾತಾಡುವವರಿಗೆ ಸ್ಪಷ್ಟವಾಗಿ ಕೇಳಿಸುತ್ತಿತ್ತು; ಅವರು ಹೇಳಿದ್ದು ಇವನಿಗೂ ಕೇಳಿಸುತ್ತಿತ್ತು. ಇನ್ನೊಂದು ಟೆಲಿಫೋನು ಅವನ ಅರ್ಧಸತ್ಯದ ಮಾದರಿಯಾಗಿತ್ತು. ಆತ ತನ್ನೆದುರು ಕೂತ ವ್ಯಕ್ತಿಯ ಮೇಲೆ ತನ್ನ "ಛಾಪು ಒಗೆ"ಯಬೇಕೆನಿಸಿದಾಗ ಮೇಜಿನ ಕೆಳಗೆ ಮರೆಯಾಗಿದ್ದ ಒಂದು ಗುಂಡಿಯನ್ನು ಕಾಲಿಂದೊತ್ತುತ್ತಿದ್ದ. ಕೂಡಲೇ ಈ ಟೆಲಿಫೋನಿನ ಗಂಟೆ ಬಾರಿಸುತ್ತಿತ್ತು. ರಿಸೀವರನ್ನೆತ್ತಿ ಕ್ರೂಗರ್ ಪ್ರಸಂಗಾನುಸಾರವಾಗಿ ಯಾವನೊಬ್ಬ ಪ್ರಧಾನ ಮಂತ್ರಿಯೊಡನೆ ಅಥವಾ ಯಾವುದಾದರೂ ದೇಶದ ಅಧ್ಯಕ್ಷನೊಡನೆ ಸಂಭಾಷಿಸುತ್ತಿರುವಂತೆ ನಟಿಸುತ್ತಿದ್ದನು. ಅಂಥ ಪ್ರತಿಷ್ಠಿತರ ಸಂಬಂಧ ಅವನಿಗೆ ಇರಲಿಲ್ಲೆಂದಲ್ಲ. ಆದರೆ ಆ ಕ್ಷಣದಲ್ಲಿ ಅದು ಕೇವಲ ಕಾಲ್ಪನಿಕವಾಗಿರುತ್ತಿತ್ತು.

ದುರ್ದೈವದಿಂದ ಎರಡನೇ ಮಹಾಯುದ್ಧದ ನಂತರ ಅನೇಕ ಸರಕಾರಗಳು ತಂತಮ್ಮ ದೇಶದ ಕಡ್ಡಿಪೆಟ್ಟಿಗೆ ಉದ್ಯಮಗಳನ್ನು ರಾಷ್ಟ್ರೀಕರಿಸಿದ್ದರಿಂದ ಕ್ರೂಗರನ ಸರ್ವಾಧಿಕಾರ ಕುಸಿದುಬಿತ್ತು. ಕ್ರೂಗರ್ ಒಂದು ವಾರ ಏಕಾಂತ ಚಿಂತನೆಯಲ್ಲಿ ಮುಳುಗಿದ್ದ. ಅದರ ಕೊನೆಗೆ ಅವನು ಅಣಿಗೊಳಿಸಿದ ಯೋಜನೆಯ ಆಳ ಅಗಲಗಳ ಸರಿಯಾದ ಅಂದಾಜು ಜಗತ್ತಿಗೆ ಸಿಕ್ಕಿದ್ದು ಅವನು ಸತ್ತು ಹನ್ನೆರಡು ವರ್ಷಗಳ ಮೇಲೆಯೆ.

೧೯೨೨ ರಲ್ಲಿ ಕ್ರೂಗರ್ ಅಮೇರಿಕಕ್ಕೆ "ದಂಡಯಾತ್ರೆ" ಮಾಡಿದನು. ಅಲ್ಲಿ ಅವನ ಪ್ರಸಿದ್ಧಿ ಅಷ್ಟಾಗಿ ಇರಲಿಲ್ಲ. ಅದಕ್ಕಾಗಿ ಹಡಗಿನಲ್ಲಿ ಮಧ್ಯ ಅಟ್ಲಾಂಟಿಕ್ ದಾಟಿದ ಮೇಲೆ ಕ್ರೂಗರ್ ಹಡಗಿನ ಕಪ್ತಾನನ ಹತ್ತಿರ ಹೋಗಿ ಹಡಗಿನ ತಂತಿ ಕಚೇರಿಯನ್ನು ಅದರ ಸಿಬ್ಬಂದಿಯೊಂದಿಗೆ ೨೪ ಗಂಟೆಗಳ ಕಾಲ ಗುತ್ತಿಗೆಗೆ ಹಿಡಿದು ಪ್ರಯಾಣಿಕರಾರಿಗೂ ಅದರ ಉಪಯೋಗ ಸಿಗದಂತೆ ಮಾಡಿದನು. ಈ ಒಂದು ಕೃತಿಯಿಂದಲೇ ಅಮೇರಿಕ ತಲಪಿದಾಗ ಅವನು

ಅಲ್ಲಿ ಪ್ರಸಿದ್ಧ ವ್ಯಕ್ತಿಯಾಗಿದ್ದನು.

ಅಮೇರಿಕದಲ್ಲಾತ ಮಹಾ ಮಹಾ ಬ್ಯಾಂಕರರನ್ನು ತನ್ನ ಸಮ್ಮೋಹನ ಶಕ್ತಿಯಿಂದ ಬುಟ್ಟಿಗೆ ಹಾಕಿಕೊಂಡನು. ತನ್ನ ಅಸಂಖ್ಯ ಕಂಪೆನಿಗಳು ಪ್ರತಿವರ್ಷ ಹೆಚ್ಚು ಹೆಚ್ಚು ಲಾಭ ಗಳಿಸುತ್ತಿರುವುದನ್ನು ಲೆಕ್ಕ ಪತ್ರಗಳ ಮೂಲಕ ತೋರಿಸಿದನು. ಅವನು ಸತ್ತ ಮೇಲೆಯೆ ಅದೆಲ್ಲ ಸುಳ್ಳೆಂದು ಸಿದ್ಧವಾದದ್ದು. ಯುರೋಪಿನಲ್ಲಿ ಬೆಂಕಿ ಪೆಟ್ಟಿಗೆಯ ಉದ್ಯಮದ ಉಜ್ವಲ ಭವಿಷ್ಯವನ್ನಾತ ಚಿತ್ರವತ್ತಾಗಿ ಬಣ್ಣಿಸಿದ. ಸ್ವೀಡಿಶ್ ಬೆಂಕಿ ಪೆಟ್ಟಿಗೆ ಉದ್ಯಮ, ಯುರೋಪಿನ ಟೆಲಿಫೋನ್ ಮತ್ತು ಎಂಜಿನಿಯರಿಂಗ್ ಉದ್ಯಮಗಳನ್ನು ಕುರಿತು ಅವನ ಪರಿಜ್ಞಾನವನ್ನು ಕಂಡು ಬ್ಯಾಂಕರರು ಮುಗ್ಧರಾದರು.

ಮುಂದಿನ ಹತ್ತು ವರ್ಷಗಳಲ್ಲಿ ಅಮೇರಿಕವೊಂದರಿಂದಲೇ ಕ್ರೂಗರ್ ೧೦ ಕೋಟಿ ಡಾಲರುಗಳನ್ನು ಯುರೋಪಿಗೆ ಒಯ್ದನು. ಅಲ್ಲಿ ಆ ಹಣವನ್ನಾತ ಯುರೋಪಿನ ತತ್ತರಿಸುತ್ತಿದ್ದ ಸರಕಾರಗಳಿಗೆ ಸಾಲಕೊಟ್ಟನು ಅದರಿಂದಲೆ ಫ್ರಾನ್ಸ್, ಇಟಲಿ, ಜರ್ಮನಿ, ಗ್ರೀಸ್ ದೇಶಗಳು ಚೇತರಿಸಿಕೊಂಡವು. ಫ್ರಾನ್ಸ್ ಅವನಿಗೆ "ಲೀಜನ್ ಆಫ್ ಆನರ್" ಪದವಿಯನ್ನು ದಯಪಾಲಿಸಿತು. ದಕ್ಷಿಣ ಅಮೇರಿಕದ ಹಲ ರಾಷ್ಟ್ರಗಳೂ ಅವನಿಂದ ಸಾಲ ಪಡೆದವು.

ಸಾಲ ಪಡೆದ ರಾಷ್ಟ್ರಗಳಿಂದ ಅವನು ಕೇಳುತ್ತಿದ್ದ ಪ್ರತಿಫಲವೆಂದರೆ ಬೆಂಕಿ ಪೆಟ್ಟಿಗೆಯ ತಯಾರಿಕೆ-ಮಾರಾಟಗಳ ಗುತ್ತಿಗೆ ಮಾತ್ರ. ಹೀಗೆ ಅವನ ವ್ಯವಹಾರ ನೂರಾರು ಕೋಟಿ ಡಾಲರುಗಳಷ್ಟು ಬೆಳೆದು ಹತ್ತಾರು ದೇಶಗಳಲ್ಲಿ ಹಬ್ಬಿತು. ೨೫೦ ಕಂಪೆನಿಗಳ ವ್ಯವಹಾರದ ವಿವರಗಳನ್ನಾತ ಅಮೇರಿಕದ ಬ್ಯಾಂಕರರಿಗೆ ಒಪ್ಪಿಸುತ್ತಿದ್ದ. ಇದರ ಲಿಖಿತ ಪುರಾವೆಗಳನ್ನು ಒಮ್ಮೆಯೂ ಯಾರೂ ಕೇಳಲಿಲ್ಲ, ಅವನೂ ಕೊಡಲಿಲ್ಲ. ಬೇರೆ ೧೫೦ ಕಂಪೆನಿಗಳನ್ನಾತ ಯಾರಿಗೂ ಹೇಳದೆ ಗುಪ್ತವಾಗಿ ಸ್ಥಾಪಿಸಿದ್ದ. ಇಷ್ಟೆಲ್ಲವುಗಳ ವ್ಯವಹಾರವನ್ನಾತ ಯಾವ ಪುಸ್ತಕ, ಡೈರಿ, ಕಾರ್ಯದರ್ಶಿ, ಸಹಾಯಕರಿಲ್ಲದೆ ಏಕಾಂಗಿಯಾಗಿ ನಡೆಸುತ್ತಿದ್ದ. ಪ್ರಶ್ನೆ ಕೇಳಿದವರಿಗೆ ಕೇವಲ ಜ್ಞಾಪಕ ಶಕ್ತಿಯಿಂದ ಪ್ರತಿಯೊಂದು ಕಂಪೆನಿಯ ಬೇಕಾದ ವ್ಯವಹಾರದ ಅಂಕೆ ಸಂಖೆಗಳನ್ನು ತತ್‌ಕ್ಷಣ ಒಂದೂ ತಪ್ಪಿಲ್ಲದೆ ಒದಗಿಸುತ್ತಿದ್ದ. ಅವನು ಸತ್ತಮೇಲೆ ಅವನ ವ್ಯವಹಾರಗಳ ಬಗ್ಗೆ ಅವನ ಆತ್ಯಂತಿಕ ಸ್ನೇಹಿತರಲ್ಲಿಯೂ ನಂಬಲಾರದಷ್ಟು ಅಜ್ಞಾನ ಕಂಡುಬಂತು.

ಅಮೇರಿಕದಲ್ಲಿ ೧೯೩೦ರಲ್ಲಿ ಆರ್ಥಿಕ ಮುಗ್ಗಟ್ಟು ಪ್ರಾರಂಭವಾದ ಮೇಲೂ ಕ್ರೂಗರ್ ನಿರ್ಭಯದಿಂದ ವ್ಯವಹಾರ ನಡೆಸಿದನು. ಆ ಸಮಯದಲ್ಲಿ ಸಂಶಯಗ್ರಸ್ತನಾದ ಅಮೇರಿಕನ್ ಅಧಿಕಾರಿಯೊಬ್ಬನು ಕ್ರೂಗರನ ವ್ಯವಹಾರಗಳ ಲೆಕ್ಕ ನೋಡಲು ಸ್ವತಃ ಸ್ಟಾಕ್‌ಹೋಂಗೆ ಬಂದನು. ಕ್ರೂಗರ್ ಲೆಕ್ಕಪತ್ರ ತಯಾರಾಗಿಲ್ಲೆಂದು ನೆವ ಹೇಳಿ ಒಂದು ವಾರ ಅವನಿಗೆ ತನ್ನ ಬೆಂಕಿ ಪೆಟ್ಟಿಗೆ ಅರಮನೆಯಲ್ಲಿ ರಾಜಾತಿಥ್ಯ ಮಾಡಿದನು. ಅವನಿಗಾಗಿ "ವಿದೇಶಿ ರಾಯಭಾರಿಗಳು, ಸರಕಾರಿ ಅಧಿಕಾರಿಗಳು ಮತ್ತು ಪ್ರತಿಷ್ಠಿತ ನಾಗರಿಕರನ್ನು" ಆಮಂತ್ರಿಸಿ ಒಂದು ಪಾರ್ಟಿ ಏರ್ಪಡಿಸಿದನು. (ಈ ಅತಿಥಿಗಳು ನಿಜವಾಗಿ ಚಿಲ್ಲರೆ ಸಿನೆಮಾ ನಟನಟಿಯರೆಂದು ಎರಡು ವರ್ಷಗಳ ಮೇಲೆಯೆ ಅಮೇರಿಕನ್ನನಿಗೆ ಗೊತ್ತಾದದ್ದು.) ಇದರ ನಂತರ, ಇನ್ನೂ ಲೆಕ್ಕ ತಯಾರಾಗಿಲ್ಲೆಂದೂ ನೀವು ಬೇಕಾದರೆ ಯಾವ ಪ್ರಶ್ನೆಯನ್ನೂ ನನಗೇ ಕೇಳಿರಿ, ಉತ್ತರ ಹೇಳುವೆನೆಂದೂ ಕ್ರೂಗರ್ ಹೇಳಿದ. ಅಧಿಕಾರಿ ತಾನು ಬರೆದು ತಂದ ಹಾಳೆಗಳನ್ನು ತಿರುವುತ್ತ ಪ್ರಶ್ನೆ ಕೇಳುತ್ತ ಹೋದ ಹಾಗೆ ಕ್ರೂಗರ್ ನೆನಪಿನಿಂದಲೇ ನೂರಾರು ಕಂಪನಿಗಳ ನೂರಾರು ವ್ಯವಹಾರಗಳ ಲೆಕ್ಕವನ್ನು ಚಾಚೂ ತಪ್ಪದೆ ಪೂರೈಸಿದಾಗ ದಿಙ್ಮೂಢನಾದ ಅಧಿಕಾರಿ "ಇಂಥ ಮಹಾ ವ್ಯಕ್ತಿಯೊಡನೆ ಕೆಲಸ ಮಾಡುವುದು ನಮ್ಮ ಸೌಭಾಗ್ಯ" ಎಂದು ವರದಿ ಮಾಡಿದನು.

ಆದರೆ ಅವನಿಗೆ ದೈವ ಮುನಿಯತೊಡಗಿತ್ತು. ಅವನೆಣಿಸಿದಂತೆ ಅಮೇರಿಕದ ಆರ್ಥಿಕ ಮುಗ್ಗಟ್ಟು ಸುಧಾರಿಸಲಿಲ್ಲ. ಹಣ ಸಿಗುವುದು ಕಷ್ಟವಾಗುತ್ತ ಹೋಯಿತು. ಸಾಲ ಪಡೆದ ಸರಕಾರಗಳು ಅದನ್ನು ಮರಳಿಸಲಾರದಾದವು. ಕ್ರೂಗರ್ ಅವಿಶ್ರಾಂತವಾಗಿ ನ್ಯೂಯಾರ್ಕ್, ವಾಶಿಂಗ್‌ಟನ್, ಲಂಡನ್, ಪ್ಯಾರಿಸ್, ಬರ್ಲಿನ್‌ಗಳ ನಡುವೆ ಎಡತಾಕಿದ. ಬರ್ಲಿನ್ನಿನ ಪ್ರಸಿದ್ಧ ಬ್ಯಾಂಕರನೊಬ್ಬನ ಕಡೆ ಹೋಗಿ, "ಇಲ್ಲಿ ನೋಡಿ, ೪೦ ಲಕ್ಷ ಹಣ ಇದೆ. ಪಾವತಿ ಕೊಡಿ. ಜನ ಎಣಿಸಿದಷ್ಟು ಹಣದ ಮುಗ್ಗಟ್ಟು ಇಲ್ಲ," ಎಂದ. ಆ ಒಂದು ಪಾವತಿಯ ಆಧಾರದ ಮೇಲೆಯೆ ಕ್ರೂಗರ್ ಅದರ ಹತ್ತರಷ್ಟು ಹಣ ಕೂಡಿಸಿದನು. ಸಂಜೆ ಬ್ಯಾಂಕ್ ಮೆನೇಜರನ ಫೋನ್ ಬಂದಾಗ ಕ್ರೂಗರ್ ನಿರ್ವಿಕಾರವಾಗಿ, "ಹೌದು ನೋಡಿ, ನಾನು ಕೊಟ್ಟಿದ್ದರಲ್ಲಿ ೧೦ ಲಕ್ಷ ಮಾತ್ರ ಇತ್ತು. ಅಕಸ್ಮಾತ್ ತಪ್ಪಾಯಿತು, ಕ್ಷಮಿಸಿ" ಎಂದು ಹಾರಿಸಿಬಿಟ್ಟ.

ದಿನಗಳು ಕೆಡುತ್ತಲೆ ಹೋದವು. ಹಣದ ಬಿಕ್ಕಟ್ಟು ಹೆಚ್ಚಿತು ಕೊನೆಗೆ ಕ್ರೂಗರ್ ತನ್ನ ಅಪೂರ್ವ ಜೀವನಕ್ಕೆ ಕಳಸವಿಡುವ ಅಪೂರ್ವ ಕೃತ್ಯವೊಂದನ್ನೆಸಗಿದನು. ಇಟೆಲಿಯ ಅರ್ಥ ಮಂತ್ರಿಯ ಸುಳ್ಳು ಸಹಿ ಮಾಡಿ ಹಲವು ಲಕ್ಷ ರೂಪಾಯಿಗಳ ಸರಕಾರಿ ಬಾಂಡುಗಳನ್ನು ತಯಾರಿಸಿದನು. ಆದರೆ ಯಾವುದೂ ಅವನ ಅಧೋಗತಿಯನ್ನು ತಪ್ಪಿಸಲಿಲ್ಲ. ಕೊನೆಯ ಗಳಿಗೆಯಲ್ಲಿ ಅವನಿಗೆ ಯೋಗ್ಯ ಸಲಹೆ ಕೊಡುವವರಾರೂ ಇರಲಿಲ್ಲ. ಏಕೆಂದರೆ ಯಾರಿಗೂ ಅವನ ವ್ಯವಹಾರಗಳ ಜ್ಞಾನವೇ ಇರಲಿಲ್ಲ. ಅವನು ಆತ್ಮಹತ್ಯೆ ಮಾಡಿಕೊಂಡ ನಂತರ ಅವನು ೨೫ ವರ್ಷಗಳಲ್ಲಿ ಮೋಸ ಮಾಡಿ ಎತ್ತಿಹಾಕಿದ ಹಣ ೨೫·೪ ಕೋಟಿ ಡಾಲರ್- ಸ್ವೀಡನ್ನಿನ ರಾಷ್ಟ್ರೀಯ ಸಾಲಕ್ಕಿಂತಲೂ ಹೆಚ್ಚು ಎಂದು ಸಿದ್ಧವಾಯಿತು.

ಕ್ರೂಗರನ ಪ್ರತಿಭೆ, ಕರ್ತೃತ್ವಶಕ್ತಿ, ಆತ್ಮವಿಶ್ವಾಸ, ಅಂತಾರಾಷ್ಟ್ರೀಯ ಬ್ಯಾಂಕ್‌ವ್ಯವಹಾರದಲ್ಲಿ ಅವನು ಮಾಡಿದ ಕ್ರಾಂತಿ ಮೊದಲಾದವುಗಳನ್ನು ಯಾರೂ ಅಲ್ಲಗಳೆಯುವುದಿಲ್ಲ. ಆದರೆ ೧೯೪೫ ರ ವರೆಗೂ ಅವನ ದಿವಾಳಿ ವ್ಯವಹಾರದ ಮುಖ್ಯಸ್ಥರಾಗಿ ಕೆಲಸ ಮಾಡಿದ ಅಮೇರಿಕದ ಅರ್ವಿನ್ ಟ್ರಸ್ಟಿನ ಅಧಿಕಾರಿಗಳು ಅವನನ್ನು ಪ್ರಪಂಚದಲ್ಲೇ ಅತಿ ದೊಡ್ಡ ಮೋಸಗಾರ ಅಪರಾಧಿ ಎಂದು ಹೇಳುತ್ತಾರೆ. *



## ಅಂತಿಮ ಪರೀಕ್ಷೆ

ಅಮೇರಿಕದ ಪ್ರಸಿದ್ಧ ನ್ಯಾಯಾಧೀಶ ಒಲಿವರ್ ವೆಂಡೆಲ್ ಹೋಮ್ಸರು ಯಾವಾಗಲೂ ಕಲಿಯುವುದರಲ್ಲಿ ನಿರತರು. ಒಮ್ಮೆ ೭೦ ನೇ ವಯಸ್ಸಿನಲ್ಲಿ ಪ್ಲೇಟೋನ ಗ್ರಂಥವನ್ನು ಓದುತ್ತಿದ್ದಾಗ ಅವರನ್ನು ಕಂಡ ಮಿತ್ರನೊಬ್ಬ ಕೇಳಿದ: "ಎಪ್ಪತ್ತಾದರೂ ಇನ್ನೂ ಅಧ್ಯಯನವೇ ?"

ಹೋಮ್ಸ್ ಹೇಳಿದರು: "ಹೌದು, ನಾನು ಅಂತಿಮ ಪರೀಕ್ಷೆಗಾಗಿ ಕಲಿಯುತ್ತಿದ್ದೇನೆ."

೧೬೫೦ ರಲ್ಲಿ ಆಕ್ಸ್‌ಫರ್ಡಿನಲ್ಲಿ ಮೊದಲನೇ ಕಾಫಿಹೌಸ್ ಪ್ರಾರಂಭವಾದಂದಿನಿಂದ ಕಾಫಿಯ ಗುಣಾವಗುಣಗಳ ಬಗ್ಗೆ ತುಂಬ ಉತ್ತೇಜಕ ಚರ್ಚೆ ನಡೆದಿದೆ. ೧೭ ನೇ ಶತಮಾನದ ಸಂಶೋಧಕರು ಕಾಫಿ ವಿಷಪ್ರಾಯವೆಂದು ತೀರ್ಮಾನಿಸಿದರು. ಆದರೆ ಕಾಫಿಭಕ್ತರ ಸಂಖ್ಯೆ ಬೆಳೆದಂತೆ ಅದರ ಬಗ್ಗೆ ಆರೋಗ್ಯಶಾಸ್ತ್ರಗಳು ಹೆಚ್ಚು ಉದಾರ ಧೋರಣೆ ತಳೆಯುವಂತಾಗಿದೆ. ಈಗ ವರು ಕಾಫಿಯಲ್ಲಿ ವಿಷಾಂಶವಿದ್ದರೂ ಅದು ಆರೋಗ್ಯಸ್ಥರಿಗೆ ಹಾನಿಕರವಲ್ಲೆಂದು ಪ್ರಯೋಗಗಳಿಂದ ಕಂಡುಹಿಡಿದಿದ್ದಾರೆ.

ಗೊಳಿಸಿ ಜಠರದ ಹೆಚ್ಚಿನ ಆಮ್ಲವನ್ನು ತೆಗೆಯುತ್ತದೆ. ಕರುಳನ್ನು ಉತ್ತೇಜಿಸಿ ವಿರೇಚನ ಕಾರ್ಯವು ಸುಲಭವಾಗುವಂತೆ ಮಾಡುತ್ತದೆ. ಆದರೆ ಕಾಫಿ ಪಿತ್ತಾಶ್ಮರಿಗಳು (Gall Stones) ಉಳ್ಳವರಿಗೆ ಒಳ್ಳೆಯದಲ್ಲ. ಏಕೆಂದರೆ, ಅದು ಸಣ್ಣ ಕರಳು ಅಥವಾ ಪಿತ್ತನಾಳಗಳನ್ನು ಹೆಚ್ಚು ಸಂಕುಚಿತಗೊಳಿಸುತ್ತದೆ. ಅದೇ ಕಾಫಿ, ಜಠರ ಗ್ರಂಥಿಗಳನ್ನು ಉತ್ತೇಜಿಸಿ ಹೆಚ್ಚು ಜಠರ ರಸವನ್ನು ಉತ್ಪಾದಿಸುವುದರಿಂದ ಆಹಾರವು ಚೆನ್ನಾಗಿ ಪಚನವಾಗಬಲ್ಲದು. ಮೊದಲೇ ಹೆಚ್ಚು ಜಠರ ರಸ ಉತ್ಪತ್ತಿಯುಳ್ಳವರಿಗೆ ಮಾತ್ರ ಕಾಫಿ



ಆದರಲ್ಲಿ ವಿಷವಿದ್ದರೂ ಕೆಲವರಿಗೆ ಅದು ಅಮೃತವಾಗಬಲ್ಲದು



# ಕಾಫಿಯಲ್ಲೇನಿದೆ?

ಎನ್. ವಿ. ಬಾಲಸುಬ್ರಮಣ್ಯಂ



ಕಾಫಿಯ ಮುಖ್ಯ ಪರಿಣಾಮ ಹೃದಯ, ಮೆದುಳು, ಜೀರ್ಣಾಂಗಗಳು ಮತ್ತು ಮೂತ್ರ ಕೋಶಗಳ ಮೇಲೆ. ಅದು ಮೆದುಳಿನ ರಕ್ತನಾಳಗಳನ್ನು ವಿಕಾಸಿಸಿ ಅಲ್ಲಿ ರಕ್ತವು ಹೆಚ್ಚಾಗಿ ಸಂಚರಿಸುವ ಹಾಗೆ ಮಾಡುವುದರಿಂದ ಮೆದುಳಿಗೆ ಹೊಸ ಚೈತನ್ಯ ಬರುವುದು. ಇದೇ ಕಾರಣಕ್ಕಾಗಿ, ಕೆಲವರಿಗೆ ಬೆಳಿಗ್ಗೆ ಕಾಫಿ ಕುಡಿದ ಹೊರತು ಯಾವ ಕೆಲಸ ಮಾಡಲೂ ಸಾಧ್ಯವಾಗುವುದಿಲ್ಲ.

ಜಠರದ ಮೇಲೂ ಕಾಫಿ ಒಳ್ಳೆಯ ಪರಿಣಾಮವನ್ನು ಬೀರಬಹುದು. ಅದು ಪಚನವನ್ನು ತೀವ್ರ

ಕುಡಿದ ತಕ್ಷಣ ಹೊಟ್ಟೆಯಲ್ಲಿ ಉರಿಯುಂಟಾಗುವುದು.

ಕಾಫಿ ಹೃದಯವನ್ನು ಉತ್ತೇಜಿಸುವುದರಿಂದ ಹೃದಯವು ಹೆಚ್ಚು ಬಾರಿ ಸಂಕೋಚನಗೊಂಡು ಅವಯವಗಳಿಗೆ ಹೆಚ್ಚು ರಕ್ತವನ್ನು ಕಳುಹಿಸುವುದು. ಹೆಚ್ಚು ರಕ್ತದಿಂದ ಅವಯವಗಳ ಕ್ರಿಯಾಶಕ್ತಿ ಹೆಚ್ಚಿ, ಅದರಿಂದ ನಮಗೆ ಹೆಚ್ಚು ಕೆಲಸ ಮಾಡಲು ಸಾಧ್ಯವಾಗುವುದು. ಆದರೆ, "ಅತಿ ರಕ್ತ ಒತ್ತಡ" ಉಳ್ಳವರಿಗೆ ಕಾಫಿ ಒಳ್ಳೆಯದಲ್ಲ.

ಮೂತ್ರಪಿಂಡಗಳು ಕಾಫಿಯಿಂದ ಉತ್ತೇಜನ

ಗೊಂಡು ರಕ್ತದಲ್ಲಿನ ಅನವಶ್ಯಕ ಲವಣ ಮತ್ತು ನಂಜನ್ನು ಹೊರತೆಗೆಯುತ್ತವೆ. ಸಾಮಾನ್ಯವಾಗಿಯೆ ಕಾಫಿ ಮೂತ್ರೋತ್ತೇಜನಕಾರಿ.

ಕಾಫಿಯಲ್ಲಿನ ಮುಖ್ಯ ಪರಿಣಾಮಕಾರಿ ವಸ್ತು "ಕೆಫಿನ್" ಎಂಬ ವಿಷವಸ್ತು. ಇದರ ಹಲವು ಪರಿಣಾಮಗಳನ್ನು ಡಾ. ಎಚ್. ಎಲ್. ಹೊಲಿಂಗ್‌ವರ್ಸ್ತ್ ರವರು ಕಂಡುಹಿಡಿದರು. "ಕೆಫಿನ್" ಶುದ್ಧಪಡಿಸಿದ ನಂತರ ಬಿಳಿಯ ಪುಡಿಯಂತಿರುತ್ತದೆ. ಶೇಕಡ ಅರ್ಧದಿಂದ ಎರಡೂವರೆಯಷ್ಟು "ಕೆಫಿನ್" ಕಾಫಿಬೀಜದಲ್ಲಿರುತ್ತದೆ. ಅಂದರೆ ಸುಮಾರು ೨ ಚಿಟಿಕೆಯಷ್ಟು ಒಂದು ಕಪ್ ಕಾಫಿಯಲ್ಲಿರುತ್ತದೆ. ನೂರರಲ್ಲಿ ತೊಂಭತ್ತೇಳು ಜನರಿಗೆ ಇದರಿಂದ ಯಾವ ಕೆಡಕೂ ಆಗುವುದಿಲ್ಲ. ಉಳಿದ ಮೂರು ಜನರಿಗೆ ಕೇಡಾಗಬಹುದು. ಆದರೆ ಹಾಲಿನಂಥ ಉತ್ತಮ ಆಹಾರಗಳೇ ಕೆಲವರಿಗೆ ಕೆಡಕುಂಟುಮಾಡುವಾಗ ಕೆಫಿನಿನ ಕೆಡಕು ದೊಡ್ಡದೇನಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಕೆಫಿನ್ ತೆಗೆದ ಕಾಫಿಯೂ ಸಿಗುತ್ತದೆ. ಇದರಲ್ಲಿ ಸುಮಾರು ೯೭% ಕೆಫಿನ್ ತೆಗೆಯಲ್ಪಟ್ಟಿರುತ್ತದೆ.

ಪಾಶ್ಚಾತ್ಯ ದೇಶಗಳಲ್ಲಿ ಕಾಫಿಯನ್ನು ಹಾಲು ಮತ್ತು ಸಕ್ಕರೆ ಇಲ್ಲದೆಯೇ ಕುಡಿಯುವ ಅಭ್ಯಾಸವಿದೆ. ಅಲ್ಲಿ ಕಾಫಿ ನಿಮಗೆ ಬೇಕಾದರೆ ನೀವು "ಕಾಫಿ, ಹಾಲು ಮತ್ತು ಸಕ್ಕರೆ" ಎಂದು ಕೇಳಬೇಕು. ಇಲ್ಲವಾದರೆ ಅವರ ಅಭ್ಯಾಸದಂತೆ ನಿಮಗೂ ಬರೀ ಕಾಫೀ ಕಷಾಯ ತಂದುಕೊಡುತ್ತಾರೆ. ಹಾಲು ಮತ್ತು ಸಕ್ಕರೆ ಕಾಫಿಯಲ್ಲಿನ "ಕೆಫಿನ"ನ್ನು ದುರ್ಬಲಗೊಳಿಸುವುದರಿಂದ ಕಾಫಿಗೆ ಹಾಲು, ಸಕ್ಕರೆ ಸೇರಿಸಿ ಸೇವಿಸುವುದೊಳ್ಳೆಯದು.

ಕಾಫಿ ದೇಹದ ಮೇಲುಂಟುಮಾಡುವ ಒಳ್ಳೆಯ ಅಥವಾ ಕೆಟ್ಟ ಪರಿಣಾಮ, ನೀವು ನಿತ್ಯ ಎಷ್ಟು ಕಾಫಿ ಕುಡಿಯುವಿರಿ ಎಂಬುದನ್ನು ಅವಲಂಬಿಸಿರುತ್ತದೆ. ಕೆಲವೇ ಸಲ ಹೆಚ್ಚು ಕುಡಿಯುವುದಕ್ಕಿಂತಲೂ ಹಲವು ಬಾರಿ ಸ್ವಲ್ಪ ಸ್ವಲ್ಪವಾಗಿ ಕುಡಿಯುವುದೊಳ್ಳೆಯದು. ಒಬ್ಬ 'ಟೈಪಿಸ್ಟ್' ಮೇಲೆ ಮಾಡಿದ ಪ್ರಯೋಗದ ಪರಿಣಾಮವಾಗಿ— ಆತನು ಸ್ವಲ್ಪ ಕಾಫಿ ಕುಡಿದಾಗ ಆತನ ಕೆಲಸ ಜಾಗ್ರತೆಯಾಗಿ ಆಯಿತು. ಅದೇ ಹೆಚ್ಚಾಗಿ ಕುಡಿದಾಗ ಆತನ ಕೆಲಸ ಎಷ್ಟು ಪ್ರಯತ್ನಿಸಿದರೂ ನಿಧಾನವಾಯಿತು. ಆರೋಗ್ಯವಂತರು ದಿನಕ್ಕೆ ಐದು ಕಪ್ ಕಾಫಿಗಿಂತ ಹೆಚ್ಚಾಗಿ ಕುಡಿಯದಿದ್ದರೆ ಅವರಿಗೆ ಏನೂ ಅಪಾಯವಾಗುವುದಿಲ್ಲ. ನರದ ಬಲಹೀನತೆಯುಳ್ಳವರಿಗೆ ಕಾಫಿ ಹೆಚ್ಚು ಕೆಡಕನ್ನು ಮಾಡುತ್ತದೆ. ಆರೋಗ್ಯವಂತರಿಗೆ ಕಾಫಿ ಹೆಚ್ಚಾದರೆ ನಿದ್ರಾವಿಹೀನತೆ, ಉದರದ ಅವ್ಯವಸ್ಥೆ, ನರ ಬಲಹೀನತೆ, ಹೃದಯಯೋದ್ವೇಗ ಉಂಟಾಗಬಹುದು. ಅಭ್ಯಾಸವಿಲ್ಲದವರು ಕಾಫಿಯನ್ನು ಕುಡಿದರೆ ವಾಂತಿಯಾಗಬಹುದು; ಅಥವಾ ಅಭ್ಯಾಸವಿರುವವರು ಒಮ್ಮೆಗೇ ಬಿಟ್ಟರೆ ಅವರಿಗೆ ತಲೆನೋವು ಬರಬಹುದು.

ಕಾಫಿಯಿಂದ ಬೇರೆ ಬೇರೆ ಕಾಲದಲ್ಲಿ ದೇಹದ ಮೇಲುಂಟಾಗುವ ಪರಿಣಾಮ ಎಷ್ಟು ವಿಚಿತ್ರವಾಗಿದೆ ಎಂದರೆ ಅದನ್ನು ನಂಬುವುದೇ ಕಷ್ಟ. ದಿನದ ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಅಂಗಾಂಗಗಳ ಮೇಲೆ ಹೆಚ್ಚು ಪರಿಣಾಮ ಬೀರುತ್ತದೆ. ಬೆಳಿಗ್ಗೆ, ಅದರಲ್ಲೂ ಬೆಡ್‌ಕಾಫಿ ಮೂತ್ರಜನಕಾಂಗವನ್ನು ಹೆಚ್ಚು ಉತ್ತೇಜಿಸಿ, ಹಿಂದಿನ ರಾತ್ರಿ ರಕ್ತದಲ್ಲಿ ಮತ್ತು ಚರ್ಮದಲ್ಲಿ ಸಂಗ್ರಹವಾದ ನಂಜು ಪದಾರ್ಥಗಳನ್ನು ದೇಹದಿಂದ ಹೊರತೆಗೆಯುತ್ತದೆ. ಊಟವಾದ ಮೇಲೆ ಕುಡಿವ ಕಾಫಿ ಜಠರ-ಗ್ರಂಥಿಗಳನ್ನು ಉತ್ತೇಜಿಸಿ ಆಹಾರ ಪಚನವಾಗುವಂತೆ ಮಾಡುವುದು. ಮಧ್ಯಾಹ್ನ ಕುಡಿದ ಕಾಫಿ ಮಾಂಸಖಂಡಗಳ ಮೇಲೆ ಪ್ರಭಾವ ಬೀರಿ ಆಟಪಾಟಗಳಲ್ಲಿ ಸಹಕರಿಸುವುದು. ಸಂಜೆ ಕುಡಿದ ಕಾಫಿ ಮೆದುಳನ್ನು ಉತ್ತೇಜಿಸಿ ವಿಚಾರಕ್ಕೂ ಮನೆಯೊಳಗಿನ ಆಟ ಮುಂತಾದ ಮೆದುಳಿಗೆ ಸಂಬಂಧಿಸಿದ ಕೆಲಸಗಳಿಗೂ ಉತ್ತೇಜನವೀಯುವುದು. *





ಕೆಂಪುಚೀನದ ಪಕ್ಕದಲ್ಲೊಂದು
ಬಂಡವಳಗಾರ ಸ್ವರ್ಗ

# ಹಾಂಗ್ ಕಾಂಗಿನ ಕಥೆ

ಹಾಂಗ್‌ಕಾಂಗ್ ನಮ್ಮೀ ಅನ್ಯೈಕ್ಯಜರ್ಜರಿತ ಜಗತ್ತಿನಲ್ಲಿ ಅಪರೂಪ ಸ್ಥಾನ. ಇಂಥದೊಂದು ನಗರ ಇಂದಿನ ಪ್ರಪಂಚದಲ್ಲಿರುವುದು ಅಸಂಭವ, ಅಸಾಧ್ಯವೆನಿಸುವಷ್ಟು ಅದು ವೈಚಿತ್ರ್ಯಪೂರ್ಣವಾಗಿದೆ. ಅದು ಸರ್ವಾಧಿಕಾರಕ್ಕೊಳಪಟ್ಟ ಕಮ್ಯುನಿಸ್ಟ್ ಚೀನದ ಮುಖದಲ್ಲಿರುವ ಪ್ರಜಾಸತ್ತಾತ್ಮಕ ಮೊಡಮೆಯಂತಿದೆ. ಸಮಾಜವಾದಿ ದೈತ್ಯನ ಪಕ್ಕದಲ್ಲಿ ಬಂಡವಳಗಾರರು ಇದನ್ನು ನಿರ್ಮಿಸಿದ್ದಾರೆ ಮತ್ತು ಇನ್ನೂ ನಿರ್ಮಿಸುತ್ತಿದ್ದಾರೆ; ಆದರೂ ಆ ದೈತ್ಯ ಇದನ್ನೇಕೆ ನುಂಗಿಲ್ಲವೆಂದು ಸೋಜಿಗವಾಗುತ್ತದೆ. ಕಳೆದ ಎಪ್ಪತ್ತು ವರ್ಷಗಳಿಂದ ಅದು ಕಂಡ ಕಷ್ಟಗಳನ್ನು ನೋಡಿದರೆ ಅದು ಇರಲೇಬಾರದಿತ್ತು; ಆದರೆ ಹಾಂಗ್‌ಕಾಂಗ್ ನಗರ ಈ ಅಪಾಯಗಳನ್ನೇ ದಕ್ಕಿಸಿಕೊಂಡು ಬೆಳೆಯುತ್ತಿದೆ.

ಈ ಬ್ರಿಟಿಶ್ ವಸಾಹತು-ನಗರದ ಜನಸಂಖ್ಯೆ ಕಳೆದ ೧೫ ವರ್ಷಗಳಲ್ಲಿ ಒಂದಕ್ಕೆ ಐದರಷ್ಟು ಬೆಳೆದಿದೆ. ಯಾವ ನಗರವಾದರೂ ಇಂಥ ಜನಸಂಖ್ಯೆಯ ಒತ್ತಡಕ್ಕೆ ಕುಸಿದು ಹೋಗಬಹುದಿತ್ತು. ಆದರೆ ಹಾಂಗ್‌ಕಾಂಗ್ ಬದುಕಿಬಾಳುತಿದೆ ಮತ್ತು ಜೀವಕಳೆಯಿಂದ ಮಿಡಿಯುತ್ತಿದೆ. ಅಲ್ಲಿ ಹತ್ತು ದಿನಕ್ಕೊಂದರಂತೆ ಕಟ್ಟಡಗಳು ಮೇಲೇಳುತ್ತಿವೆ— ಇದು ಜಗತ್ತಿನಲ್ಲೇ ಹೊಸ ವಿಕ್ರಮವೇನೋ. ವ್ಯಾಪಾರ ಉದ್ಯಮಗಳು ಅಲ್ಲಿ ಅಮಿತ ಉತ್ಸಾಹದಿಂದ ಪ್ರಾರಂಭವಾಗುತ್ತಿವೆ, ಉನ್ನತಿ ಹೊಂದುತ್ತಿವೆ.

"ಹಾಂಗ್ ಕಾಂಗ್" ಎಂದರೆ ಪರಿಮಳದ ರೇವು ಎಂದು ಚೀನೀ ಭಾಷೆಯಲ್ಲಿ ಅರ್ಥ. ಚೀನದ ಆಗ್ನೇಯ ದಿಕ್ಕಿನಲ್ಲಿ ಕರಾವಳಿಗೆ ಹತ್ತಿರವಾಗಿರುವ ಈ ಬಂಜರು ದ್ವೀಪವನ್ನು ಬ್ರಿಟಿಶರು ೧೮೪೧ ರಲ್ಲಿ ಚೀನದಿಂದ ಪಡೆದುಕೊಂಡಾಗ ಅದರಲ್ಲಿ ಹೇಳಿಕೊಳ್ಳುವ "ಪರಿಮಳ"ವೇನೂ ಇರಲಿಲ್ಲ. ಅದು ಕಡಲುಗಳ್ಳರಿಗೆ ಆಶ್ರಯ ಸ್ಥಾನವಾಗಿತ್ತು. ಬ್ರಿಟಿಶ್ ಸರಕಾರ ಹುಚ್ಚು ಹಿಡಿದೇ ಇದನ್ನು ಪಡೆದುಕೊಂಡಿತೆಂದು ಆಗ ಬ್ರಿಟಿಶ್ ಜನರ ಭಾವನೆಯಾಗಿತ್ತು. ಹೆಂಗಸರು "ನರಕಕ್ಕೆ ಹೋಗು" ಎಂದು ಬೈಯ್ಯಬೇಕಾದಾಗ "ಹಾಂಗ್ ಕಾಂಗಿಗೆ ಹೋಗು!"



ಎಂದು ಬಯ್ಯುತ್ತಿದ್ದರಂತೆ. ೧೮೬೦ ರಲ್ಲಿ ಬ್ರಿಟಿಶರು ಮತ್ತೆ ದ್ವೀಪಕ್ಕೆ ಸಮೀಪವಾಗಿ ಕರಾವಳಿಯಲ್ಲಿ ಚಿಕ್ಕ ಪ್ರದೇಶವನ್ನು ಪಡೆದುಕೊಂಡರು. ಕೌಲೂನ್ ಎಂದರೆ ಇದೇ. ೧೮೯೮ ರಲ್ಲಿ ಕೌಲೂನ್‌ನ ಹಿಂಬದಿಯಲ್ಲಿದ್ದ ಗುಡ್ಡ ಬೆಟ್ಟಗಳಿಂದ ಕೂಡಿದ ಪ್ರದೇಶವನ್ನು ೯೯ ವರ್ಷದ ವಾಯ್ದೆ ಗೇಣಿಗೆ ತೆಗೆದುಕೊಂಡರು. ದ್ವೀಪ ಮತ್ತು ಭೂಖಂಡ ಪ್ರದೇಶ ಸೇರಿ ಹಾಂಗ್ ಕಾಂಗ್ ವಸಾಹತಿನ ಒಟ್ಟು ಕ್ಷೇತ್ರ ೩೯೮ ಚದರ ಮೈಲು. ಆದರೆ ಅದರ ೩೦ ಲಕ್ಷ ಜನ ಸಂಖ್ಯೆಯ ಹೆಚ್ಚಿನ ಭಾಗ ಅದರ ಅಲ್ಪ ಭಾಗದಲ್ಲಿಯೇ ಕಿಕ್ಕಿರಿದಿದೆ.

ಬ್ರಿಟಿಶರ ಕೈಸೇರಿದ ಕೆಲ ವರ್ಷಗಳಲ್ಲೇ ಹಾಂಗ್‌ಕಾಂಗ್ ಅತ್ಯಂತ ಸಮೃದ್ಧ ಬಂದರಗಳಲ್ಲೊಂದಾಗಿ ಮಾರ್ಪಟ್ಟಿತು. ಚೀನದಿಂದ ಬರುವ ಮತ್ತು ಚೀನಕ್ಕೆ ಹೋಗುವ ವ್ಯಾಪಾರಿ ಸರಕುಗಳಿಗೆ ಅದು ಮುಕ್ತ ಬಂದರವಾಗಿ ಬೆಳೆದು ಬಂತು. ಇಂದು ಹಾಂಗ್‌ಕಾಂಗನ್ನು "ಲಂಡನ್ನಿನ ಚೀನಿ ಆವೃತ್ತಿ", ಚೀನದ "ಬ್ರಿಟಿಶ್ ಅವತಾರ", "ದೂರ ಪ್ರಾಚ್ಯದ ಮನಹಟನ್" ಇತ್ಯಾದಿ ಉಪಾಧಿಗಳಿಂದ ಕರೆಯಲಾಗುತ್ತದೆ.

ದಿನವೂ ಜೆಟ್ ವಿಮಾನಗಳಲ್ಲಿ ಸಾವಿರಾರು ವ್ಯವಹಾರಸ್ಥರನ್ನೂ ಸಂದರ್ಶಕರನ್ನೂ ತರುತ್ತಿರುವ ಹಾಂಗ್ ಕಾಂಗಿನಲ್ಲಿ ಜಗತ್ತಿನ ಅತ್ಯಾಕರ್ಷಕ ಬಜಾರ್ ಇದೆ ಎನ್ನಬಹುದು. ಕೌಲೂನಿನ ಪೇಟೆಗಳಲ್ಲಿ ಸ್ವಿಸ್ ಗಡಿಯಾರಗಳನ್ನು ಸ್ವಿಜರ್ಲಂಡಿನಲ್ಲಿಗಿಂತಲೂ ಅಗ್ಗವಾಗಿ ಕೊಳ್ಳಬಹುದು. ಜಪಾನಿ ಹಿ-ಫಿಯನ್ನು ಸುಂಕವಿಲ್ಲದೆ ಪಡೆಯಬಹುದು. ತಾಯ್‌ಲಂಡಿನ ರೇಶ್ಮೆ, ಇಟಿಲಿಯ ಬಟ್ಟೆ ಇಲ್ಲಿ ಸಿಗುತ್ತವೆ. ವಜ್ರ ರತ್ನಗಳು ಸರಾಫಕಟ್ಟೆಯಲ್ಲಿ ತಳತಳಿಸುತ್ತವೆ. ಕಮ್ಯುನಿಸ್ಟ್ ಚೀನದಿಂದ ಪ್ರಾಚೀನ ವಸ್ತುಗಳು, ಬಣ್ಣದ ಆಲೇಖಗಳು, ಹಸ್ತಿದಂತದ ಕೆತ್ತನೆಯ ಸಾಮಗ್ರಿಗಳು ಮತ್ತು ಅಗ್ಗದರದ ಬಟ್ಟೆಗಳೂ ಇಲ್ಲಿ ಮಾರಾಟಕ್ಕೆ ಬರುತ್ತಿವೆ.

ಹಾಂಗ್ ಕಾಂಗ್ ಕಳ್ಳ ಸಾಗಾಟಗಾರರ ಸ್ವರ್ಗವೂ ಹೌದು. ಅಂತಾರಾಷ್ಟ್ರೀಯ ಬಂಗಾರದ ಕಳ್ಳಸಾಗಾಟಗಾರರು ಭಾರತ ಮೊದಲಾದ ಪೌರಸ್ತ್ಯ ದೇಶಗಳಿಗೆ ವಿಮಾನ ಮತ್ತು ಹಡಗ ಮೂಲಕ ಕಳ್ಳ ಬಂಗಾರ ಸಾಗಿಸಲು ಇದನ್ನೊಂದು ಕೇಂದ್ರವಾಗಿ ಮಾಡಿಕೊಂಡಿದ್ದಾರೆ. ಅಫು ಮೊದಲಾದ ಮಾದಕ ಪದಾರ್ಥಗಳ ಕಳ್ಳ ಸಾಗಾಟಕ್ಕಂತೂ ಇದೇ ಉಗಮ ಸ್ಥಾನ. ಪೋಲೀಸರು ಕಳ್ಳಸಾಗಾಟಗಾರರೊಡನೆ ನಿರಂತರ ಹೋರಾಟ ನಡೆಸಿದ್ದಾರೆ. ಕಳೆದ ವರ್ಷ



ಒಂದೇ ದಾಳಿಯಲ್ಲಿ ಪೋಲೀಸರು ೩೩೯ ಪೌಂಡು ಮಾರ್ಫೀನ್ ಮತ್ತು ೭೮೪ ಪೌಂಡು ಅಫುವನ್ನು ವಶಪಡಿಸಿಕೊಂಡರು. ಇದು ಇಡೀ ಜಗತ್ತಿನ ಅವಶ್ಯಕತೆಯನ್ನು ಅನೇಕ ವರ್ಷಗಳ ವರೆಗೆ ಪೂರೈಸಲು ಸಾಕು.

ಹಾಂಗ್ ಕಾಂಗಿನ ಈ ಪೇಟೆ ಅದರ ಆದಿ ಕಾಲದಿಂದಲೂ ಹೆಸರಾದದ್ದು. ಆದರೆ ಔದ್ಯೋಗಿಕ ಬೆಳವಣಿಗೆ ಅತ್ಯಾಧುನಿಕ ಆಶ್ಚರ್ಯಗಳಲ್ಲೊಂದಾಗಿದೆ. ಹತ್ತೇ ವರ್ಷಗಳಲ್ಲಿ ಹಾಂಗ್ ಕಾಂಗ್ ದೂರ ಪ್ರಾಚ್ಯದ ಔದ್ಯೋಗಿಕ ಮುಂದಾಳಾಗಿದೆ. ಅದು ತನ್ನ ಹೊಸ ಹೊಸ ಕಾರಖಾನೆಗಳಲ್ಲಿ ಉತ್ಪಾದಿಸಿದ ಜವಳಿ ಭಾರತವನ್ನೊಳಗೊಂಡು ಅನೇಕ ದೇಶಗಳನ್ನು ನಿರ್ಯಾತ ವ್ಯಾಪಾರದಲ್ಲಿ ಸೋಲಿಸತೊಡಗಿದೆ. ಚುರಮುರಿಯಿಂದ ಹಿಡಿದು ಉಕ್ಕಿನ ಕಂಬಿಗಳ ವರೆಗೆ, ಹಡಗಗಳಿಂದ ಟ್ರಾನ್ಸಿಸ್ಟರ್ ರೇಡಿಯೋಗಳ ವರೆಗೆ,

ಕೃತಕ ಪುಷ್ಪಗಳಿಂದ ಸಂಗಮವರಿಯ ವರೆಗೆ ಹಾಂಗ್‌ಕಾಂಗ್‌ನಲ್ಲಿ ಉತ್ಪಾದನೆಯಾಗದ ಪದಾರ್ಥವೇ ಇಲ್ಲವೆಂದರೂ ಸಲ್ಲುವುದು. ಜಪಾನ್, ಭಾರತ, ಅಮೇರಿಕಗಳ ನಂತರ ಚಲಚ್ಚಿತ್ರ ಉದ್ಯಮದಲ್ಲಿ ಹಾಂಗ್ ಕಾಂಗೇ ಮುಂದಾಳು. ಇಲ್ಲಿ ವರ್ಷಕ್ಕೆ ೨೪೦ ಚಲಚ್ಚಿತ್ರಗಳು ತಯಾರಾಗುತ್ತವೆ. ವಿದೇಶಗಳಲ್ಲಿರುವ ಒಂದೂವರೆ ಕೋಟಿ ಚೀನೀಯರ ಮನೋರಂಜನೆಗೆ ಇದು ಆಧಾರವಾಗಿದೆ.

ಈ ಔದ್ಯೋಗಿಕ ಆಶ್ಚರ್ಯಕ್ಕೆ ಹಾಂಗ್ ಕಾಂಗಿನ ದುರ್ದೈವಗಳೇ ಮೆಟ್ಟಲುಗಳಾದವೆಂಬುದೀಗ ಈ ಕಥೆಯಲ್ಲಿರುವ ವೈಶಿಷ್ಟ್ಯ. ಇಲ್ಲಿ ಎರಡನೇ ಮಹಾಯುದ್ಧಕ್ಕೆ ಮೊದಲು ೧೩ಲಕ್ಷ ಜನಸಂಖ್ಯೆಯಿತ್ತು- ಹಾಂಗ್‌ಕಾಂಗಿನ ಮೇಲೆ ಜಪಾನೀಯರು ದಾಳಿ ಮಾಡಿದ ನಂತರ ಆರು ಲಕ್ಷ ಜನರಷ್ಟೇ ಉಳಿದಿದ್ದರು. ಮಿತ್ರರ ವಿಜಯದ ನಂತರ ಹಾಂಗ್‌ಕಾಂಗಿನ ಜನಸಂಖ್ಯೆ ಮತ್ತೆ ಮೊದಲಿದ್ದಷ್ಟಕ್ಕೆ ಏರಿತು. ಅಷ್ಟರಲ್ಲಿ ಚೀನ ಕಮ್ಯುನಿಸ್ಟರ ವಶವಾಯಿತು. ನಿರಾಶ್ರಿತರು ಏಕಮಾತ್ರ ಪಾರಾಗುವ ಮಾರ್ಗವಾಗಿದ್ದ ಹಾಂಗ್ ಕಾಂಗಿನ ಮೂಲಕ ಸಾವಿರಸಾವಿರಗಟ್ಟಳೆಯಲ್ಲಿ ಧಾವಿಸಿ ಬಂದರು. ಇವರಲ್ಲಿ ಎಲ್ಲರೂ ಬಡವರಾಗಿರಲಿಲ್ಲ. ಅನೇಕರು ಅಪಾರ ಧನದೊಂದಿಗೆ ಬಂದಿದ್ದರು. ಅವರು ಹಾಂಗ್‌ಕಾಂಗಿನಲ್ಲಿ ಹೊಸದಾಗಿ ವ್ಯಾಪಾರ ಪ್ರಾರಂಭಿಸಬೇಕೆಂದಿದ್ದಾಗ ಚೀನವು ಕೊರಿಯದ ಮೇಲೇರಿ ಹೋದದ್ದರಿಂದ ಸಂಯುಕ್ತ ರಾಷ್ಟ್ರ ಸಂಘವು ಚೀನದ ಮೇಲೆ ವ್ಯಾಪಾರಿ ಬಹಿಷ್ಕಾರ ಹೇರಿತು. ಹಾಂಗ್‌ಕಾಂಗಿಗೆ ಇದಕ್ಕೂ ದೊಡ್ಡ ವಿಪತ್ತು ಬೇರೊಂದಿರಲಿಲ್ಲ. ಅದರ ಅವತಾರ ಮುಗಿಯಿತೆಂದೇ ತೋರಿತು.

ಈ ಸಂಧಿಕಾಲದಲ್ಲೇ ಶ್ರೀಮಂತ ಚೀನೀ ನಿರಾಶ್ರಿತರು ಅಪರೂಪವಾದ ಧೈರ್ಯದಿಂದ ಹಾಂಗ್ ಕಾಂಗಿನ ಹಣೆ ಬರಹವನ್ನು ಹೊಸದಾಗಿ ಬರೆಯಲು ಮುಂದೆ ಬಂದದ್ದು. ಅವರು ಸಾಧ್ಯವಿದ್ದ ಎಲ್ಲ ಹೊಸ ಕೈಗಾರಿಕೆಗಳನ್ನು ಸ್ಥಾಪಿಸಿದರು. ಅಸಂಖ್ಯ ಬಡ ನಿರಾಶ್ರಿತರ ನಿರಂತರ ಪ್ರವಾಹವು ಅಗ್ಗವಾದ ಶ್ರಮವನ್ನು ಪೂರೈಸಿತು.



ಇಟಲಿ, ಇಂಗ್ಲಂಡ್, ಅಮೇರಿಕಗಳಿಂದಲೂ ಬಂಡವಳ ಬಂತು. ಕಾರಖಾನೆಗಳೆದ್ದವು. ಸ್ಥಳ ಸಾಲಲಿಲ್ಲವೇ, ಗುಡ್ಡಗಳ ಸಾಲನ್ನೆ ಕಡಿದು ಸಮುದ್ರಕ್ಕೆ ಒಟ್ಟಿ ಪರಶುರಾಮ ಸೃಷ್ಟಿ ಮಾಡಿದರು. ಕೈ ತಾಕ್ ವಿಮಾನ ನಿಲ್ದಾಣದಾಚೆ ಹೀಗೆ ಸಂಪಾದಿಸಿದ ಹೊಸ ಭೂಮಿಯಲ್ಲೇ ನೂರು ಕಾರಖಾನೆಗಳು ನಿಂತಿವೆ. ಕಡಿದ ಗುಡ್ಡಗಳ ತಪ್ಪಲಲ್ಲಿ ೬೦,೦೦೦ ಜನರಿಗೆ ವಸತಿ ಏರ್ಪಟ್ಟಿದೆ. ಕ್ವಾಂಟುಂಗ್ ಉಪನಗರವೆಂದು ಇದಕ್ಕೆ ಹೆಸರು ಬಿದ್ದಿದೆ.

ಹಾಂಗ್ ಕಾಂಗ್ ಜಗತ್ತಿನ ಅತಿ ಸುಂದರ ರೇವುಗಳಲ್ಲೊಂದಾಗಿದೆ. ಅದರ ವಿಕ್ಟೋರಿಯ ಪರ್ವತ ಹಾಂಗ್ ಕಾಂಗ್ ದ್ವೀಪಕ್ಕೆ ಅಪರೂಪ ಶೋಭೆಯನ್ನಿತ್ತಿದೆ. ಹಾಂಗ್‌ಕಾಂಗಿಗೆ ದೂರದಲ್ಲಿರುವಾಗಲೇ ತನ್ನ ತಪ್ಪಲ ತುಂಬ ಡೊಂಬರಂತೆ ಅಪಾಯಕರ ಭಂಗಿಯಲ್ಲಿ ನಿಂತ ಆಧುನಿಕ ಮನೆ ಮತ್ತು ಸೌಧಗಳನ್ನು ಹೊತ್ತ ಈ ಪರ್ವತ ಕಾಣಿಸುತ್ತದೆ. ಇಲ್ಲಿಯೇ ಹಾಂಗ್‌ಕಾಂಗಿನ ವ್ಯಕ್ತಿಸ್ವಾತಂತ್ರ್ಯದ ಸಂರಕ್ಷಕವಾದ ವರಿಷ್ಠ ನ್ಯಾಯಾಲಯವು ಚೀನೀಭೂಯಿಷ್ಠವಾದ ಜನತೆಗೆ ಬ್ರಿಟಿಶ್ ಮಾದರಿಯ ನ್ಯಾಯವನ್ನು ದಯಪಾಲಿಸುತ್ತದೆ. ಇಲ್ಲಿಯೆ ಶ್ರೀಮಂ-

ತರ ವಸತಿಗಳಿವೆ. ಈ ಗುಡ್ಡದ ತುದಿಯ ವರೆಗೆ ರಸ್ತೆಗಳಿಲ್ಲ. ಕಡಿದಾದ ಸೋಪಾನ ಶ್ರೇಣಿಗಳಿವೆ. ತಂತಿ ಸೇತುವೆ ಇದೆ. ಇದರ ತುದಿಯಿಂದಲೇ ಹಾಂಗ್ ಕಾಂಗ್ ರೇವಿನ ಸೊಂಪನ್ನು ಕಾಣಬೇಕು. ಸುತ್ತೆಲ್ಲ ಹಬ್ಬಿದ ವಸತಿಗಳೂ ಪೇಟೆಗಳೂ ಅಲ್ಲಿಂದ ಬೆಂಕಿ ಪೆಟ್ಟಿಗೆಗಳಂತೆ ಕಾಣಿಸುತ್ತವೆ. ಸಮುದ್ರದಲ್ಲಿ ಹಾಂಗ್‌ಕಾಂಗಿನ ಅನನ್ಯ ವೈಶಿಷ್ಟ್ಯವಾದ "ತೇಲಾಡುವ ನಗರ" ವನ್ನು ನೋಡಬಹುದು. ಹತ್ತು ಅಡಿ ಉದ್ದದ ಸಂಪಾನ್ ಎಂಬ ಅಸಂಖ್ಯ ದೋಣಿಗಳಿಂದ ಕೂಡಿದ ಈ ತೇಲಾಡುವ ನಗರವು ದೂರದಿಂದ ಕೂವೆಮರಗಳ ಅರಣ್ಯ ದಂತೆ ಭಾಸವಾಗುತ್ತದೆ. ಈ ಚಿಕ್ಕ ದೋಣಿಗಳು ೧,೩೮,೦೦೦ ಜನರಿಗೆ ವಸತಿಯನ್ನೊದಗಿಸುತ್ತವೆ. ಟಂಕಾ ಎಂಬ ಜನಾಂಗದ ಜನರಿಗೆ ಹುಟ್ಟಿನಿಂದ ಸಾವಿನ ವರೆಗಿನ ಸಂಸಾರ ಜೀವನ ವೆಲ್ಲ ಈ ದೋಣಿಗಳಲ್ಲೆ ಆಗುತ್ತದೆ. ಅವರು ನೆಲಕ್ಕೆ ಹೋಗುವುದೇ ಅಪರೂಪ. ಸಾಮಾನು ಮತ್ತು ಜನರನ್ನು ಸಾಗಿಸುವುದೇ ಅವರ ವೃತ್ತಿ. ಅವರ ಬಾಗಿಲಿಗೇ ಪೇಟೆಗಳು—ದೋಣಿಗಳಲ್ಲಿ ಬರುತ್ತವೆ. ಹಳೆಗಾಲದ ಚೀನದಲ್ಲಿ ಒಂದು ಬಗೆಯ ಅಸ್ಪೃಶ್ಯರಂತಿದ್ದು ಕರಾವಳಿಯಲ್ಲಿ ನೆಲಸಲು ಹಕ್ಕಿಲ್ಲದಿದ್ದ ಈ ಜನ ಇಂದಿಗೂ ಅದೇ ಜೀವನವನ್ನು ಸಾಗಿಸುತ್ತಿದ್ದಾರೆ.

ಆದರೆ ಹಾಂಗ್ ಕಾಂಗ್ ತನ್ನ ಸೌಂದರ್ಯ ವನ್ನು ಕನ್ನಡಿಯಲ್ಲಿ ನೋಡಿಕೊಂಡು ಸಂತೋಷಪಡಲು ಪುರಸೊತ್ತಿಲ್ಲದ ಸುಂದರಿಯ ಹಾಗಿದೆ. ಇಲ್ಲಿಯ ಚಟುವಟಿಕೆ ಅಗಾಧವಾಗಿದೆ. ಕಾರಖಾನೆಗಳು, ಅಂಗಡಿಗಳು, ರಸ್ತೆಗಳು, ಮನೆಗಳು ಕೂಡ ಜೀವನೋಪಾಯಕ್ಕಾಗಿ ನಿರಂತರ ದುಡಿಯುವವರಿಂದ ತುಂಬಿವೆ. ಬೀದಿಗಳ ಇಕ್ಕೆಲಗಳು ಸಾಮಾನುಗಳಿಂದ ಕಿಕ್ಕಿರಿದಿರುತ್ತವೆ. ಇಲ್ಲಿಯ ಚೀನೀ ದರ್ಜಿಗಳು ನಿಮಗೆ ೨೪ ತಾಸುಗಳೊಳಗೆ ವುಲನ್ ಸೂಟ್ ಹೊಲಿದುಕೊಡುವರಾದರೆ ಅವರ ಸ್ಪರ್ಧಿಗಳಾದ ಭಾರತೀಯ ದರ್ಜಿಗಳು ಸಂಜೆ ೬ ಕ್ಕೆ ತೆಗೆದುಕೊಂಡ ವೂಲನ್ ಬಟ್ಟೆಯನ್ನು ಬೆಳಗ್ಗೆ ೮ ಕ್ಕೆ ಮುಗಿಸಿ ಕೊಡುವುದಾಗಿ ಹೇಳುತ್ತಾರೆ. ಮತ್ತೆ ಇದೆಲ್ಲವೂ ಕೈಹೊಲಿಗೆ!

ನಿರಾಶ್ರಿತರ ಅಸಾಧ್ಯ ಪ್ರವಾಹವೂ ಹಾಂಗ್ ಕಾಂಗಿನ ಸ್ಥಳಾಭಾವವೂ ಈ ವ್ಯಾಪಾರ? ಸಾಹತಿನ ಚಟುವಟಿಕೆಗಳನು ಇದ್ದದ್ದಕ್ಕಿಂತಲೂ ತೀವ್ರವಾಗಿರುವಂತೆ ಭಾಸಗೊಳಿಸುತ್ತವೆ. ವರ್ಷಕ್ಕೆ ಒಂದು ಲಕ್ಷದಂತೆ ಚೀನೀಯರು ಇಲ್ಲಿ ನುಗ್ಗುತ್ತ ಬಂದಿದ್ದಾರೆ. ಕಮ್ಯುನಿಸ್ಟ ದಬ್ಬಾಳಿಕೆ, ಬರಗಾಲ, ಬಡತನ, ಸುಖಭವಿಷ್ಯತ್ತಿನ ಆಸೆ ಇವೆಲ್ಲವೂ ಹಾಂಗ್ ಕಾಂಗನ್ನು ಆಶ್ರಯಿಸಲು ನೆರೆಯ ಚೀನೀ ಪ್ರಾಂತಗಳ ಜನರಿಗೆ ಪ್ರೇರಣೆ ಕೊಡುತ್ತವೆ. ಈ ಪ್ರವಾಹ ವನ್ನು ತಡೆಯಲು ಎಷ್ಟು ಯುಕ್ತಿ ಹೂಡಿದರೂ ಸಾಧ್ಯವಾಗಿಲ್ಲ. ಗಡಿ-



ಹಾಂಗ್ ಕಾಂಗ್

ಯಾಚೆ ಪೊದೆಗಳಲ್ಲಿ ಮರೆಯಾಗಿದ್ದು ದಿನವೂ ಕಮ್ಯುನಿಸ್ಟ್ ಗಡಿ ಕಾವಲುಗಾರರನ್ನೂ ಹಾಂಗ್ ಕಾಂಗ್ ಅಧಿಕಾರಿಗಳನ್ನೂ ವಂಚಿಸಿ ಒಳನುಗ್ಗು ವವರಿದ್ದಾರೆ. ನೆರೆಯ ಪೋರ್ತುಗೀಸ್ ವಸಾಹತಾದ ಮಕಾವುನಲ್ಲಿ ಹೊಕ್ಕು ಅಲ್ಲಿಂದ ಲಂಚ ಕೊಟ್ಟು ದೋಣಿಗಳ ಮೂಲಕ ಬರುವವರಿದ್ದಾರೆ. ಸಿಕ್ಕಿಬಿದ್ದವರನ್ನು ಹಿಡಿದು ತಿರುಗಿ ಕಳಿಸಲಾಗುತ್ತದೆ. ಆದರೆ ಪಾರಾಗುವವರೇ ಹೆಚ್ಚು.

ಈ ನಿರಾಶ್ರಿತರ ದಾಳಿ ಜಗತ್ತಿನಲ್ಲಿ— ಕಲಕತ್ತಾ ಹೊರತು— ಮತ್ತೆಲ್ಲೂ ಕಾಣದಂಥ ವಸತಿಸಮಸ್ಯೆಯನ್ನುಂಟುಮಾಡಿದೆ. ಅದನ್ನೆದುರಿಸಲು ಏಳು-ಎಂಟು-ಹತ್ತಂತಸ್ತಿನ ವಸತಿ ಸೌಧಗಳನ್ನು ಕಟ್ಟಲಾಗುತ್ತಿದೆ. ಇಂಥ ಒಂದೊಂದರಲ್ಲಿ ಎರಡೂವರೆ ಸಾವಿರ ಜನರು ವಾಸಿಸುವುದುಂಟು. ಒಂದೊಂದು ಕೋಣೆಯಲ್ಲಿ ಆರು ಜನ ವಾಸಿಸುವುದು ಬಲು ಸಾಮಾನ್ಯ. ಈ ಮಹಾ ಕಟ್ಟಡಗಳ ಬಿಸಿಲು ಮಾಳಿಗೆಗಳಲ್ಲಿ ತಗಡು, ಪ್ಲೈವುಡ್‌ಗಳಿಂದ ಬಿಡಾರ ಕಟ್ಟಿಕೊಂಡು ಬಾಳುವವರಿದ್ದಾರೆ! ಹಾಂಗ್ ಕಾಂಗಿನ ವಸತಿ ಭಾಗಗಳಲ್ಲಿ ಎಕರೆಗೆ ೨,೪೦೦ ಜನರಂತೆ ಕಿಕ್ಕಿರಿದಿದ್ದಾರೆಂದರೆ ಜನಸಂಖ್ಯೆಯ ಒತ್ತಡದ ಕಲ್ಪನೆ ಬರಬಹುದು. ಇಷ್ಟಾದರೂ ಇನ್ನೂ ಲಕ್ಷಾಂತರ ಜನ ಅತ್ಯಂತ ಅಮಾನುಷ ಪರಿಸರದಲ್ಲಿ ತಗಡಿನ ಶೆಡ್ಡುಗಳಲ್ಲಿ ವಾಸಿಸುತ್ತಿದ್ದಾರೆ. ೧೯೫೩ ರಲ್ಲಿ ಇಂಥ ಒಂದು ಹೊಲೆಗೇರಿಯಲ್ಲಿ ಬೆಂಕಿ ಅನಾಹುತವಾದಾಗ ೫೦,೦೦೦ ಜನರು ಮನೆಮಾರುಗಳನ್ನು ಕಳೆದುಕೊಂಡರು.

ವಾಹನ ಸಮಸ್ಯೆಯೂ ತಲೆ ತಿರುಗಿಸುವಂತಿದೆ. ಕಲಕತ್ತೆಯನ್ನು ಬಿಟ್ಟರೆ ದೂರ ಪ್ರಾಚ್ಯದಲ್ಲಿ ರಿಕ್ಷಾಗಳು ಹಾಂಗ್‌ಕಾಂಗಿನಲ್ಲಿ ಮಾತ್ರ ಉಳಿದಿವೆ. ಟ್ರಾಮುಗಳು, ಬಸ್ಸುಗಳು, ಕಾರುಗಳು, ರಿಕ್ಷಾಗಳು ಎಲ್ಲವೂ ಸೇರಿ ಹಾಂಗ್ ಕಾಂಗಿನ ಇಕ್ಕಟ್ಟಾದ ರಸ್ತೆಗಳಲ್ಲಿ ಕಿಕ್ಕಿರಿದಿರುತ್ತವೆ. ಚೀನೀಯರ ಅಂಧ ವಿಶ್ವಾಸಗಳು ಈ ಸಮಸ್ಯೆಯನ್ನು ಸರಳಗೊಳಿಸುವುದಿಲ್ಲ. ಈ ಜನ ತಮ್ಮ ಬೆಂಬತ್ತಿ ಯಾವಾಗಲೂ ಪಿಶಾಚಿಗಳು ತಿರುಗುತ್ತವೆಂದು ನಂಬುತ್ತಾರಂತೆ. ಈ ಪಿಶಾಚಿಗಳು ಮೋಟಾರುಗಳ ಕೆಳಗೆ ಬಿದ್ದು ಸಾಯಬೇಕೆಂದು ಅವರು ಹಾರ್ನು ಹೊಡೆಯುವ ಮೋಟಾರುಗಳು ತೀರ ಹತ್ತಿರ ಬರುವ ವರೆಗೂ ಬದಿಗೆ ಸರಿಯುವುದಿಲ್ಲ!

ಹಾಂಗ್ ಕಾಂಗಿಗೆ ಕೊಡಬೇಕಾದ ಶಾಬಾಸ್‌ಗಿರಿಗಳಲ್ಲಿ ಮೊದಲನೆಯದು ಔದ್ಯೋಗಿಕ ಕ್ರಾಂತಿಗಾಗಿದ್ದರೆ ಕೃಷಿಕ್ರಾಂತಿಗಾಗಿಯೂ ಒಂದು ಸಲ್ಲಬೇಕು. ಜನಸಂಖ್ಯೆಯ ಅಪಾರ ಹೆಚ್ಚಳವು ತೀವ್ರವಾದ ಆಹಾರ ಸಮಸ್ಯೆಯನ್ನು ತಂದೊಡ್ಡಿದಾಗ ಚೀನದಿಂದ ಬಂದ ನಿರಾಶ್ರಿತರು ವಾಯದೆಗೇಣಿಯಿಂದ ಹಾಂಗ್ ಕಾಂಗಿಗೆ ಸೇರಿದ ೩೬೫ ಚದರ ಮೈಲು ಕರಾವಳಿ ಭೂಮಿಯಲ್ಲಿ ತಮ್ಮ ಕೌಶಲವನ್ನು ಪ್ರದರ್ಶಿಸಿದರು. ಇಲ್ಲಿನ ಅರೆಬರಡು ಭೂಮಿಯ ಮೂಲ ರೈತರು ಗೋದಿ ಹೊರತು ಏನನ್ನೂ ಬೆಳೆಸುತ್ತಿದ್ದಿಲ್ಲ. ಆದರೆ ಹೊರಗಿಂದ ಬಂದ ನಿರಾಶ್ರಿತರು ಈ ಭೂಮಿಗಳನ್ನು ಗೇಣಿಗೆ ಹಿಡಿದು ವರ್ಷಕ್ಕೆ ಎಂಟು ತರಕಾರಿ ಬೆಳೆಗಳನ್ನು ತೆಗೆದು ಪವಾಡವನ್ನೇ ತೋರಿಸಿದರು. ಇಂದು ಈ ಪ್ರದೇಶದಲ್ಲಿ ಹಾಂಗ್‌ಕಾಂಗಿನ ತರಕಾರಿ ಬೇಡಿಕೆಯಲ್ಲಿ ಅರ್ಧದಷ್ಟು, ಮತ್ತು (ಮಾಂಸಕ್ಕಾಗಿ) ಕೋಳಿ ಮತ್ತು ಹಂದಿ ಬೇಡಿಕೆಯಲ್ಲಿ ಒಂದು ದೊಡ್ಡ ಭಾಗ ಪೂರೈಕೆಯಾಗುತ್ತದೆ.



ಅನಿರ್ಬಂಧ ವ್ಯಾಪಾರೋದ್ಯಮದ ಒಂದು ಮಹಾ ವಿಜಯವೆಂದು ಇಂದಿನ ಹಾಂಗ್ ಕಾಂಗನ್ನು ನಿರ್ದೇಶಿಸಬಹುದು. ಇಲ್ಲಿ ಸಂಪತ್ತು ಬಡತನಗಳ ಅಗಾಧ ಅಂತರವನ್ನು ಕಾಣಬಹುದಾದರೂ ಜನರಲ್ಲಿ ಅತೃಪ್ತಿ ಕಾಣಿಸುವುದಿಲ್ಲ. ಚೀನೀಯರು ಬಾಳನ್ನು ಬಂದಂತೆ ಎದುರಿಸುವವರು. ಆದರೂ ಪರಿಸ್ಥಿತಿ ಹೀಗೇ ಉಳಿಯುವುದೆನ್ನಲು ಬಾರದು. ಶ್ರಮಜೀವಿಗಳ ಚಳುವಳಿ ಬೆಳೆದು ಕೂಲಿ ಹೆಚ್ಚಳಕ್ಕಾಗಿ ಕೂಗೆದ್ದರೆ ಹಾಂಗ್ ಕಾಂಗಿನ ಪ್ರಗತಿ ಒಮ್ಮೆಲೆ ನಿಂತುಹೋಗಬಹುದು. ಹಾಂಗ್ ಕಾಂಗಿನ ಸಮೃದ್ಧಿಯಲ್ಲೇ ಅದರ ಅವಸಾನದ ಬೀಜ ಅಡಕವಾಗಿದೆಯೆ ?

ಇದಕ್ಕೂ ಗಂಭೀರವಾದ ಪ್ರಶ್ನೆಯೆಂದರೆ ಅಧ್ಯಕ್ಷ ಮಾವ್‌ತ್ಸೆ ತುಂಗರು ಕಮ್ಯುನಿಜಂನ ಮುಖದಲ್ಲಿರುವ ಈ ಬಂಡವಳಶಾಹಿ ಮೊಡವೆಯನ್ನು ಎಷ್ಟು ಕಾಲ ಸಹಿಸುವರು? ಎಂಬುದು. ಸದ್ಯಕ್ಕೆ ಹಾಂಗ್‌ಕಾಂಗಿನ ಅಸ್ತಿತ್ವದಿಂದ ಕಮ್ಯುನಿಸ್ಟರಿಗೆ ಅಷ್ಟು ತೊಂದರೆಯಾಗಿಲ್ಲ. ಅದು ಲಾಭದಾಯಕವಾಗಿಯೇ ಇದೆ. ತಮ್ಮ ಪ್ರದೇಶದ ಸರಕುಗಳನ್ನು ಹಾಂಗ್ ಕಾಂಗ್ ಮೂಲಕ ಮಾರಿ ಚೀನಿ ಕಮ್ಯುನಿಸ್ಟರು ಕಳೆದ ವರ್ಷ ೮೦ ಕೋಟಿ ರೂಪಾಯಿಯ ವಿದೇಶಿ ವಿನಿಮಯವನ್ನು ಗಳಿಸಿದರು. ಹಾಂಗ್ ಕಾಂಗಿನಲ್ಲಿ ಬ್ರಿಟಿಶರೂ ಬಲು ಎಚ್ಚರಿಕೆಯ ಧೋರಣೆ ವಹಿಸಿದ್ದಾರೆ.

ಗೋವಾದಲ್ಲಿ ಭಾರತ ಕೈಕೊಂಡ ಕ್ರಮದ ಬಗ್ಗೆ ಬ್ರಿಟಿಶರು ಕೋಪಾವಿಷ್ಟರಾಗಲು ಅವರ ಹಿಮ್ಮನದಲ್ಲಿ ಹಾಂಗ್ ಕಾಂಗಿನ ಭವಿತವ್ಯದ ಪ್ರಶ್ನೆ ಕೊರೆಯುತ್ತಿದ್ದುದೇ ಕಾರಣವಾಗಿರಬೇಕು. ಅದು "ಕೆಟ್ಟ ಮೇಲ್ಪಂತಿ" ಯಾಗಿತ್ತು. ಮಾವ್‌ತ್ಸೆ ತುಂಗ್‌ರಿಗೆ ಹಾಂಗ್‌ಕಾಂಗನ್ನು "ವಿಮೋಚನೆ"ಗೊಳಿಸಬೇಕೆನಿಸಿದರೆ ಏನೂ ತಡ ಹತ್ತಲಾರದು. ಫ್ರೆಂಚ್ ಸುದ್ದಿಗಾರನೊಬ್ಬನ ಪ್ರಶ್ನೆಗುತ್ತರವಾಗಿ ಅವರು "ಹಾಂಗ್ ಕಾಂಗ್? ಓ, ಅದಕ್ಕೇನು? ಒಂದು ಫೋನ್ ಕರೆಯಿಂದ ಅದನ್ನು ವಿಮೋಚನೆಗೊಳಿಸಬಹುದು" ಎಂದರಂತೆ. ಅವರು ಅಲ್ಲಿ ತನಕ ಸೈನ್ಯ ಕೂಡ ಕಳಿಸಬೇಕಿಲ್ಲ. ನೆರೆಯ ಪೋರ್ತುಗೀಸ್ ಮಕಾವ್‌ಗೆ ಸೈನ್ಯ ಕಳಿಸಿದರೆ ಸಾಕು, ಹಾಂಗ್ ಕಾಂಗಿನಲ್ಲಿ ಕೋಟಿಗಟ್ಟಳೆ ಬಂಡವಳ ಹಾಕಿದ ವೀರರು ಓಡಿ ಹೋಗುವರು. ಆಗ ಹಾಂಗ್ ಕಾಂಗ್ ಒಂದೂ ಗುಂಡು ಹಾರಿಸದೆ ನಿರ್ಜನವಾದೀತು.

ಕಮ್ಯುನಿಸ್ಟರು ಹೀಗೆ ಮಾಡದಿದ್ದರೂ ಹಾಂಗ್ ಕಾಂಗ್ ಸಂದೇಹದ ನೆತ್ತಿಯಲ್ಲೇ ಕೂತಿದೆ. ೧೯೯೭ರಲ್ಲಿ ವಾಯದೆ ಕರಾರು ಮುಗಿಯುತ್ತದೆ, ಆಗ ಚೀನ ಏನು ಮಾಡೀತು? ಏನು ಮಾಡಲಿಕ್ಕಿಲ್ಲ? *



## ವಾಕ್-ವಜ್ರ

ಪ್ರಜಾಸತ್ತೆಯೆಂದರೆ "ನಾನು ನಿನಗೇನು ಕಮ್ಮಿ?" ಎಂಬುದಾಗಿರದೆ, "ನೀನು ನನಗೇನು ಕಮ್ಮಿ ?" ಎಂಬುದಾಗಿದೆ —ಥಿಯೋಡೋರ್ ಪಾರ್ಕರ್

ಮನುಷ್ಯ ತನ್ನ ವೈರಿಗಳನ್ನಾರಿಸುವಾಗ ಎಷ್ಟು ಜಾಗ್ರತೆ ವಹಿಸಿದರೂ ಸಾಲದು. —ಆಸ್ಕರ್ ವೈಲ್ಡ್

ನಿರಾಶಾವಾದಿಯೆಂದರೆ ತನ್ನ ಉಪದೇಶವನ್ನು ಕೃತಿಗಿಳಿಸಲು ಯತ್ನಿಸಿದ ಆಶಾವಾದಿ. —ಎಲ್ಡನ್ ಸ್ಮಿತ್

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿ ಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾಗಿ ಅರ್ಥಗಳನ್ನು ವಿವರಿಸಿದೆ.

೧. ವಾಮಮಾರ್ಗ
(ಅ) ಇಕ್ಕಟ್ಟು ದಾರಿ (ಆ) ಒಳ್ಳೇ ಹಾದಿ (ಇ) ಅಹಂಕಾರ (ಈ) ಅಯೋಗ್ಯ ರೀತಿ

೨. ಅನುಜೀವಿ
(ಅ) ಆಶ್ರಯಿಸಿದವ (ಆ) ರೋಗಜಂತು (ಇ) ತಮ್ಮನ ಹೆಂಡತಿ (ಈ) ಬಲ್ಲವ

೩. ಅಪಲಾಪ
(ಅ) ಅಳುವುದು (ಆ) ಸವಿಮಾತು (ಇ) ಸತ್ಯವನ್ನು ಬಚ್ಚಿಡುವುದು (ಈ) ಗುಟ್ಟು

೪. ಅಭಾಗಿನಿ
(ಅ) ಅಕ್ಕ (ಆ) ದುರ್ದೈವಿ ಹೆಣ್ಣು (ಇ) ತಂಗಿ (ಈ) ಅರ್ಧ

೫. ಕುಹರ
(ಅ) ದುರ್ಬುದ್ಧಿ (ಆ) ಶಿವದ್ವೇಷಿ (ಇ) ಕಳ್ಳ (ಈ) ಗವಿ

೬. ಅಡಕಲು
(ಅ) ತಡೆ (ಆ) ರಾಶಿ (ಇ) ಆಳುವಿಕೆ (ಈ) ಅಗಳಿ

೭. ಜೀವಾತು
(ಅ) ಬದುಕಿಸುವಿಕೆ (ಆ) ಕೊಲೆ (ಇ) ಬಾಳುವೆ (ಈ) ದೇವರು

೮. ಪ್ರಣಿಧಾನ
(ಅ) ನಮಸ್ಕಾರ (ಆ) ಧರ್ಮಚಿಂತನೆ (ಇ) ಒತ್ತಿಹಾಕುವಿಕೆ (ಈ) ಸಾವಕಾಶ

೯. ಪರಿಶೀಲನ
(ಅ) ಒಳ್ಳೇ ನಡತೆ (ಆ) ಅಧ್ಯಯನ (ಇ) ಉಳಿಕೆ (ಈ) ಗಡಿ

೧೦. ಬುದ್ಬುದ
(ಅ) ನೀರಗುಳ್ಳೆ (ಆ) ಒದ್ದೆ ಬಟ್ಟೆ (ಇ) ಮಣ್ಣಿನ ಮುದ್ದೆ (ಈ) ಆಶ್ಚರ್ಯಕರ

೧೧. ಮಂತ್ರಣ
(ಅ) ಮಾಟ (ಆ) ಕಡೆಯುವಿಕೆ (ಇ) ಗುಪ್ತ ಚರ್ಚೆ (ಈ) ಗಂಭೀರವಾದ ಧ್ವನಿ

೧೨. ರೋಚಕ
(ಅ) ರೋಗಕಾರಕ (ಆ) ಹೊಲಸು (ಇ) ವಿರೋಧಿ (ಈ) ರುಚಿಕಟ್ಟಾದ



## ‘ ಶಬ್ದಭಾಂಡಾರ ’ ದ ಸರಿಯಾದ ಅರ್ಥಗಳು

೧. **ವಾಮಮಾರ್ಗ** (ಈ) ಅಯೋಗ್ಯ ರೀತಿ, ತಪ್ಪುದಾರಿ, ಅಡ್ಡದಾರಿ. ಉದಾ:— ಕಾರ್ಯಸಿದ್ಧಿಗಾಗಿ ಎಂದೂ ವಾಮಮಾರ್ಗವನ್ನು ಅನುಸರಿಸಬಾರದು. [ಸಂ. ವಾಮ = ಎಡ, ಮಾರ್ಗ = ದಾರಿ ]

೨. **ಅನುಜೀವಿ** (ಅ) ಆಶ್ರಯಿಸಿ ಬಾಳುವವ, ಇನ್ನೊಬ್ಬರನ್ನು ಅನುಸರಿಸಿ ಬದುಕುವವ, ಅವಲಂಬಿತ, ಹಿಂಬಾಲಕ. [ಸಂ. ಅನು=ಅನುಸರಿಸಿ, ಜೀವಿ= ಬದುಕುವವ.]

೩. **ಅಪಲಾಪ** (ಇ) ಸತ್ಯವನ್ನು ಬಚ್ಚಿಡುವುದು, ಇದ್ದದ್ದನ್ನು ಅಲ್ಲಗಳೆಯುವುದು, ನಿರಾಕರಣೆ; ಮನಸಿನಲ್ಲಿದ್ದುದನ್ನು ಮುಚ್ಚಿಕೊಳ್ಳುವುದು. [ಸಂ. ಅಪ ವಿರುದ್ಧ, ಲಪ = ಹೇಳುವಿಕೆ.]

೪. **ಅಭಾಗಿನಿ** (ಆ) ದುರ್ದೈವಿ ಹೆಣ್ಣು, ಭಾಗ್ಯಹೀನಳು, ಬಡವೆ; ಪಾಲು ಇಲ್ಲದವಳು ಅರ್ಥಾತ್ ಅನಾಥಳು. [ಸಂ. ಅ = ಇಲ್ಲ, ಭಾಗ= ಪಾಲು)

೫. **ಕುಹರ** (ಈ) ಗವಿ, ಗುಹೆ; ಪೊಳ್ಳು, ಪೊದರು; ತೂತು. ಉದಾ:— ಅವನ ಹೃದಯ ಕುಹರದೊಳಗೆ ಏನೇನಿದೆಯೋ. [ಸಂ.]

೬. **ಅಡಕಲು** (ಆ) ರಾಶಿ, ಒತ್ತೊತ್ತಾಗಿ ಕೂಡಿಸಿಡುವಿಕೆ, ಒಂದರಮೇಲೊಂದು ಕೂಡಿಹಾಕಿದ್ದು. “ಅಡಕಿಲು” ಎಂದೂ ಇದೆ [ಕನ್ನಡ, ಅಡಕ = ಒಳತಳ್ಳುವಿಕೆ—ಯಿಂದ]

೭. **ಜೀವಾತು** (ಅ) ಬದುಕಿಸುವಿಕೆ, ಪುನರುಜ್ಜೀವನ; ಜೀವ; ಆಹಾರ; ಸತ್ತವರನ್ನು ಬದುಕಿಸುವ ಔಷಧ, ಸಂಜೀವನಿ. [ಸಂ. “ಜೀವ” ದಿಂದ]

೮. **ಪ್ರಣಿಧಾನ** (ಆ) ಗಾಢವಾದ ಧರ್ಮ ಚಿಂತನೆ; ಧ್ಯಾನ; ಯಾರೊಡನಾದರೂ ಗೌರವದಿಂದ ವರ್ತಿಸುವಿಕೆ; ಪ್ರಯೋಗಿಸುವಿಕೆ; ಪರಿಶೀಲಿಸುವಿಕೆ. [ಸಂ.]

೯. **ಪರಿಶೀಲನ** (ಆ) ಅಧ್ಯಯನ, ಆಳವಾಗಿ ಪರೀಕ್ಷಿಸುವುದು; ಪ್ರೀತಿಯಿಂದ ಅಥವಾ ಹಟದಿಂದ ಬೆಂಬತ್ತುವಿಕೆ. [ಸಂ.]

೧೦. **ಬುದ್ಬುದ** (ಅ) ನೀರಗುಳ್ಳೆ; ಕ್ಷಣಿಕವಾದ ಪದಾರ್ಥ; ಐದು ದಿನದ ಗರ್ಭ; ತಂತಾನೇ ಹುಟ್ಟಿದ ಪದಾರ್ಥ. [ಸಂ.]

೧೧. **ಮಂತ್ರಣ** (ಇ) ಗುಪ್ತಚರ್ಚೆ, ಸಲಹೆ ತೆಗೆದುಕೊಳ್ಳುವಿಕೆ, ಸಲಹೆ, ಆಪ್ತಾಲೋಚನೆ. ಸಂ.] ಮನ್ = ವಿಚಾರಿಸು ಎಂಬುದರಿಂದ]

೧೨. **ರೋಚಕ** (ಈ) ರುಚಿಕಟ್ಟಾದ, ಮನ ಮೆಚ್ಚಿಸುವ, ಸ್ವಾರಸ್ಯ, ರಸವತ್ತಾದ, ಸುಂದರ, ಪ್ರಕಾಶಮಾನ. ಉದಾ:— ಈ ಕಾದಂಬರಿ ರೋಚಕವಾಗಿದೆ ಅಂದರೆ ಸ್ವಾರಸ್ಯವಾಗಿದೆ. [ಸಂ]

---

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬—೮ ಸರಿಯಿದ್ದರೆ | .... | ಸಾಧಾರಣ |
| ೯—೧೦ ,, | .... | ಉತ್ತಮ |
| ೧೧—೧೨ ,, | .... | ಅತ್ಯುತ್ತಮ |



ಕರ ಕೊಡುವವನ ಹಣದಿಂದ ವೇತನ ಪಡೆಯುವವರು ಅವನ ಹಣಕ್ಕೆ ಯೋಗ್ಯ ಪ್ರತಿಫಲ ಕೊಡುತ್ತಿದ್ದಾರೆಯೆ ?

# ಆಮೆ ಮತ್ತು ಸರಕಾರಿ ಕೆಲಸ

"ಸ್ಟೇಟ್ಸ್‌ಮನ್" ಪತ್ರಿಕೆಯಿಂದ

ನಮ್ಮ ರಕ್ಷಣಾಮಂತ್ರಿ ಶ್ರೀ ವಿ. ಕೆ. ಕೃಷ್ಣ-ಮೆನನ್‌ರವರು ಇತ್ತೀಚಿನ ತಮ್ಮ ಭಾಷಣವೊಂದರಲ್ಲಿ ಪ್ರಾಸಂಗಿಕವಾಗಿ ಸರ್ಕಾರಿ ನೌಕರರ ಕೆಲಸದ ಕಾಲ ಹಾಗೂ ನಿಷ್ಠೆಯ ಬಗ್ಗೆ ಮಾತನಾಡುತ್ತ, ಸಾಮಾನ್ಯವಾಗಿ ಪ್ರತಿಯೊಬ್ಬ ಸರಕಾರಿ ನೌಕರನೂ ದಿನಕ್ಕೆ ಸರಾಸರಿ ಎರಡೂವರೆ ಗಂಟೆಗಳ ಕಾಲ ಕೆಲಸ ಮಾಡುತ್ತಾನೆಂದು ನುಡಿದರು.

ಪ್ರತಿಯೊಂದು ರಾಜ್ಯದ ಆಡಳಿತ ಯಂತ್ರದಲ್ಲಿಯೂ ಹಲವಾರು ಲೋಪದೋಷಗಳಿವೆಯೆಂಬ ಸಂಗತಿ ಶ್ರೀ 'ಸಾಮಾನ್ಯ'ನಿಗೆ ಅಚ್ಚರಿಯುಂಟು ಮಾಡುವಂತಹದೇನಲ್ಲ. ಸರ್ಕಾರಿ ಕೆಲಸವೆಂದರೆ ಹೊಣೆಗಾರಿಕೆಯ ಕೆಲಸ, ಕ್ಲುಪ್ತವಾಗಿ ಮಾಡಬೇಕಾದ ಕೆಲಸವೆಂಬ ಭಾವನೆ ದಿನದಿನಕ್ಕೂ ಕ್ಷಯಿಸಿಹೋಗುತ್ತಿರುವುದು ಅನುಭವವೇದ್ಯ. ಸರಕಾರದ ಕಾರ್ಯಚಟುವಟಿಕೆ ಪರಕೀಯರ ಸರಕಾರವಿದ್ದಾಗ ನಡೆಯುತ್ತಿದ್ದಂತೆಯೇ ಪ್ರಜಾ ಸರಕಾರ ಬಂದಾಗಲೂ ನಡೆಯುತ್ತಿದೆಯೆಂದರೆ ತಪ್ಪಾಗಲಾರದು. ಶ್ರೀ ಸಾಮಾನ್ಯನು ತನ್ನ ಕುಂದು-ಕೊರತೆಗಳ, ಕಷ್ಟ-ಕಾರ್ಪಣ್ಯಗಳ ಬಗ್ಗೆ ಸರಕಾರಕ್ಕೆ ಮನವಿ ಮಾಡಿಕೊಳ್ಳುವ ಒಂದು ಅರ್ಜಿಯನ್ನು ಸಲ್ಲಿಸಿದರೆ, ಆ ಅರ್ಜಿ ತೀರಾ ಕೆಳಮಟ್ಟದ ಸಾಮಾನ್ಯ ಅಧಿಕಾರಿಯಿಂದ ತೀರಾ ಉನ್ನತ ಮಟ್ಟದ ಹಿರಿಯ ಅಧಿಕಾರಿಯ ವರೆಗೆ– ಅಗತ್ಯವೆನಿಸಿದರೆ– ಕುಂಟುನಡಿಗೆಯಲ್ಲಿ ಹೋಗಿ ಹಿಂದಿರುಗಲು ಇಷ್ಟೇ ಸಮಯ ಬೇಕಾದೀತೆಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಅರ್ಜಿದಾರನು ಮುದುಕನಾದ ನಂತರವೋ ಇಲ್ಲವೆ ಅವನು ಮರಣಹೊಂದಿದ ನಂತರವೋ ಅಥವಾ ಅವನ ಕಷ್ಟ-ಕಾರ್ಪಣ್ಯಗಳೆಲ್ಲ ಸ್ವಪ್ರಯತ್ನ ಹಾಗೂ ಕಾಲಗತಿಯ ಪ್ರಭಾವದಿಂದ ಪರಿಹಾರವಾದ ಬಳಿಕವೋ ಅವನ ಅರ್ಜಿ ಸರಕಾರದಲ್ಲಿ ಇತ್ಯರ್ಥದ ಘಟ್ಟಕ್ಕೆ ಮುಟ್ಟಿದ ಉದಾಹರಣೆಗಳು ಸಾಕಷ್ಟು ದೊರೆಯುತ್ತವೆ. ಇಂತಹ ಆಮೆನಡಿಗೆಯ ಆಡಳಿತ ಯಂತ್ರದ ದೋಷಕ್ಕೆ ನಿಜವಾದ ಕಾರಣವೇನು? ಸರ್ಕಾರಿ ನೌಕರರು ನಿಗದಿಯಾದ ಕಾಲಕ್ಕಿಂತ ಕಡಿಮೆ ಕಾಲ ಕೆಲಸ ಮಾಡುವುದೆ? ತಮ್ಮ ಕೈಕೆಳಗಿನ ನಾಕರರನ್ನು ಹತೋಟಿಯಲ್ಲಿಟ್ಟುಕೊಳ್ಳಲು ಅಧಿಕಾರಿಗಳು



ಅಸಮರ್ಥರಾಗಿರುವುದೆ? ಅಥವಾ ಈ ಅಧಿಕಾರಿಗಳೇ ತಮ್ಮ ನೌಕರರ ಔದಾಸೀನ್ಯಕ್ಕೆ ಮೇಲ್ಪಂಕ್ತಿಯಾಗಿರುವರೇ?

ಕಲ್ಕತ್ತದಲ್ಲಿ 'ರೈಟರ್ಸ್ ಬಿಲ್ಡಿಂಗ್' ಎಂಬುದಿದೆ. ಈ ಕಟ್ಟಡದಲ್ಲಿಯೇ ಪಶ್ಚಿಮ ಬಂಗಾಲ ಸರ್ಕಾರದ ಆಡಳಿತ ಯಂತ್ರವಿರುವುದು. ಇಲ್ಲಿರುವ ಎಲ್ಲ ಸರ್ಕಾರಿ ಕಚೇರಿಗಳ ಕೆಲಸದ ಕಾಲ ಬೆಳಿಗ್ಗೆ ೧೦ ರಿಂದ ಸಂಜೆ ೫ ರ ವರೆಗೆ; ಮಧ್ಯ ಅರ್ಧ ಗಂಟೆ ಕಾಲ ಮಧ್ಯಾಹ್ನ ೧ ರಿಂದ ೧-೩೦ ರ ವರೆಗೆ ಉಪಾಹಾರಕ್ಕಾಗಿ ಬಿಡುವು. ಆದರೆ ಬೆಳಿಗ್ಗೆ ೧೦-೩೦ ಕ್ಕಿಂತ ಮುಂಚೆ ಯಾವ ನೌಕರನೂ ಕಚೇರಿಗೆ ಬರುವುದಿಲ್ಲ. ಹೆಡ್ ಗುಮಾಸ್ತೆಗಳ ಕೃಪಾಕಟಾಕ್ಷದಿಂದ ಇನ್ನೂ ಹದಿನೈದು ನಿಮಿಷ ತಡವಾಗಿ ಎಂದರೆ ೧೦-೪೫ ಕ್ಕೆ ಕಚೇರಿ ಪ್ರವೇಶಿಸಿದರೂ ಆಕ್ಷೇಪವಿಲ್ಲ.

ಕಿಕ್ಕಿರಿದ ಟ್ರಾಮುಗಳಲ್ಲಿ, ಬಸ್ಸುಗಳಲ್ಲಿ, ಪ್ರಯಾಣಿಸಿ, ಕಚೇರಿ ತಲುಪುವ ವೇಳೆಗೆ, ಪಾಪ, ಈ ನೌಕರರಿಗೆ ಸಾಕಷ್ಟು ಪ್ರಯಾಸ ದಣಿವು ಆಗಿರುತ್ತದೆ. ಅದರಲ್ಲಿಯೂ ಬೇಸಿಗೆಯಲ್ಲಿ ನೀರಿಲ್ಲದೆಯೇ ವಸ್ತ್ರಸಹಿತ ಸ್ನಾನ ಮಾಡಿ, ಬೆವರಿನಿಂದ ತೇವವಾದ ಮೈಯನ್ನು ಕಚೇರಿಯ ಫ್ಯಾನಿನಡಿ ಒಣಗಿಸಿಕೊಳ್ಳುತ್ತಾ ದಣಿವಾರಿಸಿಕೊಳ್ಳಲು ಕೊನೆಯ ಪಕ್ಷ ಅರ್ಧ ಗಂಟೆಯಾದರೂ ಬೇಕೇ ಬೇಕು. ತಮ್ಮ ಮನೆಗಳಲ್ಲಿ ಫ್ಯಾನ್‌ಗಳನ್ನು ಇಟ್ಟುಕೊಳ್ಳಲು ಶಕ್ತಿ ಸಾಲದ ನೌಕರರಿಗಂತೂ ಇದೊಂದು ಅಪೂರ್ವ ಅವಕಾಶ.




ಅಂತೂ ಗಡಿಯಾರದ ಮುಳ್ಳು ೧೧-೧೫ ನ್ನು ದಾಟಿ ೧೧-೩೦ ನ್ನು ಸಮೀಪಿಸುವವೇಳೆಗೆ ಅವರ ಗಮನ ಕೆಲಸದ ಕಡೆಗೆ ಹರಿಯುತ್ತದೆ. ಧೂಳು ತುಂಬಿದ ಫೈಲುಗಳನ್ನು ಒಮ್ಮೆ ಕೊಡವಿ ತಮ್ಮ ಮೇಜಿನ ಮೇಲೆ ಅದನ್ನು ತೆರೆದಿಟ್ಟುಕೊಂಡು ಕುರ್ಚಿಯಲ್ಲಿ ಕುಳಿತರೆ ಕೆಲಸ ಪ್ರಾರಂಭವಾದಂತೆ. ಸರ್ಕಾರಿ ನಿಯಮದಂತೆ ಉಪಾಹಾರದ ಬಿಡುವು ಮಧ್ಯಾಹ್ನ ೧ ಗಂಟೆಗೆ ಪ್ರಾರಂಭವಾದರೂ ಅವರಿಗೆ ಮಾತ್ರ, ಅದು ೨ ಗಂಟೆಗಿಂತ ಮುಂಚೆ ಪ್ರಾರಂಭವಾಗುವುದೇ ಇಲ್ಲ. ಸರಿ, ಗೊತ್ತುಮಾಡಿದ ಕಾಲಕ್ಕಿಂತ ಯಥಾಪ್ರಕಾರ ಉಪಾಹಾರಕ್ಕೆ ಅರ್ಧ ಗಂಟೆ ಹೆಚ್ಚೇ ಬೇಕು.

ಮಧ್ಯಾಹ್ನದ ಟೀ ಮುಗಿದ ಬಳಿಕ ಜಗತ್ತಿನ ಎಲ್ಲ ವಿಷಯಗಳ ಬಗ್ಗೆ ಚರ್ಚೆ ನಡೆಯುವುದು ಮಾಮೂಲು. ಅದರಲ್ಲಿಯೂ ಫುಟ್‌ಬಾಲ್ ಹಾಗೂ ಸಿನಿಮಾಗಳಂತಹ ಅತ್ಯಂತ ಪ್ರಿಯವಾದ ವಿಷಯಗಳ ಬಗ್ಗೆಯೇ ಹೆಚ್ಚು ಚರ್ಚೆ.

ಗಡಿಯಾರ ೪ ಗಂಟೆ ಬಾರಿಸುತ್ತಿದ್ದಂತೆಯೇ ಫೈಲುಗಳ ಮುಚ್ಚಾಟ ಪ್ರಾರಂಭವಾಗುತ್ತದೆ. ಕಾಗದಪತ್ರಗಳನ್ನು ಭದ್ರಪಡಿಸಿಡುವ ಸಂಭ್ರಮದಿಂದ ಹೊರಡುವ ಸಿದ್ಧತೆ ಪ್ರಾರಂಭವಾಗಿ, ಅಲಂಕಾರಕ್ಕಾಗಿ ಹಾಕಿಕೊಂಡು ಬಂದು, ಕಚೇರಿಯಲ್ಲಿ ತಮ್ಮ ಅಸ್ತಿತ್ವವನ್ನು ಸೂಚಿಸುವ ಸಲುವಾಗಿ ತಮ್ಮ ಕುರ್ಚಿ ಮೇಜುಗಳನ್ನು ಅಲಂಕರಿಸಿದ್ದ ಕೋಟು, ಟೋಪಿ, ಹ್ಯಾಟುಗಳನ್ನು ಧರಿಸುವ ವೇಳೆಗೆ ಅದು ಮುಗಿಯುತ್ತದೆ.

ಇಲ್ಲಿನ ಸರಕಾರಿ ನೌಕರರಲ್ಲಿ ಫುಟ್‌ಬಾಲ್ ಪ್ರಿಯರೇ ಹೆಚ್ಚು. ಕೊನೆಯ ಪಕ್ಷ ವಾರಕ್ಕೆ ४-೫ ದಿನಗಳಾದರೂ ಒಳ್ಳೆಯ ಫುಟ್‌ಬಾಲ್ ಪಂದ್ಯಗಳನ್ನು ನೋಡಲು ಅವರು ಹೋಗಲೇಬೇಕು. ಅದಕ್ಕಾಗಿ ಕ್ಯೂಗಳಲ್ಲಿ ನಿಂತು ಟಿಕೆಟ್ ಕೊಳ್ಳಬೇಕು. ಪಂದ್ಯ ನಡೆಯುವ ಸ್ಥಳಗಳಿಗೆ ಬೇಗನೇ ಹೋಗದಿದ್ದರೆ ಕ್ಯೂನಲ್ಲಿ ಸ್ಥಳವಾಗಲಿ, ಪಂದ್ಯ ನೋಡಲು ಟಿಕೆಟ್ ಆಗಲಿ ಸಿಕ್ಕದೆ ಇರ

ಬಹುದು. ಆದ್ದರಿಂದ ನಿರಾಶೆಗೆ ಅವಕಾಶವಾಗದಂತೆ ಮುಂಜಾಗ್ರತೆ ವಹಿಸಿ ನೂರಾರು ಮಂದಿ ಫುಟ್‌ಬಾಲ್ ಪ್ರಿಯರು ಮಧ್ಯಾಹ್ನ ೩ ಗಂಟೆಗೆ ಕಚೇರಿಯಿಂದ ಹೊರಡಲು ಹೇಗೊ ಸಾಧ್ಯ ಮಾಡಿಕೊಳ್ಳುತ್ತಾರೆ.

—ಇದು ದಿನಚರಿ; ಪಶ್ಚಿಮ ಬಂಗಾಲದ ಸರಕಾರಿ ಕಚೇರಿಯ ನಿತ್ಯ ಕತೆ. ಉದಾಸೀನ ಪ್ರವೃತ್ತಿಯ ಇಂತಹ ಪರಿಸ್ಥಿತಿಗೆ ಸರಕಾರಿ ನೌಕರರೇ ಸಂಪೂರ್ಣ ಹೊಣೆಯೆಂದು ಹೇಳುವುದು ಅನುಚಿತವಾದೀತು. ಗಾಳಿ, ಬೆಳಕು ಇಲ್ಲದೆ ಜನಭರಿತವಾದ ಕೊಠಡಿಗಳಲ್ಲಿ, ಅಸಹನೀಯವಾದ ವಾತಾವರಣದಲ್ಲಿ ಅವರು ಕೆಲಸ ಮಾಡಬೇಕಾಗಿದೆ. ಕೇವಲ ೬೦ ಚದರಡಿ ಅಳತೆಯ ಕೊಠಡಿಯೊಂದರಲ್ಲಿ ೧೦ ಮಂದಿ ಗುಮಾಸ್ತರು ತಮ್ಮ ಮೇಜು ಕುರ್ಚಿ, ಕಪಾಟು ಮತ್ತು ಟೈಪ್‌ರೈಟರುಗಳನ್ನಿಟ್ಟುಕೊಂಡು ಕೆಲಸ ಮಾಡಬೇಕಾಗಿದೆ.

ಸರಕಾರಿ ಕಚೇರಿಗಳಲ್ಲಿ ಸೋಮಾರಿತನಕ್ಕೆ ಶಿಕ್ಷೆಯೂ ಇಲ್ಲ, ದಕ್ಷತೆಗೆ ಪ್ರೋತ್ಸಾಹವೂ ಇಲ್ಲ. ಸೋಮಾರಿಗೆ ಯಾವುದೇ ಬಗೆಯ ತೊಂದರೆ ಕೊಡುವುದಾಗಲಿ ಮತ್ತು ದಕ್ಷ ಹಾಗು ನಿಷ್ಠಾವಂತ ನೌಕರನಿಗೆ ಯಾವುದೇ ರೀತಿಯಿಂದ ಪ್ರೋತ್ಸಾಹ ನೀಡುವುದಾಗಲಿ ಹಿರಿಯ ಅಧಿಕಾರಿಗೆ ಸಾಧ್ಯವಿಲ್ಲ. ಮೂಗಿಗೆ ಕವಡೆ ಕಟ್ಟಿಕೊಂಡು ದುಡಿಯುವವರ ಮೇಲೆ ಹೆಚ್ಚು ಕೆಲಸದ ಹೊರೆ ಹಾಕುವುದು ಲೋಕದ ನೀತಿ. ಸೋಮಾರಿಗಳಿಗೆ ದೊರಕುವಂತೆಯೇ ಕಷ್ಟಪಟ್ಟು ಕೆಲಸ ಮಾಡುವವರಿಗೂ ಒಡ್ಡಿ ದೊರೆಯುತ್ತದೆಯೇ ಹೊರತು ಇಬ್ಬರಿಗೂ ಈ ವಿಷಯದಲ್ಲಿ ವ್ಯತ್ಯಾಸವನ್ನೇನೂ ಮಾಡುವುದಿಲ್ಲ. ಆದರೆ ನಿಷ್ಠಾವಂತ ಕೆಲಸಗಾರನಿಗೆ ಒಂದು ಅನಾನುಕೂಲವಿದೆ. ನಡೆಯುವವನು ಎಡವುತ್ತಾನೆಯೇ ಹೊರತು ಕುಳಿತಿರುವವನು ಎಡವುತ್ತಾನೆಯೇ? ಅದೇ ರೀತಿ, ಕಷ್ಟಪಟ್ಟು ಕೆಲಸಮಾಡುವವನು ತಪ್ಪು ಮಾಡುವುದು ಸಹಜ. ಅವನ ತಪ್ಪನ್ನು ಅವನ ಸರ್ವಿಸ್ ದಾಖಲೆಯಲ್ಲಿ ಗುರುತಿಸಲಾಗುತ್ತದೆ. ಆದರೆ ಕೆಲಸವನ್ನೇ ಮಾಡದಿರುವವನು ತಪ್ಪನ್ನು ಮಾಡುವುದಿಲ್ಲ; ಅವನ ಸರ್ವೀಸ್ ದಾಖಲೆಯು ಕಳಂಕರಹಿತವಾಗಿಯೇ ಇರುತ್ತದೆ.

ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ--ಎಂಬ ನಾಣ್ಣುಡಿಗೆ ಆಡಳಿತ ಯಂತ್ರವೇನೂ ಹೊರತಲ್ಲ. ನೌಕರರ ಒಪ್ಪು-ತಪ್ಪು ನಡೆ-ನುಡಿಗಳಿಗೆ ಅವರ ಮೇಲಿನ ಅಧಿಕಾರಿಗಳೇ ಮೇಲ್ಪಂಕ್ತಿಯೆನ್ನಬಹುದು. ರೈಟರ್ಸ್ ಬಿಲ್ಡಿಂಗಿನ ಕೆಲವು ಮಂದಿ ಗೆಜೆಟೆಡ್ ಅಧಿಕಾರಿಗಳು ಬೆಳಿಗ್ಗೆ ೯ ಗಂಟೆಗೇ ತಮ್ಮ ಕಚೇರಿಗೆ ಬಂದು ಸಂಜೆ ೭ ಗಂಟೆಯ ವರೆಗೂ ಅಲ್ಲಿಯೇ ಇರುತ್ತಾರೆ. ಆದರೆ ಹೆಚ್ಚು ಮಂದಿ ಗೆಜೆಟೆಡ್ ಅಧಿಕಾರಿಗಳು ಮಧ್ಯಾಹ್ನ ೧೧ ಗಂಟೆಗಿಂತ ಮುಂಚೆ ಕಚೇರಿಗೆ ಬರುವುದೇ ಅಪರೂಪ ಇವರು ಮಧ್ಯಾಹ್ನ ೧ ರಿಂದ ೨ ಗಂಟೆಯೊಳಗೆ ತಮ್ಮ ಉಪಾಹಾರವನ್ನು ಪೂರೈಸಬೇಕು ಆದರೆ ಸಾಮಾನ್ಯವಾಗಿ ೧ ಗಂಟೆಗೆ ಹೊರಕ್ಕೆ ಹೋಗುವ ಅವರು ೩ ಗಂಟೆಗಿಂತ ಮುಂಚೆ ಕಚೇರಿಗೆ ಹಿಂದಿರುಗುವುದಿಲ್ಲ. ಉಪಾಹಾರಕ್ಕಾಗಿ ಹೊರಕ್ಕೆ ಹೋಗದ ಕೆಲವು ಮಂದಿ ಅಧಿಕಾರಿಗಳು ತಮ್ಮ ಏರ್-ಕಂಡೀಷನ್ಡ್ ಕೋಣೆಗಳಲ್ಲಿಯೇ ಕುಳಿತು ಚೊಕ್ಕವಾಗಿ ಟೀ ಕುಡಿಯುವರು. ಅವರೆಲ್ಲರೂ ಒಟ್ಟಿಗೆ ಕಲೆತು ಜ್ಯೋತಿಷ್ಯ, ಶಿಕಾರಿ, ಪರ್ವತಾರೋಹಣ ಮತ್ತು ಆಹಾರದಂತಹ ವಿಷಯ



ಗಳ ಬಗ್ಗೆ ಗಂಟೆಗಟ್ಟಲೆ ಚರ್ಚಿಸುವರು.

ತಮ್ಮ ಕೆಲಸದಲ್ಲಿ ಆಸಕ್ತಿ ತೋರಿಸುವ ಆಸೆ ಇದ್ದರೂ ಕೆಲವು ಕಿರಿಯ ಅಧಿಕಾರಿಗಳಿಗೆ ಅದು ಸಾಧ್ಯವಿಲ್ಲ. ಹಿಂದಿನಿಂದ ನಡೆದುಬಂದ ಕಚೇರಿಯ "ಅಂಧಸಂಪ್ರದಾಯ"ಕ್ಕೆ ಕಟ್ಟುಬಿದ್ದು ಈ ಅಧಿಕಾರಿಗಳು ತಮ್ಮ ಉತ್ಸಾಹವನ್ನು ಅಡಗಿಸಿಕೊಂಡಿರಬೇಕಾಗಿದೆ. ಕಷ್ಟಪಟ್ಟು ಕೆಲಸ ಮಾಡುವ ಅಧಿಕಾರಿಯನ್ನು ಕಂಡರೆ ಅವನ ಸಹವರ್ತಿಗಳು ಕಣ್ಣು ಕೆಂಪಗೆ ಮಾಡುತ್ತಾರೆ ಕಷ್ಟಪಟ್ಟು ಕೆಲಸ ಮಾಡಲು ಪ್ರಯತ್ನಿಸುವುದರಿಂದ ತಮ್ಮ ಸಹೋದ್ಯೋಗಿಗಳನ್ನು ಶತ್ರುಗಳನ್ನಾಗಿ ಮಾಡಿಕೊಂಡಂತಾಗುತ್ತದೆಂದೂ ತಮ್ಮ ಹಿರಿಯ ಅಧಿಕಾರಿಗಳು ತಮಗೆ ಯಾವ ವಿಧವಾದ ಪ್ರೋತ್ಸಾಹವನ್ನೂ ಕೊಡುವುದಿಲ್ಲವೆಂದೂ ಅದೇ ಕಾರಣದಿಂದ ತಾವು ನಿಧಾನವಾಗಿ ಕೆಲಸ ತೂಗಿಸುವುದಾಗಿಯೂ ಕಿರಿಯ ಅಧಿಕಾರಿಗಳು ನಿರುತ್ಸಾಹದಿಂದ ಹೇಳುತ್ತಾರೆ. ಸರಕಾರಿ ಕಚೇರಿಯಲ್ಲಿ ಕಷ್ಟಪಟ್ಟು ಕೆಲಸ ಮಾಡುವವನು ಕೇವಲ ಮೂರ್ಖ ಎಂಬುದು ಅಲ್ಲಿ ಒಂದು ಸಿದ್ಧಾಂತವಾಗಿದೆ.

ಸರಕಾರಿ ಕಚೇರಿಗಳಲ್ಲಿ ಕಾಗದಪತ್ರಗಳ ವಿಲೇವಾರಿ ಸಾವಕಾಶವಾಗಲು ನೌಕರರ ಸೋಮಾರಿತನವೇ ಮುಖ್ಯ ಕಾರಣವೆಂಬುದಕ್ಕಿಂತ ಸರಕಾರ ಅನುಸರಿಸುತ್ತಿರುವ ಪದ್ಧತಿಯೇ ಮುಖ್ಯ ಕಾರಣವೆಂದು ಹೇಳುವುದು ಹೆಚ್ಚು ಸೂಕ್ತ ಎಂಬುದು ಹಿರಿಯ ಅಧಿಕಾರಿಗಳೊಬ್ಬರ ಅಭಿಪ್ರಾಯ. ಪ್ರತಿಯೊಂದು ಕಾಗದವೂ ಆ ಕಾಗದದಲ್ಲಿನ ವ್ಯವಹಾರಕ್ಕೆ ಸಂಬಂಧಿಸಿದ ನೌಕರ-ಅಧಿಕಾರಿಗಳೆಲ್ಲರ ಕೈ ತಟಾಯಿಸಿಕೊಂಡು ಮುಂದೆ ಸಾಗಬೇಕು. ಕೆಲವು ಬಾರಿಯಂತೂ ಆ ಕಾಗದ ಯಾರ ವಶದಲ್ಲಿದೆಯೆಂದು ಹುಡುಕುವುದಕ್ಕೇ ಹೆಚ್ಚು ಸಮಯ ವ್ಯಯವಾಗುತ್ತದೆ.

ರೈಟರ್ಸ್ ಬಿಲ್ಡಿಂಗಿನ ಯಾವುದಾದರೊಂದು ಇಲಾಖೆಗೆ ಪತ್ರವೊಂದನ್ನು ಕಳುಹಿಸಿದರೆ ಅದು ಪತ್ರಸ್ವೀಕಾರದ ಕಚೇರಿಗೆ ತಲುಪಿ ಅಲ್ಲಿನ ಇನ್‌ವರ್ಡ್ ರಿಜಿಸ್ಟರಿನಲ್ಲಿ ದಾಖಲೆಯಾಗುತ್ತದೆ. ಅನಂತರ ಅದನ್ನು ಹೆಡ್ ಗುಮಾಸ್ತೆಯ ಬಳಿಗೆ ಕಳಿಸಲಾಗುತ್ತದೆ. ಅದರ ಮೇಲೆ ಆತ ಟಿಪ್ಪಣಿ ಬರೆದು ಅದನ್ನು ರೆಫರೆನ್ಸ್ ಕಚೇರಿಗೆ ಕಳಿಸುತ್ತಾನೆ. ಅನಂತರ ಅದು ಅಂತರ್ ಇಲಾಖಾ ವಹಿವಾಟಿನ ರಿಜಿಸ್ಟರಿನಲ್ಲಿ ದಾಖಲಾಗಿ, ಸಂಬಂಧಿಸಿದ ಗುಮಾಸ್ತೆಗೆ ಕೊಡಲ್ಪಡುತ್ತದೆ. ಅದರ ಮೇಲೆ ಆತ ತನ್ನ ಟಿಪ್ಪಣಿ ಬರೆಯುತ್ತಾನೆ. ಮತ್ತೆ ಈ ಗುಮಾಸ್ತೆ, ರಿಜಿಸ್ಟ್ರಾರ್, ಸಹಾಯಕ ಕಾರ್ಯದರ್ಶಿ ಉಪ ಕಾರ್ಯದರ್ಶಿ ಮತ್ತು ಕಟ್ಟಕೊನೆಗೆ ಕಾರ್ಯದರ್ಶಿಯ ಬಳಿಗೆ ಹೋಗುತ್ತದೆ. ಕೆಲವು ಸಾರಿ ಈ ಕಾಗದ 'ಹಿಮ್ಮೊಗ'ದ ವಿಧಾನದಲ್ಲಿ ಹಿಂದಕ್ಕೆ ಕಳಿಸಲ್ಪಟ್ಟು ಔಟ್‌ವರ್ಡ್ ರಿಜಿಸ್ಟರ್ ಮೂಲಕ ಸಂಬಂಧಿಸಿದ ಡೈರೆಕ್ಟರೇಟ್‌ನಲ್ಲಿ ಪ್ರಸ್ತಾಪಿಸಲಾಗುತ್ತಿದೆ. ಮತ್ತೆ ಸುತ್ತಿ ಬಳಸಿ ಈ ಕಾಗದ ಸೆಕ್ರೆಟರಿಯೆಟ್ ಶಾಖೆಗೆ ಹಿಂದಿನ ವಿಧಾನದಲ್ಲಿಯೇ ಮರಳಿ ಬರುತ್ತದೆ. ಸೆಕ್ರೆಟರಿಯೆಟ್ ಮಟ್ಟದಲ್ಲಿ ಸಂದೇಹವೇನಾದರೂ ಮೂಡಿತೆಂದರೆ; ಪುನಃ ಅಗತ್ಯವೆನಿಸಿದಷ್ಟು ಸಾರಿ ಆ ಕಾಗದವನ್ನು ಡೈರೆಕ್ಟರೇಟ್‌ಗೆ ಕಳಿಸಲಾಗುತ್ತದೆ. ಕೆಳಮಟ್ಟದ ಜಿಲ್ಲಾಧಿಕಾರಿಯ ಟಿಪ್ಪಣಿಯೇನಾದರೂ ಅಗತ್ಯವಾದರೆ, ಈ ಕಾಗದದ ವಿಲೇವಾರಿ ಯಾವಾಗ ಆಗುತ್ತದೆಯೋ ದೇವರೆ ಬಲ್ಲ.

ಇತರ ಇಲಾಖೆಗಳ ಹಿರಿಯ ಅಧಿಕಾರಿಗಳು ಇಲ್ಲಿನ ಆರ್ಥಿಕ ಇಲಾಖೆಯನ್ನು ವ್ಯಂಗ್ಯವಾಗಿ "ಡಾಯ್ನೀ" (ಸ್ತ್ರೀಭೂತ) ಎಂದು ಕರೆಯುತ್ತಾರೆ. ಈ ಇಲಾಖೆಯ ಟಿಪ್ಪಣಿ ಪಡೆಯಲು ಕಾಗದವನ್ನೇನಾದರೂ ಕಳಿಸಿದರೆ, ಅದು ವೇದನಾಕಾರಕ ವಿಲಂಬಗತಿಯಲ್ಲಿ ತೆವಳತೊಡಗುತ್ತದೆ. ತೀವ್ರಗತಿಯಿಂದ ಆರ್ಥಿಕಾಭಿವೃದ್ಧಿಯಾಗುತ್ತಿರುವಾಗ, ಬಹುಶಃ ಶತಮಾನದ ಹಿಂದೆ ರೂಪಿಸಿದ ನಿಯಮ ನಿಬಂಧನೆಗಳಿಗೇ ಆರ್ಥಿಕ ಇಲಾಖೆಯು ಅಂಟಿಕೊಂಡಿರುವುದು ತೀರಾ ಶೋಚನೀಯ. *

ಕಷ್ಟಕ್ಕಂಜದವರಷ್ಟೇ ಇದನ್ನು ಪಡೆಯುತ್ತಾರೆ

# ಶೌರ್ಯಕ್ಕೊಂದು ಶಿಷ್ಯವೃತ್ತಿ

ವಿಶ್ವವಿದ್ಯಾಲಯಗಳಲ್ಲಿ ಪದವಿಪಡೆದು ಜೀವನ ರಂಗದಲ್ಲಿ ಪ್ರವೇಶಿಸುವ ವಿದ್ಯಾರ್ಥಿಗಳಿಗೆ ಒಂ-ದಿಷ್ಟು ಪುಸ್ತಕ ಜ್ಞಾನವಿರುವುದೇ ಹೊರತು ಪ್ರತ್ಯಕ್ಷ ಜೀವನಾನುಭವ ಏನೇನೂ ಇರುವುದಿಲ್ಲ ಎಂಬ ಜನಾಭಿಪ್ರಾಯದಲ್ಲಿ ತಥ್ಯಾಂಶ ಬಹು ಮಟ್ಟಿಗೆ ಇದೆಯೆನ್ನಬಹುದು. ಜಗತ್ತಿನ ಎಲ್ಲೆಡೆಗಳಲ್ಲೂ ಈ ಪರಿಸ್ಥಿತಿ ಸಾಮಾನ್ಯವಾಗಿ ಒಂದೇ ಬಗೆಯದಾಗಿದೆ. ಇದಕ್ಕೇನು ಉಪಾಯ ಎಂಬ ಯೋಚನೆ-ಚರ್ಚೆಗಳು ನಡೆಯುತ್ತಿವೆಯೆ ವಿನಾ ವ್ಯಾವಹಾರಿಕವಾದ ಮಾರ್ಗವಾವುದೂ ಇದುವರೆಗೆ ಕಂಡುಹಿಡಿಯಲ್ಪಟ್ಟಿಲ್ಲ.

ಆದರೆ ಫ್ರಾನ್ಸಿನಲ್ಲಿ ಮಾತ್ರ ಒಬ್ಬಾತ ಈ ಬಗ್ಗೆ ಒಂದು ಉಪಾಯವನ್ನು ಯೋಜಿಸಿದನು. ಅವನು ಸೂಚಿಸಿದ ಮಾರ್ಗ ಅಲ್ಲಿ ಈಗ ಜನಪ್ರಿಯವಾಗಿದ್ದು ಅದರಿಂದ ಪ್ರತಿ ವರ್ಷ ೩೦೦ ವಿದ್ಯಾರ್ಥಿಗಳು ಪ್ರಯೋಜನ ಹೊಂದುತ್ತಿದ್ದಾರೆ. ಜೀವನದಲ್ಲಿ ಯಶಸ್ವಿಗಳಾಗುತ್ತಿದ್ದಾರೆ ಜೀನ್ ವಾಲ್ವರ್ ಎಂಬ ಫ್ರೆಂಚ್ ಉದ್ದಿಮೆದಾರನೊಬ್ಬ ಈಗ್ಗೆ ಸುಮಾರು ೨೫-೨೬ ವರ್ಷಗಳ ಹಿಂದೆ ಫ್ರೆಂಚ್ ಶಿಕ್ಷಣ ಪದ್ಧತಿ ಪುಸ್ತಕಗಳನ್ನೇ ಹೆಚ್ಚಾಗಿ ಅವ-ಲಂಬಿಸಿದ್ದು ಅದರಿಂದ ಪ್ರತ್ಯಕ್ಷ ಜೀವನಾನುಭವ ವಿದ್ಯಾರ್ಥಿಗಳಿಗೆ ದೊರೆಯುತ್ತಿಲ್ಲವೆಂದು ಕಂಡುಕೊಂಡು ಫ್ರಾನ್ಸಿನ ವಿದ್ಯಾರ್ಥಿಗಳಿಗೆ ಅವರ ಜೀವನದೊಡನೆ ನೇರವಾದ ಸಂಪರ್ಕ ಹೊಂದುವುದಕ್ಕೆ ಒಂದು ಅವಕಾಶವನ್ನೊದಗಿಸಲು ನಿರ್ಧರಿಸಿದನು.

ಅದು ಹೇಗೆ? ವ್ಯವಹಾರ ಜ್ಞಾನ ಪಡೆಯಿರಿ ಎಂದು ವಿದ್ಯಾರ್ಥಿಗಳಿಗೆ ಹೇಳುವುದರಷ್ಟರಿಂದಲೇ ಪ್ರಯೋಜನವಾಗುವುದಿಲ್ಲ. ಧೈರ್ಯ, ಸ್ಥೈರ್ಯ, ಅನುಭವಾದಿಗಳನ್ನು ಕಷ್ಟಪಟ್ಟೇ ಪಡೆಯಬೇಕಾಗುವುದೆಂಬುದನ್ನು ಲಕ್ಷಾಧೀಶನಾದ ಜೀನ್ ವಾಲ್ವರ್ ಬಲ್ಲವನಾಗಿದ್ದ. ತನ್ನ ಕುಟುಂಬದ ಒಡೆತನದ ಉಕ್ಕಿನ ಕಾರಖಾನೆಯಲ್ಲಿ ತನಗೆ ಸಿಗಲಿದ್ದ ದೊಡ್ಡ ಹುದ್ದೆಯ ನೌಕರಿಯೊಂದನ್ನು ತಿರಸ್ಕರಿಸಿ ಈತ ತನ್ನ ತಾರುಣ್ಯದಲ್ಲಿ ಉತ್ತರ ಆಫ್ರಿಕಕ್ಕೆ ತೆರಳಿದ್ದ. ಮೊರೊಕ್ಕೊವನ್ನೆಲ್ಲ ಸೈಕಲ್ಲಿನ ಮೇಲೆ ಸಂಚರಿಸಿ ಝಲಿಜಾ ಎಂಬಲ್ಲಿ ತವರದ ದೊಡ್ಡ ಗಣಿಯೊಂದನ್ನು ಪತ್ತೆ ಹಚ್ಚಿದ್ದ. ಮುಂದೆ ಇದೊಂದು ದೊಡ್ಡ ಉದ್ದಿಮೆಯಾಗಿ ಬೆಳೆಯಿತು. ೨೫ ವರ್ಷಗಳ ಹಿಂದೆ ವಾಲ್ವರ್ ತನ್ನ ಈ ಸಾಹಸ-ಯಶಸ್ಸಿನ ಸ್ಮಾರಕವೆಂದು ವಿದ್ಯಾರ್ಥಿಗಳಿಗೆ ಜೀವನಾನುಭವ ದೊರಕಿಸಿಕೊಡುವುದಕ್ಕಾಗಿ ಒಂದು ಅತ್ಯಲ್ಪ ಮೊತ್ತದ ಶಿಷ್ಯವೃತ್ತಿಯನ್ನು ಕೊಡಲಾರಂಭಿಸಿದನು. ಇದರ ಮೊತ್ತ ಅಲ್ಪವಾಗಿದ್ದರೂ ಈ ಶಿಷ್ಯವೃತ್ತಿಯನ್ನು ಪಡೆದ ವಿದ್ಯಾರ್ಥಿಗಳು ಅತ್ಯಂತ ಕಠಿಣವಾದ ಜೀವನ ನಡೆಸಿ ಅಭ್ಯಾಸ ಮಾಡಬೇಕಾಗಿದ್ದರೂ ಈ ಶಿಷ್ಯವೃತ್ತಿಗಳನ್ನು ಪಡೆದವರು ತಾವು ಧನ್ಯರು ಎಂದು ಭಾವಿಸಿಕೊಳ್ಳುತ್ತಾರೆ.

ಈ ಶಿಷ್ಯವೃತ್ತಿ ಅಪೂರ್ವವಾಗಿರುವಂತೆ ಸಾಹಸಿ ಮನೋವೃತ್ತಿಯವರಿಗೆ ಅತ್ಯಂತ ಆಕರ್ಷಕವೂ ಆಗಿದೆ. ಆಯ್ದ ವಿದ್ಯಾರ್ಥಿಗಳಿಗೆ ಸಿಗುವುದು ತಲಾ ೩೦,೦೦೦ ಫ್ರಾಂಕುಗಳು (ರೂ. ೩೦೦) ಜೊತೆಗೆ ಇವರಿಗೆ ಒಂದು ಪರಿಚಯ ಪತ್ರವನ್ನೂ ಕೊಡುತ್ತಾರೆ. ಅದರಲ್ಲಿ ಇವರು ಝಲಿಜಾ

ಸ್ಕಾಲರಶಿಪ್ ವಿದ್ಯಾರ್ಥಿಗಳು ಎಂದು ನಾಲ್ಕು ಭಾಷೆಗಳಲ್ಲಿ ಬರೆದಿರುತ್ತಾರೆ. ಶಿಷ್ಯವೃತ್ತಿ ದೊರೆತ ವಿದ್ಯಾರ್ಥಿಗಳು ಜಗತ್ತಿನ ನಾನಾ ಮೂಲೆಗಳಿಗೆ ಹೋಗಿ ಅಲ್ಲಿಯ ಭೂಮಿ, ಜನ ಇತ್ಯಾದಿಗಳ ವಿವರವಾದ ಅಭ್ಯಾಸವನ್ನು ಮಾಡಿ ವರದಿಯ ನ್ನೊಪ್ಪಿಸಬೇಕಾಗುವುದು.

ಸಾಮಾನ್ಯವಾಗಿ ವಿದ್ಯಾರ್ಥಿಗಳಿಗೆ ಆದಷ್ಟು ಅನುಕೂಲವಾದ ಪರಿಸ್ಥಿತಿಯಲ್ಲಿ ಓದಲು ಸಾಧ್ಯ ವಾಗಲೆಂದೇ ಶಿಷ್ಯವೃತ್ತಿಗಳು ಕೊಡಲ್ಪಡುತ್ತವೆ. ಝೆಲಿಜಾ ಶಿಷ್ಯವೃತ್ತಿಯ ರೀತಿ ಮಾತ್ರ ಹಾಗಿಲ್ಲ. ಇದರಿಂದ ಸಿಗುವ ಅತ್ಯಲ್ಪ ಹಣವೆಂದರೆ ವಿದ್ಯಾ-ರ್ಥಿಗಳ ಕಷ್ಟಸಹಿಷ್ಣುತೆ, ಧೈರ್ಯ, ದೇಹಬಲ, ಬುದ್ಧಿಶಕ್ತಿ, ಪ್ರಸಂಗಾವಧಾನ ಮುಂತಾದವು ಗಳಿಗೆ ಒಂದು ಆಹ್ವಾನವೇ ಆಗಿರುತ್ತದೆ. ಏಕೆಂ ದರೆ ಈ ವಿದ್ಯಾರ್ಥಿಗಳು ತಮಗಪರಿಚಿತವಾದ ನಾಡಿನಲ್ಲಿ ಅಪರಿಚಿತರ ಸಹವಾಸದಲ್ಲಿ ಇರಬೇ-ಕಾಗುವುದಲ್ಲದೆ ಆ ಜಗತ್ತಿನ ಸಂಪೂರ್ಣ ಅಭ್ಯಾ ಸವನ್ನು ಮಾಡಬೇಕಾಗುತ್ತದೆ. ಇದಕ್ಕಾಗಿ ಅವರು ವನವಾಸ-ಉಪವಾಸಗಳನ್ನು ಎದುರಿಸ ಬೇಕಾಗುವುದು. ಸುಖ-ಸೌಕರ್ಯಗಳನ್ನು ಕನ ಸಿನಲ್ಲಷ್ಟೆ ಕಾಣುತ್ತ ಹಗಲಿರುಳು ದುಡಿಯಬೇ-ಕಾಗುವುದು.

ಇಪ್ಪತ್ತೈದು ವರ್ಷಗಳ ಹಿಂದೆ ಈ ಶಿಷ್ಯವೃತ್ತಿ ಆರಂಭವಾದಾಗಿನಿಂದ ಇದುವರೆಗೆ ಸುಮಾರು ೨೫೦೦ ಕ್ಕಿಂತ ಹೆಚ್ಚು ಫ್ರೆಂಚ್ ವಿದ್ಯಾರ್ಥಿಗಳು (೧೬ ರಿಂದ ೧೯ ವಯಸ್ಸಿನವರು) ಜಗತ್ತಿನ ಅರ-ವತ್ತೇಳು ದೇಶಗಳಿಗೆ ಹೋಗಿ ತಮ್ಮ ಅಭ್ಯಾಸ ಪೂರೈಸಿದ್ದಾರೆ. ಆಫ್ರಿಕಾದ ಅರಣ್ಯ ಮಾರ್ಗ ಗಳಲ್ಲಿ ಅವರು ಸೈಕಲ್ ಪ್ರವಾಸ ಮಾಡಿದ್ದಾರೆ, ಆಲ್ಬರ್ಟ್‌ಸ್ವೈಟ್ಝರರ ಆಸ್ಪತ್ರೆಗಳಲ್ಲಿ ಆಳುಗ-ಳಾಗಿ ಕೆಲಸ ಮಾಡಿದ್ದಾರೆ, ಹಾಂಗ್‌ಕಾಂಗಿನಲ್ಲಿ ಹಡಗುಗಳಲ್ಲಿ ದುಡಿದಿದ್ದಾರೆ, ಟೆಕ್ಸಾಸಿನ ಎಣ್ಣೆ ಗಣಿಗಳಲ್ಲಿ ಕೂಲಿ ಕೆಲಸ ಮಾಡಿದ್ದಾರೆ, ಆಲ್ಪ್ಸ ಮತ್ತು ಎಂಡೆಸ್ ಪರ್ವತಗಳನ್ನು ಹತ್ತಿದ್ದಾರೆ.

ಸೊರ್ಬೊರ್ನ್‌ನಲ್ಲಿ ಈಗ ಇಂಜನಿಯರಿಂಗ್ ವಿದ್ಯಾರ್ಥಿಯಾಗಿರುವ ಕ್ಲಾಡ್ ಲಾ ರೋಬೆ ಈ ಶಿಷ್ಯವೃತ್ತಿಗಾಗಿ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವ ಸಮಿತಿಗೆ ಒಪ್ಪಿಸಲು 'ಮೊಸ್ಗೆನ್‌ನ ಪ್ರಾಚೀನ ಅರಮನೆಗಳ ಪರಿಚಯ' ಎಂಬ ಹನ್ನೆ ರಡು ಪುಟಗಳ ನಿಬಂಧವನ್ನು ಬರೆಯಲು ಮೂರು ತಿಂಗಳ ಕಾಲ ಶ್ರಮಿಸಿದನೆಂದರೆ ಈ ಶಿಷ್ಯ ವೃತ್ತಿಯ ಮಹತ್ವ ಮತ್ತು ಆಕರ್ಷಣೆಗಳ ಕಲ್ಪನೆ ಬರುವಂತಿದೆ.

ತಮ್ಮ ಉದ್ದೇಶ ಸಾಧನೆಗಾಗಿ ಝೆಲಿಜಾ ಸ್ಕಾಲರರು ನಂಬಲಸಾಧ್ಯವಾದ ಸಾಹಸಗಳನ್ನು ಮಾಡುತ್ತಾರೆ. ಕ್ಲಾಡ್ ನೆಜಾರ್ ಎಂಬಾತ ಜಪಾನಿಗೆ ಹೋಗುವಾಗ ಹಾದಿಯ ಖರ್ಚನ್ನೆಲ್ಲ ವಿವಿಧ ಕೆಲಸಗಳನ್ನು ಮಾಡಿ ಸಂಪಾದಿಸಿದ. ಯುಗೋಸ್ಲಾವಿಯದಲ್ಲಿ ೧೨ ದಿನಗಳ ವರೆಗೆ ಆತ ಲೈಫ್‌ಗಾರ್ಡ್ ಎಂದು ಕೆಲಸ ಮಾಡಿದ. ಸೈಗಾಂವ್ ಧಕ್ಕೆಯಲ್ಲಿ ಮೂರು ವಾರ ಅಪ್ರೆಂ-ಟಿಸ್ ರಿವೆಟರ್ ಎಂದು ದುಡಿದ. ಮೀನು ಹಿಡಿ ಯುವ ದೋಣಿಯೊಂದರಲ್ಲಿ ೨೭ ದಿನಗಳ ವರೆಗೆ ಮೀನಿನ ಬಲೆ ಜಗ್ಗುವ ಕೆಲಸ ಮಾಡಿದ.

೧೯೫೪ ರಲ್ಲಿ ಬರ್ನಾರ್ಡ್ ಫಿಂಝ್ ಎಂಬ ವಿದ್ಯಾರ್ಥಿ ನಡೆಸಿದ ಸಾಹಸದ ಕಥೆ ಅದ್ಭುತ ವಾಗಿದೆ. ೧೯ ವರ್ಷ ಪ್ರಾಯದ ಈ ಫಿಂಝ್ ಕಿಸೆಯಲ್ಲಿ ಒಂದಿಷ್ಟು ಫ್ರಾಂಕುಗಳನ್ನೂ ಝೆಲಿಜಾ ಶಿಷ್ಯವೃತ್ತಿ ಸಂಸ್ಥೆ ಇತ್ತ ಪರಿಚಯಪತ್ರವನ್ನೂ ಇಟ್ಟುಕೊಂಡು ತನ್ನೂರಾದ ಸ್ಟ್ರಾಸ್‌ಬರ್ಗ್ ನಿಂದ ಭಾರತದ ಆನೆಗಳ ಬಗ್ಗೆ ಅಭ್ಯಾಸ ಮಾಡ ಲು ಹೊರಟ. ಆತ ಅಲ್ಜೀರ್ಸ್‌ಕ್ಕೆ ನಡೆಯುತ್ತಲೇ ಹೋದ. ಅಲ್ಲಿಯ ಭಾರತ ಕಾನ್ಸಲ್ ಜನರಲ್ ಅವನಿಗೆ ಭಾರತ ಪ್ರವೇಶಪತ್ರ ಕೊಡಲಿಲ್ಲ. ಫ್ರಾನ್ಸಿಗೆ ತಿರುಗಿ ಬರುವ ಟಿಕೆಟ್ ಬರ್ನಾರ್ಡ್ ಫಿಂಝ್‌ನ ಬಳಿ ಇರಲಿಲ್ಲವೆಂಬುದೇ ಅದಕ್ಕೆ ಕಾರಣವಾಗಿತ್ತು. ಆದರೆ ಈ ತರುಣ ನಿರಾಶ ನಾಗಲಿಲ್ಲ. ಆತ ತನ್ನ ಅಭ್ಯಾಸದ ಶೀರ್ಷಿಕೆ ಯನ್ನು ಆಫ್ರಿಕದ ಆನೆಗಳು ಎಂದು ಬದಲಾ ಯಿಸಿಕೊಂಡು ದಕ್ಷಿಣಾಭಿಮುಖವಾಗಿ ನಡೆದ.

ಸಹಾರಾ ಮರುಭೂಮಿಯ ಅಂಚಿನಲ್ಲಿ ಅರಬ್ ಟ್ರಕ್ ಡ್ರೈವರನೊಬ್ಬ ಅವನನ್ನು ತನ್ನ ಟ್ರಕ್ಕಿನಲ್ಲಿ ಕೂಡ್ರಿಸಿಕೊಂಡ. ಎರಡು ಬಿರುಗಾಳಿಗಳು, ಕ್ರೂರರಾದ ಸಂಚಾರಿ ಜನಾಂಗಗಳ ಆಕ್ರಮಣ ಮತ್ತು ಒಂದು ಮಹಾಪೂರದಿಂದ ಪಾರಾಗಿ ಫ್ಲಿಂರ್ಝ್ ತನ್ನ ಅಭ್ಯಾಸದ ಕಾರ್ಯಕ್ರಮವನ್ನು ಪೂರೈಸಿದ.

ವೈಯಕ್ತಿಕ ಸುಖ-ಸೌಕರ್ಯಗಳನ್ನು ತನ್ನ ವಿದ್ಯಾಭ್ಯಾಸದ ಅವಧಿಯಲ್ಲಿ ಝುಲಿಜಾ ಸ್ಕಾಲರ್ ಮರೆತೇಬಿಡಬೇಕಾಗುವುದು. ಆತ ಪಾಲಿಸಬೇಕಾದ ನಿಯಮಗಳಲ್ಲಿ "ವಿದ್ಯಾರ್ಥಿ ಏಕಾಂಗಿಯಾಗಿಯೇ ಪ್ರವಾಸ ಕೈಕೊಳ್ಳತಕ್ಕದ್ದು. ಇದರಿಂದ ಅಡ್ಡಿ ಆತಂಕಗಳ ಸಂಭವ ಹೆಚ್ಚಿ ವಿದ್ಯಾರ್ಥಿಗೆ ನಿರೀಕ್ಷಣೆ ಮತ್ತು ಚಿಂತನೆಗಳಿಗೆ ಅವಕಾಶ ಸಿಗುವುದು. ಪ್ರವಾಸವು ವಿದ್ಯಾರ್ಥಿಯ ಚಿತ್ತಸ್ಥೈರ್ಯವನ್ನು ಹೆಚ್ಚಿಸಬೇಕಾದರೆ ಅದೊಂದು ಸಂತೋಷದ ಕಾರ್ಯಕ್ರಮವೆನಿಸಬಾರದು. ಪ್ರವಾಸ ಯೋಜನೆಯನ್ನು ಕಾಳಜಿಯಿಂದ ಮಾಡಿ ಒಂದು ಕ್ರಮದಿಂದ ಪೂರ್ತಿಗೊಳಿಸಬೇಕು. ವಿದ್ಯಾರ್ಥಿ ತನ್ನ ಪ್ರವಾಸಾನುಭವದ ನೈಜ ವರದಿಯನ್ನೊಪ್ಪಿಸತಕ್ಕದ್ದು" ಎಂದಿದೆ. ಮತ್ತೆ ವಿದ್ಯಾರ್ಥಿ ಎಂದಿಗೂ ಮೂರನೆ ವರ್ಗದ ವಾಹನಗಳಲ್ಲದೆ ಅದಕ್ಕೂ ಹೆಚ್ಚು ಸೌಕರ್ಯ ನೀಡುವ ವಾಹನಗಳಲ್ಲಿ ಸಂಚರಿಸಕೂಡದೆಂದೂ ನಿರ್ಬಂಧವಿದೆ.

ಝುಲಿಜಾ ವಿದ್ಯಾಭ್ಯಾಸದಿಂದ ಫ್ರಾನ್ಸಿಗೆ ತುಂಬ ಪ್ರಯೋಜನವಾಗಿದೆ ಫ್ರೆಂಚ್ ಜಗತ್ತಿನಲ್ಲೆಲ್ಲ ಝುಲಿಜಾ ಪದವೀಧರರು ಸಕಲವಿಧದ ಕ್ಷೇತ್ರಗಳಲ್ಲೂ ಮುಂದಿದ್ದಾರೆ. ಕೆಲವರು ಉನ್ನತ ಸರಕಾರೀ ಅಧಿಕಾರಿಗಳಾಗಿದ್ದರೆ. ಹಲವರು ಪ್ರಸಿದ್ಧ ಲೇಖಕರೂ ಡಾಕ್ಟರರೂ ವಕೀಲರೂ ವಿಜ್ಞಾನಿಗಳೂ ಆಗಿದ್ದಾರೆ. ಉತ್ತರ ಆಫ್ರಿಕದ ಟ್ಯುರೆಗ್ ಕಾಡು ಜನಾಂಗದವರೊಡನೆ ತನ್ನ ವಿದ್ಯಾಭ್ಯಾಸದ ಕಾಲವನ್ನು ಕಳೆದಿದ್ದ ಮಿಚೆಲ್ ವೆಲೆಟ್ ಈಗ ಫ್ರೆಂಚ್ ಸೈನ್ಯದ ಟ್ಯುರೆಗ್ ಶಾಖೆಯಲ್ಲಿ ಉನ್ನತಾಧಿಕಾರಿಯಾಗಿದ್ದಾನೆ. ಡಾ. ಸ್ವೈಟ್ಝರರ ಆಸ್ಪತ್ರೆಯಲ್ಲಿ ಕೆಲಸ ಮಾಡುತ್ತಿದ್ದಾಗ ಅಲ್ಲಿಯ ಕೆಲಸದಿಂದ ಪ್ರಭಾವಿತನಾದ ಬರ್ನಾರ್ಡ್ ಪೆಡ್ಯು ಈಗ ಕ್ಯಾನ್ಸರ್ ಸಂಶೋಧನೆ ನಡೆಸುತ್ತಿದ್ದಾನೆ.

ಈಗೇನೊ ತುಂಬ ಜನಪ್ರಿಯವಾಗಿ ಕೀರ್ತಿಶಾಲಿಯಾಗಿದ್ದರೂ ಈ ಶಿಷ್ಯವೃತ್ತಿ ಪ್ರಾರಂಭವಾದಾಗ ಇದಕ್ಕೆ ಸರಿಯಾದ ಸ್ವಾಗತ ಸಿಕ್ಕಿರಲಿಲ್ಲ. ವಿದ್ಯಾರ್ಥಿಗಳ ಪಾಲಕರು ಈ ಯೋಜನೆಯನ್ನು ವಿರೋಧಿಸಿದ್ದರು. ತಮ್ಮ ಮಕ್ಕಳು ಹಣವಿಲ್ಲದೆ, ಸಂಗಡಿಗರಿಲ್ಲದೆ, ಯೋಗ್ಯ ಮೇಲ್ವಿಚಾರಕರಿಲ್ಲದೆ ಜಗತ್ಪ್ರವಾಸ ಕೈಕೊಳ್ಳುವುದು ಅವರಿಗೆ ಒಪ್ಪಿಗೆಯಾಗಲಿಲ್ಲ. ಮೊದಲನೆ ವರ್ಷ ಬರೀ ಐದು ವಿದ್ಯಾರ್ಥಿಗಳು ಮಾತ್ರ ಶಿಷ್ಯವೃತ್ತಿಯನ್ನು ಸ್ವೀಕರಿಸಿದರು. ದ್ವಿತೀಯ ಮಹಾಯುದ್ಧ ಮುಗಿದ ಬಳಿಕ ೧೯೪೫ ರಲ್ಲಿ ಜೀನ್ ವಾಲ್ಟರ್ ತನ್ನ ಸ್ಕಾಲರ್‌ಶಿಪ್ ಯೋಜನೆಯನ್ನು ಫ್ರಾನ್ಸಿನ







ಶಿಕ್ಷಣಶಾಖೆಯ ಮಂತ್ರಿಗಳೆದುರು ಇಟ್ಟ. ಫ್ರಾನ್ಸಿನ ಪುನರುತ್ಥಾನದ ಈ ಕಠಿಣಕಾಲದಲ್ಲಿ ಇದರಿಂದ ತುಂಬ ಪ್ರಯೋಜನವಾಗುವುದೆಂದು ಹೇಳಿದ. ೧೯೬೦ ರಲ್ಲಿ ಶಿಕ್ಷಣಮಂತ್ರಿಗಳಾಗಿದ್ದ ಲುಯಿಸ್ ಫ್ರಾಂಕೋಯಿಸರು ಈ ಯೋಜನೆಯಿಂದ ಪ್ರಭಾವಿತರಾಗಿ ಆಗಿನ ಶಿಕ್ಷಣಮಂತ್ರಿಗಳ ಮೇಲೆ ಒತ್ತಡ ತಂದರು. ತಿಂಗಳುಗಟ್ಟಳೆ ತಿಕ್ಕಾಟದ ನಂತರ ಈ ಯೋಜನೆಯು ಫ್ರಾನ್ಸಿನ ಶಿಕ್ಷಣಕ್ರಮದ ಅಂಗಗಳಲ್ಲೊಂದಾಯಿತು.

೧೯೪೯ ರಲ್ಲಿ ಆರು ಲಕ್ಷ ನಿಧಿಯನ್ನು ಕೂಡಿಸಿ ನ್ಯಾಶನಲ್ ಫೌಂಡೇಶನ್ ಆಫ್ ಝುಲಿಜಾ ಸ್ಕಾಲರ್‌ಶಿಪ್ಸ್ ಎಂಬ ಹೆಸರಿನಿಂದ ಈ ಶಿಷ್ಯವೃತ್ತಿಯ ಶಾಶ್ವತ ಏರ್ಪಾಟನ್ನು ವಾಲ್ಟರ್ ಮಾಡಿದ. ದಿನದಿನಕ್ಕೆ ಜನಪ್ರಿಯವಾಗುತ್ತ ನಡೆದ ಈ ಶಿಷ್ಯವೃತ್ತಿಯಿಂದ ಈಗ ಪ್ರತಿ ವರ್ಷ ೩೦೦ ಜನ ವಿದ್ಯಾರ್ಥಿಗಳು ಪ್ರಯೋಜನ ಪಡೆಯುತ್ತಿರುವರು.

ನವಂಬರ್ ತಿಂಗಳಲ್ಲಿ ಹೈಸ್ಕೂಲಿನ ಕೊನೆಯ ವರ್ಷಗಳಲ್ಲಿ ಮತ್ತು ಟೆಕ್ನಿಕಲ್ ಹಾಗೂ ಟೀಚಿಂಗ್ ಸ್ಕೂಲುಗಳಲ್ಲಿಯ ಕೊನೆಯ ಎರಡು ವರ್ಗಗಳಲ್ಲಿರುವ ವಿದ್ಯಾರ್ಥಿಗಳು ಈ ಶಿಷ್ಯವೃತ್ತಿಗೆ ಅರ್ಜಿ ಮಾಡಿಕೊಳ್ಳುತ್ತಾರೆ. ಈ ವಿದ್ಯಾರ್ಥಿಗಳಲ್ಲಿ ಪ್ರತಿಯೊಂದು ವರ್ಗಕ್ಕೆ ಇಬ್ಬರಂತೆ ಅತಿ ಯೋಗ್ಯರಾದವರನ್ನು ವಿದ್ಯಾರ್ಥಿಗಳೇ ಆರಿಸುತ್ತಾರೆ. ಇವರೂ ಜೊತೆಗೆ ಶಾಲೆಗಳ ಪ್ರಿನ್ಸಿಪಾಲರು ಶಿಫಾರಸು ಮಾಡಿದ ಇನ್ನು ಕೆಲವರೂ ವಿಶ್ವವಿದ್ಯಾಲಯಗಳ ಪ್ರೊಫೆಸರರ ಸಮಿತಿಯೊಂದರ ಪರೀಕ್ಷೆಗೊಳಗಾಗುವರು. ಅಲ್ಲಿ ಇವರಲ್ಲಿ ಸುಮಾರು ಅರ್ಧದಷ್ಟು ಹುಡುಗರನ್ನು ಫೌಂಡೇಶನ್ನಿನ ಆಯ್ಕೆ ಸಮಿತಿಯ ಎದುರು ಕಳಿಸಿಕೊಡುತ್ತಾರೆ. ಈ ಸಮಿತಿ ಇವರಲ್ಲಿ ಕೇವಲ ೩೦೦ ಜನರನ್ನಷ್ಟೆ ಆಯ್ದು ಶಿಷ್ಯವೃತ್ತಿ ಕೊಡುತ್ತದೆ. ಹಿಂದಿನ ವರ್ಷ ಈ ಶಿಷ್ಯವೃತ್ತಿ ಪಡೆದು ಅಭ್ಯಾಸ ಮುಗಿಸಿದವರಲ್ಲಿ ೫೦ ಜನರನ್ನಾರಿಸಿ ಅವರಿಗೆ ಎರಡನೆಯ ಸಲ ಅಭ್ಯಾಸ ಮಾಡಲು ಶಿಷ್ಯವೃತ್ತಿ ಕೊಡಲಾಗುತ್ತದೆ.

ವಿದ್ಯಾರ್ಥಿಗಳು ಪ್ರವಾಸ ಮುಗಿಸಿ ಬಂದನಂತರ ವರದಿಯೊಪ್ಪಿಸಬೇಕಾಗುವುದು. ವರದಿ ಸಾವಿರಾರು ಪುಟಗಳದ್ದೂ ಇರುತ್ತದೆ. ಎಷ್ಟೋ ಸಲ ಮೂರು ವಿಭಾಗಗಳಲ್ಲಿರುವ ಈ ವರದಿ ಸಚಿತ್ರವೂ ಆಗಿರುತ್ತದೆ. ಇವರ ವರದಿ ಸರಕಾರಕ್ಕೂ ಸಹಾಯವಾಗುತ್ತದೆ. ಅಮೇರಿಕದಲ್ಲಿ ವಾಹನ ಸಂಚಾರ ಎಂಬ ಬಗ್ಗೆ ಜಾರ್ಜಸ್ ಪೇರಿಂಟೆ ಬರೆದ ವರದಿಯನ್ನೀಗ ಫ್ರೆಂಚ್ ಇಂಜನಿಯರರು ಅಭ್ಯಸಿಸುತ್ತಿದ್ದಾರೆ.

ಪ್ರತಿವರ್ಷ ಈ ವರದಿಗಳನ್ನು ಒಂದು ತಿಂಗಳವರೆಗೆ ಅಕಾಡಮಿ ಫ್ರೆಂಕಾಯಿಸ್ ಲೈಬ್ರರಿಯಲ್ಲಿ ಪ್ರದರ್ಶಿಸುತ್ತಾರೆ. ಝುಲಿಜಾ ಟ್ರಸ್ಟಿಗಳು ಇವನ್ನೋದಿ ಅತಿ ಒಳ್ಳೆಯವಾದ ೫೦ಕ್ಕೆ ಬಹುಮಾನ ಕೊಡುತ್ತಾರೆ. ಮೊದಲನೆಯದು ರೂ. ೫೦೦, ಎರಡನೆಯದು ರೂ. ೪೦೦, ಮೂರನೆಯದು ರೂ. ೩೫೦ ಮತ್ತು ನಾಲ್ಕರಿಂದ ಐವತ್ತರ ವರೆಗಿನದಕ್ಕೆ ತಲಾ ರೂ. ೩೦೦ ಗಳ ಬಹುಮಾನ ಕೊಡುತ್ತಾರೆ. ಮರುವರ್ಷ ವಿದ್ಯಾರ್ಥಿಗಳು ಮತ್ತೊಮ್ಮೆ ಜೀವನಾನುಭವ ಪಡೆಯುವುದಕ್ಕಾಗಿ ಕಷ್ಟಕಾರ್ಪಣ್ಯಗಳ ಸಂಚಾರ ಕೈಕೊಳ್ಳಲು ಈ ಹಣ ಉಪಯೋಗಿಸುತ್ತಾರೆಂಬ ಎಣಿಕೆಯಿಂದಲೇ ಈ ಬಹುಮಾನಗಳು ಕೊಡಲ್ಪಡುತ್ತಿವೆ. ಈ ಎಣಿಕೆ ಇದುವರೆಗೂ ತಪ್ಪಾಗಿಲ್ಲವೆಂಬುದೇ ಇದರಲ್ಲಿನ ವಿಶೇಷ. *

---

ಸ್ಮೃತಿ ಎಂಬ ಹೆಸರಿನ ಕನ್ಯೆ ಇನ್ನೂ ಅವಿವಾಹಿತಳಾಗಿಯೇ ಉಳಿದಿದ್ದಾಳೆ. ಕೈಯಲ್ಲಿ ಪುಷ್ಪಮಾಲೆ ಹಿಡಿದು, ಅವಳು ವರ ಸಂಶೋಧನೆಯಲ್ಲಿದ್ದಾಳೆ. ಆದರೆ ಅವಳಿಗಿನ್ನೂ ಅನುರೂಪ ವರ ದೊರೆತಿಲ್ಲ. ಕಾರಣವಿಷ್ಟೇ, ನಿಜವಾದ ವಿದ್ವಾನ್ ಮನುಷ್ಯ ಅವಳಿಂದ ದೂರ ದೂರ ಓಡಿ ಹೋಗುತ್ತಾನೆ. ಹಾಗೂ ಮೂರ್ಖರನ್ನಂತೂ ಸ್ವತಃ ಅವಳೇ ದೂರವಿಡುತ್ತಾಳೆ.

—ಅನ್ಮೃತ





ಮಾನಸಶಾಸ್ತ್ರಕ್ಕೆ ದೊಡ್ಡ ಕೊಡುಗೆಯಿತ್ತ ಮಹಾಪುರುಷ

# ಶರೀರವಿಜ್ಞಾನಿ ಪೌಲೋವ್

ಪಾವೆಂ

ಬೆಕ್ಕು ಹಾಲು ನೋಡಿದೊಡನೆ ಹೆದರುವಂತೆ ಮಾಡಿದ ತೆನ್ನಾಲಿ ರಾಮನ ಕಥೆಯನ್ನು ನೀವು ಕೇಳಿರಬೇಕು. ಒಂದು ಬೆಕ್ಕಿನ ಮರಿಯ ಮುಂದೆ ಬಿಸಿ ಹಾಲನ್ನಾತ ಇಟ್ಟನಂತೆ; ಅದು ಬಾಯಿ ಹಾಕಿತು ಮತ್ತು ಸುಡಿಸಿಕೊಂಡು ಹಿಂದೆ ಜಿಗಿಯಿತು. ಅಂದಿನಿಂದ ಆ ಬೆಕ್ಕು ಹಾಲೆಂಬುದನ್ನು ನೋಡಿದರೇನೇ ಹೆದರಿ ಓಡತೊಡಗಿತಂತೆ.

ತೆನ್ನಾಲಿ ರಾಮ ಬರಿ ನಗೆಗಾರನಾಗಿದ್ದ. ಹಾಗಿಲ್ಲದೆ ಆತ ವಿಜ್ಞಾನಿಯಾಗಿದ್ದರೆ ಮತ್ತು ತನ್ನ ಈ 'ಪ್ರಯೋಗ'ವನ್ನು ವ್ಯವಸ್ಥಿತವಾಗಿ ಮಾಡಿದ್ದರೆ [illegible]ವನು ರಶಿಯದ ಶರೀರ ವಿಜ್ಞಾನಿ ಪೌಲೋವನನ್ನು ಐದು ಶತಮಾನಗಳಿಂದ ಹಿಂದೆ ಹಾಕ[illegible]ದಾಗಿತ್ತು. ಪೌಲೋವನು ಈ ತತ್ವವನ್ನೇ ವಿಶದವಾಗಿ ಸಂಶೋಧಿಸಿ ಜಗತ್ಪ್ರಸಿದ್ಧನಾದ ಮತ್ತು ಜಗತ್ತಿನ ಮನೋಭೂಮಿಕೆಯ ಮೇಲೆ ಕ್ರಾಂತಿಕಾರಿ ಪ್ರಭಾವವನ್ನು ಬೀರಿದ.

ಪೌಲೋವನು ಬೆಕ್ಕಿಗೆ ಹಾಲಿನ ಹೆದರಿಕೆ ಹುಟ್ಟುವಂತೆ ಮಾಡಲಿಲ್ಲ ನಿಜ; ಆದರೆ ಆತ ಗಂಟೆ ಬಾರಿಸಿ ಅಥವಾ ಸಿಟೀಲಿನಲ್ಲಿ ಒಂದು ಸ್ವರ ನುಡಿಸಿ ತನ್ನ ನಾಯಿಯ ಬಾಯಲ್ಲಿ ನೀರೂರುವಂತೆ ಮಾಡಬಲ್ಲವನಾಗಿದ್ದ; ಎರಡು ಬೆಳಕಿನ ವರ್ತುಲಗಳನ್ನು ತೋರಿಸಿ ನಾಯಿಗೆ ತಾತ್ಕಾಲಿಕವಾಗಿ ಹುಚ್ಚು ಹಿಡಿಯುವಂತೆ ಕೂಡ ಮಾಡಬಲ್ಲವನಾಗಿದ್ದ; ಮತ್ತು ಈ ವಿಚಿತ್ರಗಳಿಂದ ಪ್ರಾಣಿ—ಮತ್ತು ಮಾನವ—ವರ್ತನೆಯ ಒಂದು ಗಹನವಾದ ರಹಸ್ಯವನ್ನು ಭೇದಿಸಿ

ತೋರಿಸಿದ. ಅವನ ಸಂಶೋಧನೆಗಳು ಪ್ರಾಣಿಗಳ ಮತ್ತು ಪರ್ಯಾಯವಾಗಿ ಮಾನವರ ಕಲಿಯುವಿಕೆಯ ಮೇಲೆ ಬೆಳಕು ಚೆಲ್ಲಿದವು. ನಾವು— ಪ್ರಾಣಿಗಳು ಕೂಡ— ಕಲಿಯುವುದನ್ನೆಲ್ಲ ಇಚ್ಛಾಪೂರ್ವಕವಾಗಿ ಕಲಿಯುವುದಿಲ್ಲ; ಎಷ್ಟೋ ಅಂಶವನ್ನು ನಾವು ನಮಗರಿಯದೆಯೆ ಕಲಿಯುತ್ತೇವೆ; ಹಾಗೆಯೆ ನಮ್ಮ ಚರ್ಯೆಯಲ್ಲಿ ಒಂದು ದೊಡ್ಡ ಭಾಗವು ನಾವು ಮನವಿಟ್ಟು ಇಚ್ಛಿಸದೆಯೆ ನಡೆಯುತ್ತದೆ ಎಂದಾತ ತೋರಿಸಿಕೊಟ್ಟ. ಈ ಅನಿಚ್ಛಾಕ್ರಿಯೆಯನ್ನು ಆತ "ಕಂಡೀಶನ್ಡ್ ರಿಫ್ಲೆಕ್ಸ್" ಎಂದು ಕರೆದ. ಈ ಶಬ್ದ ಇಂದು ಶರೀರಶಾಸ್ತ್ರ ಹಾಗು ಮನಃಶಾಸ್ತ್ರದಲ್ಲಿ ದಿನಬಳಕೆಯ ಮಾತಾಗಿಬಿಟ್ಟಿದೆ.

ಐವಾನ್ ಪೆಟ್ರೊವಿಚ್ ಪೌಲೋವನು ಮಧ್ಯ ರಶಿಯದ ರಯಾಝಾನ್ ಎಂಬ ಹಳ್ಳಿಯ ಬಡ ಪಾದ್ರಿಯ ಮಗನಾಗಿದ್ದ. ತಂದೆ ಧಾರ್ಮಿಕ ಗುರುವಾಗಿದ್ದರೂ ಜೀವನಕ್ಕಾಗಿ ಇತರ ಹಳ್ಳಿಗರಂತೆ ಹೊಲದಲ್ಲಿ ದುಡಿಯಬೇಕಾಗಿತ್ತು. ಇಂಥ ಕುಟುಂಬದಲ್ಲಿ ಹನ್ನೊಂದು ಮಕ್ಕಳಲ್ಲೊಬ್ಬನಾಗಿ ಹುಟ್ಟಿದ ಐವಾನ್ ಜಗತ್ತಿನ ಶ್ರೇಷ್ಠ ವಿಜ್ಞಾನಿಗಳಲ್ಲೊಬ್ಬನಾಗುವನೆಂದು ಊಹಿಸಲಿಡೆಯಿರಲಿಲ್ಲ. ಒಂದು ಧಾರ್ಮಿಕ ಶಾಲೆಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸಕ್ಕಾಗಿ ಅವನು ಸೇರಿದ. ಕಂಡಕಂಡ ಪುಸ್ತಕವನ್ನೆಲ್ಲ ಓದಿ ಹಾಕುತ್ತಿರುವ ಈ ಹುಡುಗನ ಜ್ಞಾನಪಿಪಾಸೆಯನ್ನೂ ಅವನ ಸೂಕ್ಷ್ಮ ಸತರ್ಕ ಮತಿಯನ್ನೂ ಗುರುತಿಸಿ ಅವನನ್ನು ವಿಜ್ಞಾನದ ದಾರಿ ಹಿಡಿಯಲು ಪ್ರೋತ್ಸಾಹಿಸಿದವನು ಆ ಧಾರ್ಮಿಕ ಪಾಠಶಾಲೆಯ ನೇತೃವಾಗಿದ್ದ ಸಂನ್ಯಾಸಿ.

ಬಡತನವಿದ್ದರೂ ಹೇಗೋ ಮಾಡಿ ಪೌಲೋವ್ ಸೆಂಟ್ ಪೀಟರ್ಸ್‌ಬರ್ಗಿನ (ಈಗ ಲೆನಿನ್‌ಗ್ರಾಡ್) ವಿಶ್ವವಿದ್ಯಾಲಯದ ವಿಜ್ಞಾನ ಪಾಠಶಾಲೆ ಸೇರಿದ. ಅಲ್ಲಿ ನಮ್ಮ ಶಾರೀರಿಕ ವ್ಯಾಪಾರಗಳಿಗೂ ಮಾನಸಿಕ ವ್ಯಾಪಾರಗಳಿಗೂ ಇರುವ ಸಂಬಂಧವನ್ನು ಕುರಿತು ಒಂದು ಪುಸ್ತಕವನ್ನೋದಿದ ಪೌಲೋವನಿಗೆ ತಾನು ಡಾಕ್ಟರನಾಗಬೇಕೆಂಬ ಹಂಬಲ ಹತ್ತಿತು. ೧೮೮೩ ರಲ್ಲಿ ಅವನಿಗೆ ಡಾಕ್ಟರ ಪದವಿ ದೊರೆತಾಗ ಆಗಲೇ ೩೪ ವರ್ಷವಾಗಿ ಹೋಗಿತ್ತು.

ಪೌಲೋವನಿಗೆ ಡಾಕ್ಟರನಾಗಿ ವ್ಯವಸಾಯ ಪ್ರಾರಂಭ ಮಾಡುವ ಉದ್ದೇಶವಿರಲಿಲ್ಲ. ಪೀಟರ್ಸ್‌ಬರ್ಗಿನ ಮಿಲಿಟರಿ ವೈದ್ಯಕೀಯ ವಿದ್ಯಾಲಯದಲ್ಲಿ ಲೆಕ್ಚರರ್ ಪದವಿಯನ್ನು ಸ್ವೀಕರಿಸಿ ಹೆಚ್ಚಿನ ಅಭ್ಯಾಸಕ್ಕಾಗಿ ಜರ್ಮನಿಗೆ ಹೋದ ಅವನಿಗೆ ಆ ಕಾಲದ ಶ್ರೇಷ್ಠತಮ ಶರೀರ ವಿಜ್ಞಾನಿಗಳಲ್ಲೊಬ್ಬನಾಗಿದ್ದ ಹೈಡೆನ್‌ಹೈನ್ ಗುರುವಾಗಿ ದೊರೆತ.

ರಶಿಯಕ್ಕೆ ಮರಳಿದ ಆತ ಪೀಟರ್ಸ್‌ಬರ್ಗಿನಲ್ಲಿ ತನ್ನದೇ ಒಂದು ಪ್ರಯೋಗಶಾಲೆಯನ್ನು ಸ್ಥಾಪಿಸಿದ. ಯೋಗ್ಯ ಸಲಕರಣೆಗಳನ್ನು ಕೊಳ್ಳಲು ಹಣವಿಲ್ಲದ್ದರಿಂದ ಅವನು ಬಹಳ ಕಷ್ಟಪಡಬೇಕಾಯಿತು. ತನ್ನ ಅಲ್ಪ ಸಂಬಳದಲ್ಲಿ ಸಹಾಯಕರನ್ನು ನೇಮಿಸಿಕೊಳ್ಳಲು ಸಾಧ್ಯವಿಲ್ಲದ್ದರಿಂದ ತಾನೇ ಶ್ರಮಿಸಬೇಕಾಗಿತ್ತು. ತನ್ನ ಜರ್ಮನ್ ಗುರುವಿನಂತೆ ಪ್ರಾಣಿಶರೀರದ ವರ್ತನೆಯನ್ನು ಅಭ್ಯಸಿಸಲು ಪೌಲೋವ್ ನಾಯಿಗಳನ್ನು ಪ್ರಯೋಗಿಸುತ್ತಿದ್ದ. ಕೆಲವೇಳೆ ಅವಶ್ಯವಿದ್ದ ನಾಯಿಗಳನ್ನು ಕೊಳ್ಳಲಿಕ್ಕೂ ಹಣವಿಲ್ಲದೆ ಆತ ಒದ್ದಾಡಬೇಕಾಗುತ್ತಿತ್ತು. ಆದರೆ ಹಳ್ಳಿಯಲ್ಲಿ ದುಡಿದು ಉಕ್ಕಿನಂಥ ದೇಹ ಪ್ರಕೃತಿಯನ್ನು ಸಂಪಾದಿಸಿದವನಾದುದರಿಂದ ಎಂಥ ಶ್ರಮವನ್ನೂ ಸೈರಿಸಿಕೊಂಡು ತನ್ನ ಗುರಿಯತ್ತ ಸಾಗಿದ.

೧೮೯೦ ರಲ್ಲಿ ನಲುವತ್ತೊಂದರಲ್ಲಿ ಅವನನ್ನು ಮಿಲಿಟರಿ ವಿದ್ಯಾಲಯವು ಪ್ರೊಫೆಸರ್ ಪದವಿಗೇರಿಸಿ ಸುಸಜ್ಜಿತವಾದ ಪ್ರಯೋಗ ಶಾಲೆಯನ್ನು ಒದಗಿಸಿಕೊಟ್ಟಿತು. ಪೌಲೋವನ ಪ್ರಥಮ ಸಂಶೋಧನೆಗಳು ಆಹಾರ ಪಚನ ಕ್ರಿಯೆಗೆ ಸಂಬಂಧಿಸಿದವಾಗಿದ್ದವು. ಪಚನಾಂಗಗಳಲ್ಲಿ ಪಾಚಕರಸಗಳು ಹೇಗೆ ಉತ್ಪತ್ತಿಯಾಗುತ್ತವೆ? ಆಗಿನ ಶರೀರ ವಿಜ್ಞಾನಿಗಳು ಆಹಾರದ ಯಾಂ-

ತ್ರಿಕ ಸಂಪರ್ಕದಿಂದ ಜಠರದಲ್ಲಿ ಪಾಚಕ ರಸಗಳು ಜಿನುಗತೊಡಗುತ್ತವೆಂದು ಭಾವಿಸಿದ್ದರು. ಆದರೆ ಇದು ಸರಿಯೆ? ಆಹಾರದ ವಾಸನೆ ಕೇಳಿಯೆ ಬಾಯಲ್ಲಿ ನೀರೊಸರುವುದನ್ನು ಬಲ್ಲ ಪಾವ್ಲೋವನಿಗೆ ಈ ಸಿದ್ಧಾಂತದಲ್ಲಿ ಕೊರತೆಯಿದೆಯೆನಿಸಿತು. ಅವನು ಸಜೀವ ನಾಯಿಯ ಹೊಟ್ಟೆಯನ್ನು ಕೌಶಲದಿಂದ ಸೀಳಿ ಜಠರದಲ್ಲೊಂದು ಪ್ರತ್ಯೇಕ ಮಾಡವನ್ನು ರಚಿಸಿ ಅಲ್ಲಿ ನಡೆಯುವ ವ್ಯಾಪಾರವನ್ನು ಹೊರಗಿಂದ ನಿರೀಕ್ಷಿಸತೊಡಗಿದ.

ಆತ ಕಂಡದ್ದು ಅರ್ಥಪೂರ್ಣವಾಗಿತ್ತು. ಆಹಾರದ ವಾಸನೆ ಬಂದೊಡನೆ ನಾಯಿಯ ಬಾಯಲ್ಲಿ ನೀರೂರುವುದಷ್ಟೇ ಅಲ್ಲ, ಜಠರದಲ್ಲಿಯೂ ರಸವೊಸರುತ್ತದೆ. ನಾಯಿಗೆ ಆಹಾರ ಕೊಟ್ಟೊಡನೆ ಅದು ಜಠರವನ್ನು ತಲುಪದಂತೆ ನೋಡಿಕೊಂಡರೂ ಜಠರದಲ್ಲಿ ಪಾಚಕ ರಸಗಳು ಭರದಿಂದ ಜಿನುಗತೊಡಗುತ್ತವೆ. ಹಾಗಾದರೆ ಸ್ಪರ್ಶದಿಂದ ಪಾಚಕ ರಸಗಳಿಗೆ ಪ್ರೇರಣೆ ದೊರೆಯುವುದಿಲ್ಲ. ಇದು ಜ್ಞಾನತಂತುಗಳ (ನರಗಳ) ಕೆಲಸವಿರಬೇಕು. ಅವನ ಊಹೆ ಸರಿಯಾಗಿತ್ತು. ಯಾವ ನರವು ಪಾಚಕ ರಸಗಳನ್ನು ನಿಯಂತ್ರಿಸುತ್ತದೆಂದೂ ಅವನು ಗೊತ್ತುಹಚ್ಚಿದ. ಅದು "ವೇಗಸ್" ನರ.

ಈ ಸಂಶೋಧನೆಗಳಿಗಾಗಿ ಪಾವ್ಲೋವನಿಗೆ ೧೯೦೪ ರಲ್ಲಿ ನೋಬೆಲ್ ಬಹುಮಾನವೂ ಜಗದ್ವ್ಯಾಪಿ ಕೀರ್ತಿಯೂ ಬಂತು. ಆದರೆ ಪಾವ್ಲೋವನ ಹೆಸರು ಇಂದು ನಿಂತಿರುವುದು ಈ ಸಂಶೋಧನೆಗಳ ಆಧಾರದ ಮೇಲಲ್ಲ. ಆ ಸಂಶೋಧನೆಗಳು ಇನ್ನೂ ಹೆಚ್ಚು ಸ್ವಾರಸ್ಯವಾಗಿವೆ ; ಅವುಗಳ ಪರಿಣಾಮ ಇನ್ನೂ ಮಹತ್ತೂ ಭೀಕರವೂ ಆಗಿದೆ.

ಈ ಕಲ್ಪನೆ ಅವನಿಗೆ ಹೊಳೆದದ್ದು ಆಕಸ್ಮಿಕವಾಗಿ ಎನ್ನುತ್ತಾರೆ. ಆತ ತನ್ನ ಪ್ರಯೋಗಗಳಿಗಾಗಿ ಅನೇಕ ನಾಯಿಗಳನ್ನಿಟ್ಟುಕೊಂಡಿದ್ದ. ಒಂದು ದಿನ ಪ್ರಯೋಗ ಶಾಲೆಯ ವರಾಂಡದಲ್ಲಿದ್ದ ಒಂದು ನಾಯಿಯ ಬಾಯಲ್ಲಿ ಅಕಾರಣವಾಗಿ ನೀರೊಸರುವುದನ್ನಾತ ಕಂಡು ಹೀಗೇಕೆಂದು ಯೋಚನೆಗೆ ಬಿದ್ದ. ಬಹಳ ಪರಿಶೀಲಿಸಿದ ಮೇಲೆ ಈ ನಾಯಿಗೆ ಯಾವಾಗಲೂ ಆಹಾರ ಕೊಡುತ್ತಿದ್ದ ಸೇವಕನ ವಿಶಿಷ್ಟ ಕಾಲ ಸಪ್ಪಳವೇ ಇದಕ್ಕೆ ಕಾರಣವೆಂಬ ತರ್ಕ ಅನಿವಾರ್ಯವಾಯಿತು. ಹಾಗಾದರೆ ಅನ್ನ ಕೊಡುವವನ ಕಾಲ ಸಪ್ಪಳವೇ ಈ ನಾಯಿಗೆ ಅನ್ನದ ಪ್ರತೀಕವಾಯಿತೆ?

ಈ ಊಹೆ ಅನೇಕ ವರ್ಷವ್ಯಾಪಿಯಾದ ಅಸಂಖ್ಯ ಪ್ರಯೋಗಗಳಿಗೆ ಪ್ರೇರಣೆ ಕೊಟ್ಟಿತು. ಪಾವ್ಲೋವನು ಈ ರಹಸ್ಯದ ಮೂಲ ಶೋಧನೆಗಾಗಿ ಮೂವತ್ತು ಸುದೀರ್ಘ ಪ್ರಯೋಗಗಳನ್ನು ಮಾಡಿದನು. ಅವೆಲ್ಲವೂ ನಿರರ್ಥಕವಾದವು. ಕೊನೆಗೆ ಮೂವತ್ತೊಂದನೇ ಪ್ರಯೋಗ ಯಶಸ್ವಿಯಾದಾಗ ಆತ ಸಂತೋಷಾತಿರೇಕದಿಂದ ಹೆಂಡತಿಯ ಕೈಹಿಡಿದು ಕುಣಿದಾಡಿದನಂತೆ!

ಈ ಪ್ರಯೋಗವೇ ಆತನ ಪ್ರಸಿದ್ಧ ಗಂಟೆ ಪ್ರಯೋಗ. ಹಸಿದ ನಾಯಿಗೆ ಆಹಾರ ಕೊಡುವಾಗ ಪ್ರತಿ ಸಲವೂ ಆತ ಒಂದು ಗಂಟೆ ಬಾರಿಸಿದ. ಕೆಲವು ಸಲ ಹೀಗೆ ನಡೆಸಿದ ಬಳಿಕ ಆಹಾರ ತಾರದೆ ಒಮ್ಮೆ ಬರಿ ಗಂಟೆಯನ್ನಷ್ಟೇ ಬಾರಿಸಿ ನೋಡಿದ. ತಕೋ! ಆಹಾರವನ್ನು ಕಂಡ ಹಾಗೆಯೆ ನಾಯಿಯ ಬಾಯಲ್ಲಿ ನೀರೂರಿತು!

ನಮ್ಮ ಪಚನಕ್ರಿಯೆಯಲ್ಲಿ "ರಿಫ್ಲೆಕ್ಸ್" ಕ್ರಿಯೆಯ ಪಾತ್ರ ದೊಡ್ಡದಿದೆ ಎಂದಾತ ಮೊದಲೇ ಕಂಡುಹಿಡಿದಿದ್ದ. ರಿಫ್ಲೆಕ್ಸ್ ಎಂದರೆ ಸ್ವಯಂಪ್ರೇರಿತ ಕ್ರಿಯೆ. ಅದರಲ್ಲಿ ನಮ್ಮ ಮಿದುಳು ನೇರವಾಗಿ ಭಾಗ ವಹಿಸುವುದಿಲ್ಲ. ದೊಡ್ಡ ಸದ್ದು ಕೇಳಿದಾಗ ಬೆಚ್ಚಿ ಬೀಳುವುದು, ಬಿಸಿ ತಗುಲಿದಾಗ ಸರ್ರನೆ ಕೈ ಹಿಂದೆಳೆಯುವುದು, ಮೂಗಿನಲ್ಲಿ ಧೂಳು ಹೊಕ್ಕಾಗ ಶೀನುವುದು— ಇವೆಲ್ಲ ರಿಫ್ಲೆಕ್ಸ್ ಕ್ರಿಯೆಗಳು. ಈ ಕೆಲಸಗಳಿಗಾಗಿ ನೇರವಾಗಿ ಮಿದುಳಿಂದ ಆಜ್ಞೆ ಬರುವುದಿಲ್ಲ, ಇದು ಕಲಿತು ಬರುವುದೂ ಅಲ್ಲ. ಹಸುಗೂಸೂ ಹೀಗೆ

## ನಿಮ್ಮ ಬಂಗಲೆಯಲ್ಲಿ ಈ ಆಧುನಿಕ ನೀರಿನ ಪೂರೈಕೆ ಪದ್ಧತಿ ಕೂಡಿಸಿರಿ

# Myers or Wasp

ಮೇಯರ್ಸ್ ಅಥವಾ ವಾಸ್ಪ್ ಆಟೋಮೆಟಿಕ್ ಇಲೆಕ್ಟ್ರಿಕ್
ಪಂಪುಗಳು ಓವ್ಹರ್ ಹೆಡ್ ಟ್ಯಾಂಕ್ ಬೇಕಿಲ್ಲ

ಮಾರಾಟ ಬಿಡಿಭಾಗಗಳು
ತಜ್ಞ ಸೇವೆ ಸೌಕರ್ಯ

ವಾಟರಸಪ್ಲೈಸ್ಪೆಶಾಲಿಸ್ಟ
ಪ್ರಾ. ಲಿ.
೩೩೦ ಥಂಬೂಚೆಟ್ಟಿಸ್ಟ್ರೀಟ
ಮದ್ರಾಸ—೧

ಪ್ರತಿಯೊಂದು ಉದ್ದೇ-
ಶಕ್ಕೂ ಬೇಕಾಗುವ
ಪಂಪುಗಳು.



ಮಾಡುತ್ತದೆ. ಅದು ಪ್ರಾಣಿಯ ರಕ್ಷಣೆಗಾಗಿ ನಿಸರ್ಗವಿತ್ತ ಶಕ್ತಿ.

ಆದರೆ ಗಂಟೆ ಪ್ರಯೋಗದಿಂದ ಈ ರಿಫ್ಲೆಕ್ಸ್‌ಗಳು ಕೂಡ ಅಭ್ಯಾಸದಿಂದ ಆಗಬಲ್ಲವೆಂದು ಸಿದ್ಧವಾಯಿತು. ಮೊದಲು ಆಹಾರದ ರೂಪಕ್ಕೂ ಗಂಧಕ್ಕೂ ಆಹಾರಕ್ಕೂ ಇರುವ ಸಂಬಂಧವನ್ನು ಗ್ರಹಿಸಿಕೊಂಡ ನಾಯಿಯ ನರಗಳು ಆಹಾರವನ್ನು ಕಂಡೊಡನೆ ಅಥವಾ ಅದರ ವಾಸನೆಯನ್ನು ಹೊಂದಿದೊಡನೆ ತಾವಾಗಿ ರಸಪೂರಿಸಲಾರಂಭಿಸುತ್ತವೆ. ರೂಪ ಗಂಧಗಳು ಅದಕ್ಕೆ "ಪ್ರಚೋದಕ" ವಾಗುತ್ತವೆ. ಆದರೆ ಆಹಾರ ಕೊಡುವಾಗ ಗಂಟೆ ಬಾರಿಸಿದರೆ ಆ ಸಪ್ಪಳಕ್ಕೂ ಆಹಾರಕ್ಕೂ ಸಂಬಂಧ ಕಲ್ಪಿಸುವ ಅಭ್ಯಾಸವಾಗಿ ಸಪ್ಪಳ ಕೇಳಿದೊಡನೆ ಆಹಾರದ ಸುಳಿವಿಲ್ಲದಿದ್ದರೂ ಬಾಯಿಯಲ್ಲಿ ನೀರಿಳಿಸುವ ರಿಫ್ಲೆಕ್ಸ್ ಕಾರ್ಯ ಮಾಡಲು ಪ್ರಚೋದನೆ ಪಡೆಯಬಲ್ಲದು.

ಪಾವಲೋವನು ತನ್ನೀ ಪ್ರಯೋಗವನ್ನು ಸೋಜಿಗ ಮತ್ತು ವೈವಿಧ್ಯಪೂರ್ಣ ರೀತಿಯಲ್ಲಿ ಮುಂದುವರಿಸಿದನು. ಆಹಾರ ಕೊಡುವಾಗ ಪಿಟೀಲನ್ನು ಬಾರಿಸಿ ಅವನು ಮುಂದೆ ಪಿಟೀಲು ಬಾರಿಸಿದಾಗೆಲ್ಲ ನಾಯಿಯ ಬಾಯಲ್ಲಿ ನೀರೂರುವಂತೆ ಮಾಡಿದನು. ಅನಂತರ ಪಿಟೀಲಿನಲ್ಲಿ ಒಂದು ವಿಶಿಷ್ಟ ಸ್ವರ (ಉದಾ. ಮಧ್ಯಮ ಸ್ಥಾಯಿಯ ರಿ) ಬಾರಿಸಿದಾಗ ಮಾತ್ರ ನಾಯಿಯ ಬಾಯಲ್ಲಿ ನೀರೂರುವಂತೆ ಮಾಡಲು ಅವನಿಗೆ ಸಾಧ್ಯವಾಯಿತು. ಇದಕ್ಕಾಗಿ ಅವನು "ರಿ" ಬಾರಿಸಿದಾಗೆಲ್ಲ ಆಹಾರ ಕೊಡುವುದು, "ಗ" ಬಾರಿಸಿದಾಗ ಕೊಡದಿರುವುದು— ಈ ಉಪಾಯವನ್ನು ಉಪಯೋಗಿಸಿದನು. ಕೊನೆಗೆ ಅವನ ನಾಯಿಯ ರಿಫ್ಲೆಕ್ಸ್ ಕ್ರಿಯೆ ಎಷ್ಟು ಸೂಕ್ಷ್ಮಗ್ರಾಹಿಯಾಯಿತೆಂದರೆ ಅದು $ರಿ_1$ ಮತ್ತು $ರಿ_2$ ರ ಸೂಕ್ಷ್ಮ ಅಂತರವನ್ನು ಕೂಡ ಗುರುತಿಸಿ ಒಂದನ್ನು ಕೇಳಿದಾಗಷ್ಟೇ ಜೊಲ್ಲಿಳಿಸುವ ಪ್ರತಿಕ್ರಿಯೆಯನ್ನು ತೋರಿಸತೊಡಗಿತು. ಇದೇ ಪ್ರಕಾರ ಬೆಳಕಿನ ಒಂದು ವರ್ತುಲವನ್ನು ಕಂಡೊಡನೆ ನಾಯಿಯ ಬಾಯಲ್ಲಿ ನೀರೂರುವಂತೆ ಪ್ರಯೋಗವನ್ನೂ ಮಾಡಿದನು. ಅಷ್ಟೇ ಏಕೆ, ವಿಶಿಷ್ಟ ಬಗೆಯ ನೋವನ್ನುಂಟು ಮಾಡಿದಾಗೆಲ್ಲ ಆಹಾರ ಕಂಡಂತೆ ನಾಯಿ ಪ್ರತಿಕ್ರಿಯೆ ತೋರಿಸುವಂತೆ ಕೂಡ ಮಾಡಿ ತೋರಿಸಿದನಾತ.

ಪಾವಲೋವನು ಈ ಬಗೆಯ ಪ್ರತಿಕ್ರಿಯೆಗೆ "ಕಂಡೀಶನ್ಡ್ ರಿಫ್ಲೆಕ್ಸ್" ಎಂದು ಹೆಸರಿಟ್ಟನು. ಅಂದರೆ ಅಭ್ಯಾಸಬಲದಿಂದ ಜರಗುವ ಅವಿಚಾರಿತ ಪ್ರತಿಕ್ರಿಯೆ. ಗಂಟೆ ಬಾರಿಸಿತು, ಅಥವಾ ಪಿಟೀಲು ನುಡಿಯಿತು, ಅಥವಾ ಬೆಳಕಿನ ವರ್ತುಲ ಕಾಣಿಸಿತು; ಇನ್ನು ಆಹಾರ ದೊರಕುತ್ತದೆ, ಬಾಯಲ್ಲಿ ನೀರಿಳಿಸುವಾ ಎಂದು ಯೋಚಿಸಿ ನಾಯಿ ಬಾಯಲ್ಲಿ ನೀರು ಸುರಿಸುವುದಿಲ್ಲ. ಅದು ಅಭ್ಯಾಸಬಲದಿಂದ ತಾನಾಗಿ ಆಗುತ್ತದೆ. ಸ್ವಲ್ಪ ವಿಚಾರಿಸಿದರೆ ನಮ್ಮ ಎಷ್ಟೋ ಕೆಲಸಗಳೂ ಪ್ರತಿಕ್ರಿಯೆಗಳೂ ಹೀಗೆ ಅವಿಚಾರಿತವಾಗಿಯೇ ಜರಗುತ್ತವೆಂದು ಗೊತ್ತಾಗದಿರದು.

ಉದಾಹರಣೆಗೆ ನಾನು ನೊಣ ಬಂದು ಮೈಮೇಲೆ ಕುಳಿತಾಗ ಝಾಡಿಸುವುದರಿಂದ ಅದು ಹಾರಿ ಹೋಗುತ್ತದೆಂದು ಅನುಭವದಿಂದ ಕಲಿತಿದ್ದೇನೆ. ಈಗ ನಾನು ಬಲಗೈಯಿಂದ ಬರೆಯುತಿದ್ದೇನೆ. ಒಂದು ನೊಣ ನನ್ನ ಮೂಗಿನ ಮೇಲೆ ಕೂಡ್ರುತ್ತಿದೆ. ನಾನು ಬರೆಯುವುದನ್ನು ನಿಲ್ಲಿಸದೆ ಅದನ್ನು ಝಾಡಿಸುತ್ತೇನೆ. ನನ್ನ ಮಿದುಳು ನಾನು ಬರೆಯುವ ವಿಷಯದ ಮೇಲೆಯೆ ಕೇಂದ್ರಿತವಾಗಿದೆಯಲ್ಲದೆ ನೊಣವನ್ನು ಗಮನಿಸಿಲ್ಲ. ಆದರೆ ನನ್ನ ನರಗಳು ಮೂಗಿನ ಮೇಲೆ ಕೂತ ನೊಣದ ಸಮಾಚಾರವನ್ನು ಮಿದುಳಿನ ಕಡೆ ಒಯ್ಯುತ್ತಿರುವಾಗ ನಡುವೆ ಇರುವ ನರ ಕೇಂದ್ರವು ಅದನ್ನು ಗ್ರಹಿಸಿ ತಾನೇ ಇದಕ್ಕೆ ಪ್ರತೀಕಾರೋಪಾಯವನ್ನು ಯೋಚಿಸಿತು. ಸಾಹೇಬರು ಮೀಟಿಂಗಿನಲ್ಲಿದ್ದಾಗ ಯಾವ ಸಂದರ್ಶಕರನ್ನೂ ಕಾಣುವುದಿಲ್ಲೆಂದು ಅನುಭವದಿಂದ ಅರಿತ ಕಾವಲುಗಾರ ಸಾಹೇಬರನ್ನು ಕೇಳದೆನೆ "ಸಾಹೇಬರು ಈಗ

ಯಾರನ್ನೂ ಕಾಣುವುದಿಲ್ಲ" ಎಂದು ಸಂದರ್ಶಕರಿಗೆ ಹೇಳುವುದಿಲ್ಲವೇ, ಹಾಗೆ. ಸಾಹೇಬರಿಗೆ ಹೀಗೆ ಹೇಳಿದ್ದು ಗೊತ್ತು ಕೂಡ ಆಗುವುದಿಲ್ಲ!

ಪ್ರಾಣಿಗಳ ಕಲಿಯುವಿಕೆ ಅಭ್ಯಾಸಗಳನ್ನು ಅರ್ಥಮಾಡಿಕೊಳ್ಳಲು ನೆರವಾದ ಈ ಸಂಶೋಧನೆಗಳ ಫಲಿತಾಂಶ ಪ್ರಕಟವಾದೊಡನೆ ಚಕಿತವಾದ ವಿಜ್ಞಾನ ಪ್ರಪಂಚ ಪೌಲೋವನ ಮೇಲೆ ಗೌರವದ ಸುರಿಮಳೆಗರೆಯಿತು. ಬ್ರಿಟಿಶ್ ರಾಯಲ್ ಸೊಸೈಟಿ ಅವನಿಗೆ ಸದಸ್ಯತ್ವ ದಯಪಾಲಿಸಿತು. ೧೯೨೮ ರಲ್ಲಿ ಅವನಿಗೆ ಲಂಡನ್ನಿನ ರಾಯಲ್ ಕಾಲೇಜ್ ಆಫ್ ಫಿಜೀಶಿಯನ್ಸಿನ ಗೌರವ ಸದಸ್ಯತ್ವ ಸಕ್ಕಿತು.

ಪೌಲೋವನು ಮರಣ ಪರ್ಯಂತವೂ ತನ್ನ ವೈಜ್ಞಾನಿಕ ಸಂಶೋಧನೆಗಳನ್ನು ಮುಂದೆ ಸಾಗಿಸಿದನು. ಅವನ ಇಬ್ಬರ ಮಕ್ಕಳು ಸತ್ತರೂ ಪಿತ್ತಾಶ್ಮರಿಗಾಗಿ ಅವನಿಗೆ ಶಸ್ತ್ರಕ್ರಿಯೆ ಮಾಡಬೇಕಾಗಿ ಬಂದರೂ ಅವನ ಉತ್ಸಾಹ ಇಂಗಲಿಲ್ಲ. ೧೯೧೭ ರಲ್ಲಿ ರಶಿಯದಲ್ಲಿ ಕ್ರಾಂತಿಯಾಗಿ ಅನೇಕ ವಿಜ್ಞಾನಿಗಳು ದೇಶಾಂತರ ಹೋದರೂ ಪೌಲೋವ್ ಮಾತ್ರ "ಮಾತೆ ರಶಿಯ"ವನ್ನು ತೊರೆಯಲೊಪ್ಪಲಿಲ್ಲ. ಕಮ್ಯುನಿಸ್ಟರು ಕೂಡ ಆತ ಕಮ್ಯುನಿಜಂಗೆ ತಲೆವಾಗಲೊಪ್ಪದಿದ್ದರೂ ಅವನಿಗೆ ದೊಡ್ಡದೊಂದು ಸಂಶೋಧನಾಲಯವನ್ನು ಕಟ್ಟಿಕೊಟ್ಟು ಅಗಾಧವಾದ ಗೌರವ ತೋರಿಸಿದರು.

ಪೌಲೋವನ ಕೊನೆಯ ವರ್ಷಗಳ ಸಂಶೋಧನೆ ಶರೀರ ಶಾಸ್ತ್ರದಿಂದ ಮನಶ್ಶಾಸ್ತ್ರದ ಕಡೆ ಹೊರಳಿತು. ಪ್ರಾಣಿಗಳು ಅಭ್ಯಾಸಬಲದಿಂದ ಪ್ರತಿಕ್ರಿಯೆ ತೋರಿಸುವಂತೆ ಮಾಡಬಹುದಾದರೆ ಅಭ್ಯಾಸವನ್ನು ಅಳಿಸಲು ಕೂಡ ಸಾಧ್ಯವೇ? ಗಂಟೆ ಬಾರಿಸಿದೊಡನೆ ಜೊಲ್ಲು ಸುರಿಸುವ ನಾಯಿಗೆ, ನಾಲ್ಕಾರು ಸಲ ಗಂಟೆ ಬಾರಿಸಿ ಆಹಾರ ಕೊಡಲು ತಪ್ಪಿದರೆ, ಅದು ಆ ಮೇಲೆ ಗಂಟೆಯ ಸಪ್ಪಳಕ್ಕೆ ಹೀಗೆ ಪ್ರತಿಕ್ರಿಯೆ ತೋರಿಸುವುದಿಲ್ಲ. ಇದರಿಂದ ಅವಿಚಾರಿತ ಪ್ರತಿಕ್ರಿಯೆಯನ್ನು ಕಲಿಸಬಹುದಾದಂತೆ ಅಳಿಸಲೂಬಹುದೆಂದು ಸ್ಪಷ್ಟವಾಯಿತು.

ಇನ್ನೊಂದು ಸಂಶೋಧನೆಯಲ್ಲಿ ಪೌಲೋವನು ನಾಯಿಗೆ ವರ್ತುಲಾಕಾರದ ಬೆಳಕು ತೋರಿಸಿದಾಗ ಆಹಾರ ಕೊಡುವುದು, ದೀರ್ಘವರ್ತುಲ ಬೆಳಕು ತೋರಿಸಿದಾಗ ಏನೂ ಕೊಡದಿರುವುದು—ಹೀಗೆ ಮಾಡಿದನು. ವರ್ತುಲಾಕಾರದ ಬೆಳಕು ತೋರಿಸಿದರೇನೇ ನಾಯಿಯ ಬಾಯಲ್ಲಿ ನೀರೂರುವಂತೆ ಅದು ಕಂಡೀಶನ್ ಆದ ಮೇಲೆ ದೀರ್ಘವರ್ತುಲ ಬೆಳಕನ್ನು ಮೆಲ್ಲ ಮೆಲ್ಲಗೆ ವೃತ್ತಾಕಾರವಾಗಿ ಮಾಡುತ್ತ ಬಂದನು. ಕೊನೆಗೆ ವೃತ್ತವಾವುದು ದೀರ್ಘವೃತ್ತವಾವುದು, ಎಂದು ತಿಳಿಯುವುದೇ ಕಷ್ಟವಾದಾಗ ತನಗೆ ಆಹಾರ ಸಿಗುವುದೇ ಇಲ್ಲವೇ ತಿಳಿಯದೆ ಗಲಿಬಿಲಿಗೊಂಡ ನಾಯಿಯ ಚರ್ಯೆ ವಿಚಿತ್ರವಾಯಿತು. ಅದು ಬೊಗಳುವುದು, ಯದ್ವಾತದ್ವಾ ಹಾರಾಡುವುದು, ಇಲ್ಲವೆ ತೀರ ಮಂಕು ಬಡಿದಂತೆ ಕೂತುಬಿಡುವುದು ಮೊದಲಾದ ವಿಕೃತ ವರ್ತನೆಗಳನ್ನಾರಂಭಿಸಿತು. ಇದು ಹುಚ್ಚರ ಅರೆಹುಚ್ಚರ ವರ್ತನೆಯನ್ನು ತುಂಬ ಹೋಲುತ್ತಿತ್ತು. ಮನುಷ್ಯ ಒಂದೇ ಸವನೆ ಗೊಂದಲಕ್ಕೆ ಬಿದ್ದಾಗ ಅವನು ವಿಕೃತ ಮನಸ್ಕನಾಗುತ್ತಾನೆಂದು ಪೌಲೋವನು ಇದಕ್ಕೆ ಅರ್ಥ ಹಚ್ಚಿದನು.

ಪೌಲೋವನ ಶೋಧಗಳು ಮಾನವ ಕುಲಕ್ಕೆ ಮಹತ್ವದವಾಗಿವೆ— ಹಾಗೆಯೆ ಅಪಾಯಕರವೂ ಆಗಬಹುದಾಗಿವೆ. ಅವು ನಮ್ಮ ವರ್ತನೆಯ ಅನೇಕ ಒಳಪಟ್ಟುಗಳನ್ನು ಬಿಡಿಸಿ ತೋರಿಸುತ್ತವೆ. ಹಿತವಾದ ಇಂದ್ರಿಯಾನುಭವಗಳನ್ನು ಕೊಡುವ ಪದಾರ್ಥಗಳಂತೂ ನಮ್ಮಲ್ಲಿ ಹಿತವಾದ ಪ್ರತಿಕ್ರಿಯೆಯನ್ನುಂಟುಮಾಡುತ್ತವೆ. ಅಷ್ಟೇ ಅಲ್ಲ, ಆ ಪದಾರ್ಥಗಳ ಸಂಗಡ ಇದ್ದ ಪದಾರ್ಥಗಳು ಕೂಡ ಅದೇ ಪ್ರತಿಕ್ರಿಯೆ ಮಾಡಬಲ್ಲವು.

ಈ ತಿಳಿವಳಿಕೆಯನ್ನು ಅಮಿತ ಅಧಿಕಾರವುಳ್ಳ ಸರ್ವಾಧಿಕಾರಿಯೊಬ್ಬನು ಮಾನವರನ್ನು ತನಗೆ

ಬೇಕಾದಂತೆ ತಿದ್ದಲು ವಿನಿಯೋಗಿಸಬಲ್ಲನೆಂಬುದು ಪೌಲೋವನ ಸಿದ್ಧಾಂತದಲ್ಲಿರುವ ದೊಡ್ಡ ಭಯಂಕರ ಅಂಶ. ರಶಿಯದಲ್ಲಿ ಸರಕಾರ ಸಂಘಟಿತವಾಗಿ ಹೀಗೆ ಜನರ ವರ್ತನೆಯನ್ನು ರೂಪುಗೊಳಿಸುತ್ತಿದೆ ಎಂದು ಆರೋಪಿಸಲಾಗಿದೆ. ಗಂಟೆಯ ಸದ್ದಿಗೆ ವಿಚಾರ ಮಾಡದೆನೆ ಜೊಲ್ಲು ಸುರಿಸುವ ನಾಯಿಯ ಹಾಗೆ ವಿಶಿಷ್ಟ ವಿಷಯಗಳಿಗೆ ಜನರು ವಿಚಾರಿಸದೆನೆ ವಿಶಿಷ್ಟ ರೀತಿಯಲ್ಲಿ ಪ್ರತಿಕ್ರಿಯೆ ತೋರಿಸುವಂತೆ ಮಾಡಲು ರಶಿಯನ್ ನಾಯಕರು ಯತ್ನಿಸುತ್ತಿದ್ದಾರಂತೆ. ಇದಕ್ಕೆ Brain Washing ಮಿದುಳು ತೊಳೆಯುವುದು ಎಂದೇ ಹೆಸರು ಬಿದ್ದಿದೆ.

ರಾಜಕೀಯ ಕೈದಿಗಳಿಂದ ಅವರು ಮಾಡಿದ ಅಪರಾಧಗಳಿಗಾಗಿ ತಪ್ಪೊಪ್ಪಿಗೆ ಪಡೆಯುವುದಕ್ಕೆ ಪೌಲೋವನ ಸಿದ್ಧಾಂತಗಳನ್ನು ಬೆಳಸಲಾಯಿತು. ಕೈದಿಯನ್ನು ಹಲ ದಿನ ಉಪವಾಸ ಕೆಡವಿ ಹೊಡೆದು ಬಡಿದು, ಪ್ರಶ್ನೆಗಳಿಂದ ಪೀಡಿಸಿ ಆಮೇಲೆ ತೀರ ಹಸಿದ ಅವರು ಸುಳ್ಳಾಗಿಯಾದರೂ ತಪ್ಪೊಪ್ಪಿದೊಡನೆ ಆಹಾರವನ್ನೂ ತುಂಬ ಒಳ್ಳೇ ಸೌಕರ್ಯಗಳನ್ನೂ ಕೊಡಲಾಯಿತು. ಇದನ್ನು ಹಲ ಬಾರಿ ಪುನರಾವರ್ತಿಸಿದ ಮೇಲೆ ಆಹಾರಕ್ಕೂ ತಪ್ಪೊಪ್ಪಿಗೆಗೂ ಸಂಬಂಧ ಕಲ್ಪಿಸಿದ ಅವರ ನರಗಳು ತಪ್ಪೊಪ್ಪಿಗೆಗೆ "ಕಂಡಿಶನ್" ಆದವು. ಅವರ ಮನಸು ಏನೇ ಹೇಳಲಿ, ತಪ್ಪೊಪ್ಪುವುದು ಅಭ್ಯಾಸವಾಗಿ ನ್ಯಾಯಸ್ಥಾನದಲ್ಲಿ ಕೂಡ ಕೈದಿಗಳು ಪ್ರಶ್ನಿಸಿದೊಡನೆ ನೇರವಾಗಿ ತಪ್ಪೊಪ್ಪಿಕೊಳ್ಳುವರು.

ಗಂಟೆಯ ಸಪ್ಪಳ ನಾಯಿಗೆ ಅನ್ನದ ಪ್ರತೀಕವಾಯಿತು. ಹಾಗೆಯೆ ನಿರಂತರ ಪ್ರಚಾರದಿಂದ "ಕಂಡೀಶನ್" ಆದ ಜನರು ನಿಜವಾದ ಸುಖದ ಸ್ಥಾನದಲ್ಲಿ ಸುಖಕ್ಕೆ ಸಂಬಂಧಪಟ್ಟ ಶಬ್ದಗಳನ್ನು ಕೇಳಿಯೆ ಸುಖಭ್ರಾಂತಿಯನ್ನನುಭವಿಸುವಂತೆ ಮಾಡುವ ಗತ್ತನ್ನೂ ಕಮ್ಯುನಿಸ್ಟರು ಕೃತಿಗಿಳಿಸುತ್ತಿದ್ದಾರೆ.

ಆದರೆ ಪೌಲೋವನು ವಿಜ್ಞಾನದ ಮಹಾಪುರುಷರಲ್ಲೊಬ್ಬನೆಂಬುದು ನಿರ್ವಿವಾದ. ಅವನ "ವರ್ತನಾವಾದ" (Behaviorism) ಮಾನಸಶಾಸ್ತ್ರಕ್ಕೆ ದೊಡ್ಡ ಕೊಡುಗೆಯಾಗಿದೆ. ೧೯೩೬ ರಲ್ಲಿ ಆತ ೮೬ ನೇ ವಯಸ್ಸಿನಲ್ಲಿ ಮರಣ ಹೊಂದಿದಾಗ ಮುಂದಿನ ಪೀಳಿಗೆಗಳಿಗೆ ಇನ್ನೂ ಹೊಸ ಹೊಸ ಶೋಧಗಳಿಗೆ ದಾರಿತೋರಿಸಿ ಹೋದಂತಾಯಿತು. *



ಒಮ್ಮೆ ರವೀಂದ್ರನಾಥ ಠಾಕೂರರು ಭಾಷಣ ಮಾಡುತ್ತಿದ್ದಾಗ, ಅವರ ಕಾಲಿನಲ್ಲಿ ಚಪ್ಪಲಿಯ ಮೊಳೆ ನಟ್ಟಿತು. ಕಾಲು ರಕ್ತಮಯವಾಗತೊಡಗಿತು. ಆದರೂ ಇದರಿಂದ ಅವರ ವಾಣಿಯ ಪ್ರವಾಹ ಒಂದು ಕ್ಷಣ ಕೂಡ ನಿಲ್ಲಲಿಲ್ಲ. ಭಾಷಣ ಮುಗಿಯಿತು. ಅನಂತರ ರವೀಂದ್ರರು ಅಲ್ಲಿಂದ ಹೊರಟರು. ಆಗ ಜನ, ಅವರ ಕಾಲನ್ನು ನೋಡಿ ಗಾಬರಿಯಾಗಿ ಅವರತ್ತ ನೋಡತೊಡಗಿದರು. ಆಗ ಠಾಕೂರರು ನುಡಿದರು :

"ಎಲ್ಲ ಜನರೂ ಬಂದು ಇಲ್ಲಿ ಸೇರಿದ್ದು, ಮುಖ್ಯವಾಗಿ ನನ್ನ ಭಾಷಣವನ್ನು ಕೇಳಲಿಕ್ಕೆಂದು....ಇವರೆದುರಿಗೆ ನನ್ನ ದುಃಖವನ್ನು ಹೇಳಿಕೊಂಡು, ಅವರಿಗೆ ನಿರಾಶೆಯನ್ನುಂಟುಮಾಡುವುದು ನನಗೆ ಉಚಿತವಾಗಿ ಕಾಣಲಿಲ್ಲ."

— ಜಿ. ಸಿ. ದಲಭಂಜನ

ತೆಲುಗು ಸಾಹಿತ್ಯದ ಸಿದ್ಧಹಸ್ತಲೇಖಕನ ಒಂದು ಕಥೆ

# ಭ್ರಮ ನಿರಸನ

ಕೆ. ಕುಟುಂಬರಾವ್

ಹೆಚ್ಚಾಗಿ ಕಾರಖಾನೆಯ ಕೆಲಸಗಾರರು ಕಾಫಿ ತಿಂಡಿಗಾಗಿ ಬರುವ ಹಾಟೆಲ್ಲಾಗಿತ್ತು ಅದು. 'ಸಿಂಗಲ್ ಚಾ', 'ಭಜಿ', 'ಉಸಳಿ'- ಮುಂತಾದ ಆರೆಂಟು ನಯೆ ಪೈಸೆಗಳಿಗೆ ಸಿಗುವ ಸಾಮಾನುಗಳಿಗೇ ಅಲ್ಲಿ ಬೇಡಿಕೆಯಿತ್ತು. ಮುಂಜಾನೆ ೭॥ ಗಂಟೆಯ ಸುಮಾರಿಗೆ ಅಂಗಡಿ ತಮಗೆ ಬೇಕಾದ್ದನ್ನು ಹಿಂದಿಯಲ್ಲೊ, ಮರಾಠಿಯಲ್ಲೊ ಕೂಗಿ ಕೇಳುತ್ತಿದ್ದ ಕೆಲಸಗಾರರಿಂದ ತುಂಬಿಹೋಗುತ್ತಿತ್ತು. ಗಲ್ಲೆಯ ಮೇಲೆ ಕುಳಿತಿರುವಾತ ಮಾಣಿಯ ಕಿವಿಗೆ ಬೀಳದ ಗಿರಾಕಿಗಳ ಬೇಡಿಕೆಯನ್ನು ಸ್ವತಃ ಕೂಗಿ ತಿಳಿಸುತ್ತಿದ್ದ: "ಒಂದು ಗ್ಲಾಸು ನೀರು; ಎರಡು ಪ್ಲೇಟ್ ಭಜಿ" ಇತ್ಯಾದಿ.

ಒಂದು ದಿನ ಮುಂಜಾನೆ ಅಪರಿಚಿತನೊಬ್ಬ ಅಂಗಡಿಗೆ ಬಂದ ಅವನುಟ್ಟಿದ್ದ ಹೊಸ ಧೋತರ, ತೊಟ್ಟಿದ್ದ ಹೊಸ ಶರ್ಟು ಎಲ್ಲರ ಗಮನ ಸೆಳೆದವು. ಅವನು ತಲೆಗೆ ಸುತ್ತಿದ್ದ ದೊಡ್ಡ ರುಮಾಲು ಅವನೊಬ್ಬ ಹಳ್ಳಿಯವ ಎಂದು ಸಾರಿ ಹೇಳುತ್ತಿತ್ತು. ಖಾಲಿಯಿದ್ದ ಖುರ್ಚಿಯಲ್ಲಿ ಆತನನ್ನು ಕೂಡ್ರಿಸಿ ಮಾಣಿ ಕೇಳಿದ: "ಕಾಯ್ ಪಾಯಿಜೆ ತುಹ್ಮಾಲಾ?"

ಗಿರಾಕಿಗೆ ಪ್ರಶ್ನೆ ಅರ್ಥವಾದರೂ ತನ್ನ ಮುಖದ ಎದುರಿಗೆ ಕೇವಲ ಇಪ್ಪತ್ತು ಇಂಚು



ದೂರದಲ್ಲಿಟ್ಟಿದ್ದ ಮಜ್ಜಿಗೆಯ ದೊಡ್ಡ ಕಾಜಿನ ಹೂಜೆಯನ್ನು ನೋಡುವುದರಲ್ಲಿ ಮಗ್ನನಾಗಿದ್ದ ಆತ ಕೂಡಲೆ ಉತ್ತರ ಕೊಡಲಿಲ್ಲ. ಸಂಗಮವರಿ ಕಲ್ಲಿನ ಮೇಜು, ನೆಲಕ್ಕೆ ಹಾಕಿದ್ದ ಬಣ್ಣದ ಹಂಚುಗಳು ಅವನನ್ನಾಕರ್ಷಿಸಿದ್ದವು. ಎಲಾ! ಇದೆಲ್ಲಿಯಾದರೂ ಬಲು ತುಟ್ಟಿಯಾದ ಅಂಗಡಿಯೆ ಎಂಬ ಸಂದೇಹದಲ್ಲಾತ ಬಿದ್ದಿದ್ದ.

"ಏನು ತರಲಿ ನಿಮಗೆ?" ಮಾಣಿ ಪುನಃ ಕೇಳಿದ.

"ಏನೇನಿದೆ?" ಆಗಂತುಕ ತರುಣ ಕೇಳಿದ.

"ಪುರಿ, ಶಿರಾ, ಭಜಿ, ಪಾವ್‌ಉಸಳಿ, ಚಾ, ಮಜ್ಜಿಗೆ, ಶರ್ಬತ್"

ಗಿರಾಕಿ ಕೆಲವು ಸಾಮಾನುಗಳ ಬೆಲೆ ವಿಚಾರಿಸಿ ತಿಳಿದುಕೊಂಡು ಮೂರು ಆಣೆಗೆ ಮಿಕ್ಕದಷ್ಟು ತಿಂಡಿಗೆ ಆರ್ಡರ್ ಮಾಡಿದ.

*

ಹಾಟೆಲ್ಲಿನ ಮಗ್ಗುಲಲ್ಲಿಯೆ ಇದ್ದ ಒಳ್ಳೆಯ ರಸ್ತೆಯೊಂದು ಕಾರಖಾನೆಯ ವರೆಗೆ ಹೋಗಿತ್ತು. ರಸ್ತೆಯ ಒಂದು ಮಗ್ಗಲಿಗೆ ಹೊಸತಾಗಿ ಕಟ್ಟಿದ ಇಪ್ಪತ್ತು ಗುಡಿಸಲುಗಳು ಸಾಲಾಗಿ ನಿಂತಿದ್ದವು. ಅವುಗಳಿಂದ ಸುಮಾರು ಒಂದು ಫರ್ಲಾಂಗಿನ ಅಂತರದಲ್ಲಿ ಆ ಎರಡು ಕಾರಖಾನೆಗಳು ಒಂದಕ್ಕೊಂದು ಸಮೀಪವಾಗಿ ಇದ್ದವು. ಹಾಟೆಲ್ಲಿಗೆ ಬಂದಿದ್ದ ಆ ನೂತನ ತರುಣ ಕೆಲಸ ಹುಡುಕಲೆಂದು ಈ ಕಾರಖಾನೆಗಳತ್ತ ನಡೆದಿದ್ದ.

ಮೊದಲನೆಯ ಕಾರಖಾನೆ ಬಂದಾಗಿದ್ದಂತೆ ಅನಿಸಿತ್ತು. ಎರಡನೆಯ ಕಾರಖಾನೆಯ ಗೇಟಿನ ಮುಂದೆ ಒಂದಿಷ್ಟು ಜನ ಗುಂಪು ಕಟ್ಟಿ ನಿಂತಿದ್ದರು. ಅವರೂ ಕೆಲಸ ದೊರಕಿಸಲು ಬಂದವರೆಂದು ಈ ಹಳ್ಳಿ ತರುಣನಿಗೆ ಗೊತ್ತಿರಲಿಲ್ಲ. ಗೇಟಿನಲ್ಲೊಬ್ಬ ಪಠಾಣ ಕಾವಲುಗಾರನಿದ್ದಾನೆಂಬುದರ ಅರಿವಿಲ್ಲದೆಯೇ ಈ ತರುಣ ಸೀದಾ ಅಲ್ಲಿಗೆ ಹೋಗಿ ಒಳಗೆ ಇಣಿಕಿ ನೋಡಿದ. ಕಾರಖಾನೆಯ ಕಚೇರಿಯ ರೂಪ ಅವನಿಗೆ ಹಿಡಿಸಿತು. ಅದರೆದುರಿನಲ್ಲಿ ಕಲಾಪೂರ್ಣ ರೀತಿಯಲ್ಲಿ ವಿವಿಧ ಹೂಗಿಡಗಳನ್ನು ನೆಟ್ಟಿದ್ದರು. ಕಾರಖಾನೆ ಗೇಟಿಗಿಂತ ಒಂದಿಷ್ಟು ದೂರದಲ್ಲಿತ್ತು.

"ವ್ಹಾ! ಮಾಡಿದರೆ ಇಂಥಲ್ಲಿ ಕೆಲಸ ಮಾಡಬೇಕು" ಎಂದು ಮನಸ್ಸಿನಲ್ಲಿಯೆ ಅಂದುಕೊಂಡ ತರುಣ. "ಇಲ್ಲಿ ಕೆಲಸ ಸಿಕ್ಕಿದವರು ಭಾಗ್ಯಶಾಲಿಗಳೇ ಸರಿ" ಅವನ ಮನಸ್ಸು ಹೇಳಿತು

"ಏಯ್! ಏನು ಬೇಕು ನಿನಗೆ?" ಪಠಾಣ ಕೂಗಿದ.

"ಕೆಲಸ."

"ಹೋಗು, ಅಲ್ಲಿ ಆ ಜನರ ಸಂಗಡ ನಿಲ್ಲು. ಅರೆ, ಮ್ಯಾನೇಜರರು ಬರುತ್ತಿದ್ದಾರೆ. ನಡೆ, ನಡಿ ನಡಿ" ಪಠಾಣ ಗುಡುಗಿದ.

ಹೊಸಬ ಬಂದ ರಸ್ತೆಯಲ್ಲೇ ತಿರುಗಿ ಓಡಿದ. ಆಗಲೇ ಒಂದು ಕರಿಯ ಕಾರು ಹಾರ್ನ್ ಬಾರಿಸುತ್ತ ಬಂದು ಗೇಟಿನೊಳಗೆ ಹಾಯ್ದು ಕಚೇರಿಯತ್ತ ಸಾಗಿತ್ತು.

"ನಾನು ಗೇಟಿನಿಂದ ಇಣಿಕಿ ನೋಡಿದ್ದನ್ನು ಮಾಲಿಕರು ಕಂಡರೊ ಏನೊ?" ಹೊಸಬ ಯೋಚಿಸಿದ. ತನಗೆ ನೌಕರಿ ಸಿಗದಿದ್ದರೆ ಏನು ಗತಿ ಎಂಬ ವಿಚಾರ ಬಂದು ಆ ಹಳ್ಳಿಯ ತರುಣನ ಎದೆ ಕಂಪಿಸಿತು.

*

ದಿನಗೂಲಿ ಕೆಲಸಕ್ಕಾಗಿ ಎಂದು ಪ್ರತಿನಿತ್ಯ ಮುಂಜಾನೆ ಕಾರಖಾನೆಗಳ ಎದುರು ನಿಲ್ಲುವ ಜನ ಒಂದು ವಿಚಿತ್ರ ಜಾತಿ. ಒಳಗೆ ಯಾವ ತರದ ಕೆಲಸ ನಡೆಯುತ್ತದೆ ಎನ್ನುವುದನ್ನು ಅವರು ಕೇಳುವುದೇ ಇಲ್ಲ. ವನಸ್ಪತಿಯ ತೈಲವನ್ನು ತಯಾರಿಸುವ ಕಾರಖಾನೆಯೆ ಇರಲಿ, ಜವಳಿ ಕಾರಖಾನೆಯೆ ಇರಲಿ ಅಥವಾ ಪಾತ್ರೆ ಪಗಡೆಗಳ ಕಾರಖಾನೆಯೆ ಇರಲಿ—ಎಲ್ಲವೂ ಒಂದೇ ಅವರ ದೃಷ್ಟಿಯಲ್ಲಿ. ಕೇವಲ ಕಲಿತವರು ಮಾತ್ರ ಇಂಥ ಭೇದಗಳನ್ನು ಎಣಿಸುತ್ತಾರೆ. ತಾವು ಇಂಥಲ್ಲಿ ಕೆಲಸ ಮಾಡಬಹುದು, ಇಂಥಲ್ಲಿ ಕೆಲಸ ಮಾಡಬಾರದು ಎಂದು ತಿಳಿಯುತ್ತಾರೆ. ಆದರೆ ಕೂಲಿ ಕೆಲಸದವರು ಹಾಗಲ್ಲ. ಕೇವಲ ಮೈಮುರಿದು ದುಡಿಯುವ ಅವರಿಗೆ ಯಾವ ಕೆಲಸವಾದರೂ ನಡೆಯುತ್ತದೆ. ಹೊಗೆ ಕಾರುವ ಕೊಳವೆ ಕಾಣಿಸಿತೊ ಸರಿ, ಅಲ್ಲಿ ಕೆಲಸ ದೊರಕಿಸಲು ಅವರು ಧಾವಿಸುತ್ತಾರೆ.

ಮತ್ತೆ ಯಾವುದೊಂದು ಕಾರಖಾನೆ ಲಾಭದಾಯಕವಾಗುವುದು ಈ ಕೆಲಸಗಾರರ ಅದೃ

ಷ್ಟದ ಮಾತು. ಒಂದೆಡೆ ಅವರಿಗೆ ನಾಲ್ಕು ದಿನಗಳ ವರೆಗೆ ಕೆಲಸ ಸಿಕ್ಕರೆ ಇನ್ನೊಂದೆಡೆ ನಾಲ್ಕು ತಿಂಗಳ ವರೆಗೆ ಸಿಗುವುದು. ಆದರೆ ಒಟ್ಟಿನಲ್ಲಿ ಎಲ್ಲ ಕಡೆಗಳಲ್ಲೂ ಅವರಿಗೆ ಸಿಗುವುದು ತಾತ್ಪೂರ್ತಿಕ ಕೆಲಸ. ಮತ್ತೆ ಅವರು ಮೊದಲಿನಂತೆಯೇ ನಿರುದ್ಯೋಗಿಗಳಾಗುತ್ತಾರೆ.

ಇಷ್ಟಾದರೂ ಕೆಲಸಕ್ಕೆ ಹೋದ ಮೇಲೆ ಅವರು ಗಟ್ಟಿ ಮುಟ್ಟಾಗಿಯೆ ಇದ್ದು ತಿರುಗಿ ಬರುತ್ತಾರೆಂಬ ನೇಮವಿಲ್ಲ. ಕಾರಖಾನೆಗಾಗಿ ಅವರು ತಮ್ಮ ಬೆವರು ರಕ್ತ ಸುರಿಸುತ್ತಾರೆಂಬುದು ನಿಜ ಕೆಲಸ ಮಾಡಿ ಕಿಸೆಯಲ್ಲಿ ನಾಲ್ಕು ಕಾಸು ಹಾಕಿಕೊಂಡು ಅವರು ಹೊರಬಂದರೂ ಮತ್ತೊಂದುಕೆಲಸ ಸಿಗುವುದರೊಳಗಾಗಿ ಆ ಕಾಸು ಖರ್ಚಾಗಿ ಹೋಗಿರುತ್ತದೆ. ದೇವರ ಶಾಪ ಈ ರೀತಿಯಾಗಿದೆ ಈ ಕೆಲಸಗಾರರ ಮೇಲೆ.

ಈ ಕಾರಖಾನೆಯ ಹೊರಗಡೆ ನಿಂತಿದ್ದ ಜನರಲ್ಲಿ ಇಬ್ಬರಿಗೆ ಕೆಲಸವಿಲ್ಲದೆ ತುಂಬ ದಿನಗಳಾಗಿ ಹೋಗಿದ್ದವು. ಬೆಳಗಿನ ಪಾಳಿ ಶುರುವಾಗಿ ಅರ್ಧ ತಾಸು ಕಳೆಯುವ ಮೊದಲು ಅವರಿಗೆ ಇಂದು ಕೆಲಸ ಸಿಕ್ಕೀತೇ ಇಲ್ಲವೆ ಎಂದು ತಿಳಿಯು-ವಂತಿಲ್ಲ. ಆ ಹೊತ್ತಿಗೆ ಇಂದು ಬೇರೊಂದು ಕಾರಖಾನೆಯಲ್ಲಿ ಕೆಲಸ ದೊರಕಿಸುವ ಹೊತ್ತು ಮೀರಿ ಹೋಗಿಬಿಟ್ಟಿರುತ್ತದೆ. ಹಾಗಿದ್ದುದರಿಂದ ಈ ಜನ ತಮ್ಮ ಅದೃಷ್ಟ ಪರೀಕ್ಷೆಯನ್ನೆ ಇಲ್ಲಿ ಮಾಡುತ್ತಲಿದ್ದರು. ಮತ್ತು ಇಂದೇ ಹೊಸತಾಗಿ ಇಲ್ಲಿಗೆ ಬಂದಿದ್ದ ಆ ಹಳ್ಳಿಯ ತರುಣ ಅದೃಷ್ಟ ಶಾಲಿಯಾಗಿದ್ದ.

ಮ್ಯಾನೇಜರರು ಒಳಗೆ ಹೋದ ತುಸು ಹೊತ್ತಿನಲ್ಲಿ ಕಾರಕೂನನೊಬ್ಬ ಹೊರಗೆ ಬಂದು ಗೇಟಿನ ಬಳಿ ನಿಂತಿದ್ದ ಜನರನ್ನು ನೋಡಿದ. ಆಮೇಲೆ ಬೆರಳು ಮಾಡಿ ಈ ಹಳ್ಳಿಯ ತರುಣನನ್ನು ತೋರಿಸುತ್ತ "ನೀನು ಬಾ" ಎಂದ. ಮತ್ತೊಬ್ಬನಿಗೂ ಹಾಗೆಯೆ ಹೇಳಿ ಅವರಿಬ್ಬರನ್ನೂ ಕರೆದುಕೊಂಡು ಒಳಗೆ ನಡೆದ.

ನಿಜವಾಗಿ ಹೇಳುವುದಾದರೆ ಈ ಇಬ್ಬರಿಗೆ ಕೆಲಸ ಸಿಕ್ಕಿದ್ದರಲ್ಲಿ ಕೇವಲ ಅದೃಷ್ಟದ ಕೈವಾಡವಿತ್ತು ಎಂದೇನಿಲ್ಲ. ಹಿಂದಿನ ಕಾಲದ ರಾಜರಂತೆ ಕಾರಖಾನೆಗಳು ವಯಸ್ಸು ಮತ್ತು ಶಕ್ತಿಗಳನ್ನು ಅಜಮಾಯಿಸಿಕೊಂಡೇ ಕೆಲಸಗಾರರನ್ನು ತೆಗೆದುಕೊಳ್ಳುತ್ತವೆ.

ಕಾರಕೂನ ಹಳ್ಳಿಯ ತರುಣನತ್ತ ತಿರುಗಿ ಕೇಳಿದ: "ನಿನ್ನ ಹೆಸರು?"

"ವಿಠ್ಠಲ ಪಾಂಡುರಂಗ."

"ಕಾರಖಾನೆಯಲ್ಲಿಂದಾದರೂ ಕೆಲಸ ಮಾಡಿದ್ದೀಯಾ ?"

"ಇಲ್ಲ."

"ಸರಿ. ನಿನಗೆ ದಿನಾಲು ೧॥ ರೂಪಾಯಿ ಸಿಗುವುದು. ಈ ವಿಭಾಗದಲ್ಲಿ ಕೆಲಸ ಮಾಡು."

ತನಗೊಂದು ದೊಡ್ಡ ಕೆಲಸಕೊಟ್ಟು ಕೃತಾರ್ಥನನ್ನಾಗಿ ಮಾಡಿದ್ದಾರೆಂದು ವಿಠ್ಠಲನಿಗನಿಸಿತು. ಕಾರಖಾನೆ ತಿಂಗಳಲ್ಲಿ ೨೫ ದಿನ ಕೆಲಸ ಮಾಡಿತು ಎಂದಿಟ್ಟುಕೊಂಡರೆ ತನಗೆ ತಿಂಗಳ ಕೊನೆಗೆ ೩೭॥ ರೂಪಾಯಿಗಳು ಸಿಗುವವು. ವರ್ಷಕ್ಕೆ ೪೦೦ ರೂಪಾಯಿಗಳಿಗಿಂತಲೂ ಹೆಚ್ಚು! ದೇವರೇ! ಅವನ ಹಳ್ಳಿಯಲ್ಲಿ ಹತ್ತಾರು ಮಕ್ಕಳಿದ್ದ ಇಡೀ ಕುಟುಂಬ ವರ್ಷವೆಲ್ಲ ಹೊಲದಲ್ಲಿ ದಿನದ ೨೪ ತಾಸು ಬೆವರಿಳಿಸಿ ದುಡಿದರೂ ಅಷ್ಟು ಪ್ರಾಪ್ತಿಯಾಗುವುದು ಸಾಧ್ಯವಿರಲಿಲ್ಲ. ತಾನು ನಿಜವಾಗಿಯೂ ಭಾಗ್ಯಶಾಲಿ ಎಂದು ವಿಠ್ಠಲನಿಗನಿಸಿತು. ವ್ಹಾ! ಅವನಿಗೆ ಕೆಲಸ ಸಿಕ್ಕಿರುವ ಈ ಕಾರಖಾನೆ ಎಷ್ಟು ಸುಂದರವಾದದ್ದು. ದಿನಾಲು ಬರೀ ಎಂಟು ತಾಸು ದುಡಿದರೆ ಮುಗಿಯಿತು, ಆಮೇಲೆ ಸ್ವಾತಂತ್ರ್ಯ. ಹಳ್ಳಿಯಲ್ಲೊ ಯಾವ ಒಂದು ಕೆಲಸವೂ ಮುಗಿಯಿತು ಎಂದಿಲ್ಲ. ಮತ್ತೆ ಬಸ್ಸುಗಳು, ಸಿನೆಮಾಗಳು, ಟ್ರಾಮುಗಳು ಮುಂತಾದವಿದ್ದ ಈ ದೊಡ್ಡ ಪಟ್ಟಣ. ಛೆ! ಛೆ! ವಿಠ್ಠಲ ನಿಜವಾಗಿಯೂ ಭಾಗ್ಯಶಾಲಿಯೆ ಸರಿ.

ಕಾರಖಾನೆಯ ಶೆಡ್ಡಿನ ಹತ್ತಿರ ಒಂದು ಲಾರಿ ಬಂದು ನಿಂತಿತು. ಅದರಲ್ಲಿದ್ದ ನಾಲ್ವರು ಕೆಳಗೆ ನಿಂತಿದ್ದ ಕೆಲಸಗಾರರಿಗೆ ತಾಮ್ರದ ಗಟ್ಟಿಗಳನ್ನು ಇಳಿಸಿಕೊಡತೊಡಗಿದರು. ಇತರರ ಜೊತೆಯಲ್ಲಿ ವಿಠ್ಠಲನೂ ಗಟ್ಟಿಗಳನ್ನು ಕಾರಖಾನೆಯೊಳಗೊಯ್ದು ಇಡತೊಡಗಿದ. ಪ್ರತಿಯೊಬ್ಬ ಕೂಲಿಯೂ ಒಂದೊಂದು ಕೈಯಲ್ಲಿ ಒಂದೊಂದು ಗಟ್ಟಿಯನ್ನು ಹಿಡಿದುಕೊಂಡು ಕಷ್ಟದಿಂದ ಒಯ್ಯುತ್ತಿರುವದನ್ನು ಆತ ಕಂಡು ತಾನೂ

ಹಾಗೆಯೆ ಮಾಡಿದ. ಆದರೆ ಆಮೇಲೆ ಕೈಗಳನ್ನು ಚಾಚಿ ಅವುಗಳ ಮೇಲೆ ಗಟ್ಟಿಗಳನ್ನಿಟ್ಟುಕೊಂಡರೆ ಸರತಿಗೊಮ್ಮೆ ಎರಡಕ್ಕಿಂತ ಹೆಚ್ಚು ಗಟ್ಟಿಗಳನ್ನು ಒಯ್ಯಬಹುದು ಎಂದು ಆತನಿಗನಿಸಿತು.

ಆತ ಲಾರಿಯಲ್ಲಿದ್ದವನ ಎದುರು ಕೈಗಳನ್ನು ಚಾಚಿ ಹಿಡಿದು ಅವುಗಳ ಮೇಲೆ ಗಟ್ಟಿಗಳನ್ನು ಅಡ್ಡಲಾಗಿ ಇಡಲು ಹೇಳಿದ.

"ವ್ಹಾ! ನೀನೊಬ್ಬ ಹೆಚ್ಚಿನವ-ದೊಡ್ಡ ಮನುಷ್ಯ!" ಎಂದ ಲಾರಿಯ ಆಳು.

"ಹೀಗೆ ಒಯ್ದರೆ ಹೆಚ್ಚಿಗೆ ಒಯ್ಯಲು ಆಗುವುದು" ವಿಠ್ಠಲ ಹೇಳಿದ.

"ಉಳಿದವರಂತೆಯೆ ಕೆಲಸ ಮಾಡು" ಲಾರಿಯ ಆಳು ಅಪ್ಪಣೆ ಮಾಡುವವನಂತೆ ಸಿಡುಕಿನಲ್ಲಿ ಹೇಳಿದ. ವಿಠ್ಠಲನಿಗೆ ಅವಮಾನವೂ ಅಧೈರ್ಯವೂ ಆಯಿತು ಅದರಿಂದ.

ವಿಠ್ಠಲ ಕೆಲಸಮಾಡತೊಡಗಿ ನಾಲ್ಕು ದಿನಗಳು ಕಳೆದಿದ್ದವು ಈಗ. ಇತರ ಕೆಲಸಗಾರರ ಒಂದಿಷ್ಟು ಪರಿಚಯ ಅವನಿಗಾಗಿತ್ತು. ಹಾಗಿದ್ದರೂ ಅವನಿಗೆ ಅವರ ಅರ್ಥವಾಗಿರಲಿಲ್ಲ. ಮಾಲಕರ ವಿರುದ್ಧ ಏನೋ ದ್ವೇಷ ಇದ್ದವರಂತೆ ಅವರು ಕೆಲಸ ಮಾಡುತ್ತಿದ್ದರು. ತಮ್ಮ ಕೆಲಸದ ಬಗ್ಗೆ ಕರ್ತವ್ಯದ ಬಗ್ಗೆ ಅವರು ಮಾತಾಡುತ್ತಲೇ ಇರಲಿಲ್ಲ. ಆ ಮಾತು ಬಂದರೂ ತಕರಾರುಗಳ ಶಬ್ದಗಳಷ್ಟೇ ಅವರ ಬಾಯಿಂದ ಹೊರಬೀಳುತ್ತಿದ್ದವು.

ವಿಠ್ಠಲನಿಗೆ ತನ್ನ ಜೊತೆ ಕೆಲಸಗಾರರ ಸಾಮಾಜಿಕ ಅಂತಸ್ತಿನ ಕಲ್ಪನೆ ಬರಲಿಲ್ಲ. ಆದರೂ ಅವರಲ್ಲೊಬ್ಬರಿಗೂ ಹಳ್ಳಿಯಲ್ಲಿ ತನಗಿರುವಷ್ಟು ಸ್ಥಾನಮಾನವೂ ಇಲ್ಲವೆಂದು ಅವನಿಗನಿಸಿತು. ಅವನ ಕುಟುಂಬ ಹಳ್ಳಿಯಲ್ಲಿ ಗೌರವಸ್ಥ ಕುಟುಂಬವಾಗಿತ್ತು. ದೊಡ್ಡ ಕುಟುಂಬವೊಂದು ಚಿಕ್ಕ ಜಮೀನಿನ ಮೇಲೆ ಜೀವಿಸಲು ತೊಡಗಿದಾಗ ಆಗುವಂತೆ ಅವನ ಮನೆತನವೂ ಸಾಲಕ್ಕೆ ಸಿಕ್ಕಿತ್ತು, ಅಷ್ಟೆ. ಪಟ್ಟಣಕ್ಕೆ ಹೋಗಿ ಹೊಟ್ಟೆ ತುಂಬಿಕೊಳ್ಳಲು ಯಾರೂ ಅವನಿಗೆ ಹೇಳಿರಲಿಲ್ಲ. ಆತ ಆ ಸುಖ, ಸಮಾಧಾನ ಹೊಂದಲೆಂದೇ ಬಂದಿದ್ದ. ಈ ಕೆಲಸವನ್ನಾತ ಯಾವ ನಿಮಿಷದಲ್ಲಿಯಾದರೂ ಬಿಟ್ಟುಕೊಟ್ಟು, ಹಳ್ಳಿಗೆ ತಿರುಗಿ ಹೋಗಬಹುದಾಗಿತ್ತು. ಆದರೆ ಅವನ ಜೊತೆಗಾರರಾದ ಈ ಬಡಪಾಯಿ ಕೆಲಸಗಾರರಿಗೆ ಇಂಥ ಆಧಾರವಿದೆಯೆ? ಅವರಲ್ಲಿ ಹೆಚ್ಚಿನವರು ಈ ಗುಲಾಮಗಿರಿ ದುಡಿತಕ್ಕೆ ವರ್ಷಗಟ್ಟಲೆಯಿಂದ ಕಟ್ಟುಬಿದ್ದಿದ್ದರು. ಅವರಿಗೆ ಕೆಲಸವಿಲ್ಲವಾದರೆ ಅವರು ಬೀದಿಭಿಕಾರಿಗಳಾಗುವರು.

ಉದಾಹರಣೆಗೆ, ಉತ್ತರ ಪ್ರದೇಶದಿಂದ ಬಂದ ಒಬ್ಬ ಭಯ್ಯಾ ಇದ್ದ. ಹೊಟ್ಟೆಗಾಗಿ ಆತ ಊರುಬಿಟ್ಟು ೧೦೦೦ ಮೈಲು ದೂರದ ಇಲ್ಲಿಗೆ ಬಂದಿದ್ದ. ಆತ ನಿರಕ್ಷರಿ ಮಾತ್ರವಲ್ಲ, ಹುಂಬನೂ ಅರೆ ಹುಚ್ಚನೂ ಆಗಿದ್ದ. ಉಳಿದವರು ಅವನನ್ನು ಬಲು ಕಾಡಿಸುತ್ತಿದ್ದರು. ಅವನಿಗೆ ತೀರ ಕಠಿಣವಾದ ಕೆಲಸ ಕೊಡುತ್ತಿದ್ದರು. ಆದರೆ ಆ ಭಯ್ಯಾ ಬೇಸರಿಸುತ್ತಿರಲಿಲ್ಲ. ದಣಿಯುತ್ತಿರಲಿಲ್ಲ. ಆತ ಈ ಕಾರಖಾನೆಗೆ ಬಂದು ಬಹಳ ದಿನಗಳಾಗಿರಲಿಲ್ಲ. ಆತನನ್ನು ಕ್ಯಾಂಟೀನಿನಲ್ಲಿ ಯಾರೂ ಕಂಡಿರಲಿಲ್ಲ. ಯಾವುದೊ ಜನರಿಂದ ಕಿಕ್ಕಿರಿದಿದ್ದ ಚಾಳಿನಲ್ಲಿ ಆತ ಇರುತ್ತಿದ್ದ. ಕಡಲೆ ತಿಂದೇ ಕಾಲ ಕಳೆಯುತ್ತಿದ್ದ. ಅನ್ನ-ರೊಟ್ಟಿಗಾಗಿ ಅವನ ಬಳಿ ಹಣ ಸಾಕಷ್ಟಿರುತ್ತಿರಲಿಲ್ಲ. ಇದರಿಂದ ಆತನ ಮುಖ ಬಾತು ಊದಿಕೊಂಡಿತ್ತು. ಕಣ್ಣುಗಳಲ್ಲಿ ಪಿಚ್ಚುಗಟ್ಟಿತ್ತು.

ಬಲು ಹಳೆಯವನಾದ ಚಾಚಾ ಎಂಬ ಕೆಲಸಗಾರ ಅವನನ್ನು ಗದರಿಸಿದ, "ಮೂರ್ಖಾ, ಬರೇ ಕಡಲೆ ತಿನ್ನುತ್ತಿದ್ದರೆ ನೀನು ಸಾಯುವಿ. ನಿನಗೆ ಹೆಂಡತಿಯಿಲ್ಲ, ಮಕ್ಕಳಿಲ್ಲ. ಯಾಕೆ ಚೈನಿ ಮಾಡುವುದಿಲ್ಲ? ಅಂ! ನಿನ್ನ ಮೈ ಕಬ್ಬಿಣದಂತಿದ್ದರೂ ಹೀಗಾದರೆ ನೀನು ಬೇಗನೆ ಸಾಯುವೆ."

*

ಚಾಚಾ ಅಂದರೆ ಒಬ್ಬ ಪಠಾಣ. ಅವನ ನಿಜ ನಾಮ ರಹಮಾನ ಎಂದು. ಆತನಿಗೆ ೬೨ ವರ್ಷಗಳಾಗಿದ್ದವು. ಮೊದಲನೆಯ ಮಹಾಯುದ್ಧ ಕಾಲದಲ್ಲಿ ಆತ ಸೈನ್ಯದಲ್ಲಿ ಕೆಲಸ ಮಾಡಿದ್ದ. ಈಗಲೂ ಆತ ಗಟ್ಟಿಮುಟ್ಟಾಗಿಯೇ ಇದ್ದ. ಒಂದು ದಿನ ಆತ ತನ್ನ ಬಗ್ಗೆ ಒಂದಿಷ್ಟು ವಿಷಯಗಳನ್ನು ವಿಠ್ಠಲನಿಗೆ ಹೇಳಿದ. ಆತ ಯುದ್ಧದಿಂದ ಮರಳಿ ಬಂದಾಗ ಅವನ ಬಳಿ ಇದ್ದ ಹಣದಿಂದ

ಗಡಿ ಪ್ರಾಂತದಲ್ಲಿ ಜಮೀನು ಕೊಂಡಿದ್ದ. ಈ ವ್ಯಾಪಾರಕ್ಕೆ ಸಾಕ್ಷಿಗಳಿರಲಿಲ್ಲ. ಕಾಗದ ಪತ್ರ ವಿರಲಿಲ್ಲ. ಅಲ್ಲಿಯ ಜನರಿಗೆ ಕೋರ್ಟು ಕಚೇರಿ ಗಳಲ್ಲಿ ವಿಶೇಷ ನಂಬುಗೆಯಿದ್ದಿರಲಿಲ್ಲ. ಚಾಚಾಗೆ ಜಮೀನು ಮಾರಿದಾತ ಏನೊ ಒಂದು ಕ್ಷುಲ್ಲಕ ನೆಪ ತೆಗೆದು ಅವನನ್ನು ಜಮೀನಿನಿಂದ ಓಡಿಸಲು ಯತ್ನಿಸಿದ. ಒಂದು ದಿನ ಆತ, ಚಾಚಾನ ಬಳಿಗೆ ಬಂದು "ನನ್ನ ಜಮೀನಿನಿಂದ ದೂರವಿರು. ಇಲ್ಲ ವಾದರೆ ನಿನ್ನನ್ನು ಕೊಲ್ಲುತ್ತೇನೆ" ಎಂದ. ಚಾಚಾ ಅವನಿಗೆ ಎಚ್ಚರಿಕೆಯಿತ್ತ. ಆದರೂ ಆತ ಬಂದು ಚಾಚಾನ ಕೈಹಿಡಿದು "ಒಂದು ನಿಮಿಷ ಜಮೀನಿನ ಹೊರಗೆ ನಿಲ್ಲು. ನಿನಗೇನೊ ಹೇಳ ತಕ್ಕದ್ದಿದೆ" ಎಂದ.

"ನಿನ್ನ ಕೈ ತೆಗಿ" ಚಾಚಾ ಹೇಳಿದ. ಆದರೂ ಆ ಮನುಷ್ಯ ಕೈ ತೆಗೆಯಲಿಲ್ಲ. ಆಗ ಚಾಚಾ ಅವನನ್ನು ನಿರ್ದಯವಾಗಿ ಹೊಡೆದ. ಅವನನ್ನು ಗಾಯಗೊಳಿಸಿದ ಆರೋಪಕ್ಕಾಗಿ ಚಾಚಾನಿಗೆ ಮೂರು ವರ್ಷ ಶಿಕ್ಷೆಯಾಯಿತು.

ಜೇಲಿನಿಂದ ತಿರುಗಿ ಬಂದ ಬಳಿಕ ಚಾಚಾ ದರೋಡೆಖೋರನಾದ.

"ದರೋಡೆಖೋರನೇನೂ ಕಳ್ಳನಲ್ಲ" ಚಾಚಾ ಅಭಿಮಾನದಿಂದ ಹೇಳಿದ. "ಅದೊಂದು ವೃತ್ತಿ. ಸುಲಭದ್ದಲ್ಲ ಮತ್ತೆ. ದರೋಡೆಖೋರ ತಾನು ಅಡಗಿರುವ ಸ್ಥಳವನ್ನು ಹೆಂಡತಿ-ಮಕ್ಕಳಿಗೆ ಕೂಡ ಹೇಳಲಾರ. ಅವರನ್ನು ಕಾಣಬೇಕಾದರೆ ಆತ ಕದ್ದುಮುಚ್ಚಿ ಕಾಣಬೇಕು."

"ದರೋಡೆಖೋರರು ಎಲ್ಲಿರುತ್ತಾರೆ?"

"ಮತ್ತೆಲ್ಲಿದ್ದಾರು! ಗುಡ್ಡಗಳಲ್ಲಿ ಅಥವಾ ಅಡ ವಿಗಳಲ್ಲಿ."

"ಅವರನ್ನು ಕಾಣಲು ಯಾರೂ ಬರುವುದಿ ಲ್ಲವೆ?"

"ನನ್ನ ಅತಿ ಸಮೀಪದ ಬಂಧುಗಳು ಕೆಲ ಸಲ ನನ್ನನ್ನು ಕಾಣಲು ಬರುತ್ತಿದ್ದರು. ಅವರು ಕೂಡ ನನ್ನ ಎದುರುಗಡೆ ನಿಲ್ಲಬೇಕಿತ್ತೇ ಹೊರತು ನನ್ನ ಮಗ್ಗಲಲ್ಲಲ್ಲ."

"ಯಾಕೆ?"

"ದರೋಡೆಖೋರ ಯಾರನ್ನೂ ನಂಬುವುದಿಲ್ಲ. ಅವನನ್ನು ಹಿಡಿದುಕೊಟ್ಟವರಿಗೆ ಸರಕಾರ ಇನಾಮು ಕೊಡುತ್ತದೆ. ಆದ್ದರಿಂದ ಅವನ ಅತಿ ಸಮೀಪದ ಬಂಧು ಕೂಡ ಅವನಿಗೆ ದ್ರೋಹ ಬಗೆಯಬಹುದು. ಆದ್ದರಿಂದ ಅವರು ಎದುರು ಗಡೆಯೆ ನಿಲ್ಲಬೇಕು." ಚಾಚಾನ ಮುಖದಲ್ಲಿ ದರೋಡೆಖೋರನ ತೇಜ ಮಿನುಗುತ್ತಿತ್ತು.

*

ವಿಠ್ಠಲ ಲೆಕ್ಕಾಚಾರದಲ್ಲಿ ತಲ್ಲೀನನಾಗಿರುತ್ತಿದ್ದ. ತಾನು ತಿಂಗಳಿಗೆ ಕನಿಷ್ಠ ಹತ್ತು ರೂಪಾಯಿಗಳ ನ್ನಾದರೂ ಉಳಿಸಬಹುದು. ಕಷ್ಟಪಟ್ಟರೆ ೧೫ ರೂಪಾಯಿಗಳನ್ನು ಕೂಡ ಉಳಿಸಬಹುದು. ಅವನ ಕುಟುಂಬದ ಸಾಲದ ಮೊತ್ತ ೨೫೦ ರೂ. ಗಳಷ್ಟಿತ್ತು. ಪ್ರತಿ ತಿಂಗಳವೂ ತಾನು ಉಳಿಸಿ ದ್ದನ್ನು ಕಳಿಸಿದರೆ ಸಾಲ ಎರಡು ವರ್ಷಗಳಲ್ಲಿ ತೀರಿಹೋಗುವುದು.

ಮೊದಲನೆಯ ತಿಂಗಳ ಕೊನೆಗೆ ಆತ ೧೨ ರೂಪಾಯಿಗಳನ್ನು ಮನಿಆರ್ಡರಿನಿಂದ ಕಳಿಸಿ ದಾಗ ಆತನಿಗೆ ಬಹು ಸಂತೋಷವೆನಿಸಿತ್ತು. ತನ್ನ ತಾಯಿ, ಅಣ್ಣ ತಮ್ಮಂದಿರೆಲ್ಲ ತನ್ನ ಬಗ್ಗೆ ತಾಳಬಹುದಾದ ಅಭಿಮಾನವನ್ನು ಆತ ಕಲ್ಪಿಸಿ ಕೊಳ್ಳಬಲ್ಲವನಾಗಿದ್ದ. ಪೋಸ್ಟ್‌ಮನ್‌ನಿಂದ ಅವರು ಹಣ ಸ್ವೀಕರಿಸುವಾಗ ಅವರ ಮುಖ ಅರಳುವುದನ್ನು ನೋಡುವುದು ಸಾಧ್ಯವಿದ್ದಿದ್ದರೆ ಎಷ್ಟು ಚನ್ನಾಗಿರುತ್ತಿತ್ತು ಎಂದಾತನಿಗೆ ಅನಿ ಸಿತು. ಅವನಿಗೆ ತನ್ನ ಮನೆ, ಹೊಲ, ದನಕರು ಗಳ ನೆನಪಾಗಿ ಹೊಟ್ಟೆಯಲ್ಲಿ ಕಸವಿಸಿಯೆನಿಸಿತು. ಆದರೆ ಅಭಿಮಾನ ಅವನನ್ನು ಮನೆಗೆ ಮರಳಲು ಬಿಡಲಿಲ್ಲ. ಇಲ್ಲ. ಸಾಲ ತೀರುವವರೆಗೂ ಅವನು ಮನೆಗೆ ಹೋಗುವುದಿಲ್ಲ.

ದೃಢನಿರ್ಧಾರದಿಂದ ವಿಠ್ಠಲ ಕಾರಖಾನೆಯಲ್ಲಿ ಕೆಲಸ ಮಾಡುತ್ತಿದ್ದ. ನಾಲ್ಕು ತಿಂಗಳು ಕೆಲಸ ಮಾಡಿದಾಗ ಅವನಿಗೆ ಒಂದಿಷ್ಟು ದಣಿವಾದಂತಾ ಯಿತು. ಖಾನಾವಳಿಯ ಊಟ ಅವನಿಗೆ ಹಿಡಿ ಸುತ್ತಿರಲಿಲ್ಲ. ಒಳ್ಳೆಯ ಊಟದ ಸಲುವಾಗಿ ಯಾದರೂ ಮನೆಗೆ ಹೋದರೆ ತಪ್ಪಲ್ಲ ಎಂದವ ನಿಗೆ ಅನಿಸಿತು. ಮೊದಮೊದಲು ಅವನಿಗೆ ಕೆಲಸ ಮುಗಿಯುತ್ತ ಬಂದಂತೆ ವಿಪರೀತ ದಣಿವೆನಿಸು ತ್ತಿತ್ತು. ತುಸು ವಿಶ್ರಾಂತಿ ಹೊಂದಿದ ಮೇಲೆ ಮೊದಲಿನ ಉತ್ಸಾಹ ಮರಳುತ್ತಿತ್ತು. ಆದರೆ

ಈಗ ದಿನವಿಡೀ ದಣಿವೇ ಇರುತ್ತಿತ್ತು.

ಆತ ಜುಗುಪ್ಸೆಯಿಂದ "ಥುತ್! ಹೊಲಸು ಕೆಲಸ, ಹೊಲಸು ಅನ್ನ, ಹೊಲಸು ಜೀವನ" ಎಂದು ಕೊಳ್ಳುತ್ತಿದ್ದ. ಊಟ-ಕೆಲಸಗಳಿಗಿಂತಲೂ ಈ ಜೀವನದ ಬಗ್ಗೆ ಅವನಲ್ಲಿ ಹೆಚ್ಚು ತಿರಸ್ಕಾರ ಮೂಡುತ್ತಿತ್ತು. ಅವನು ಇಲ್ಲಿ ಜೀವಿಸುತ್ತಿದ್ದ ಬಗೆಯನ್ನು ಹೇಳಿದರೆ ಅವನ ಮನೆಯವರು ನಂಬುವಂತಿರಲಿಲ್ಲ. ವಿಠ್ಠಲ ಕಟ್ಟು ಕಥೆ ಹೇಳುತ್ತಿದ್ದಾನೆಂದೇ ಅವರು ತಿಳಿಯುತ್ತಿದ್ದರು. ಸಾಲ ತೀರುವ ವರೆಗೆ ಮಾತ್ರ ತಾನು ಕೆಲಸ ಮಾಡುತ್ತೇನೆ, ಆ ಮೇಲೆ ಮನೆಗೆ ಮರಳುತ್ತೇನೆ ಎಂದಾತ ತನ್ನ ಸಹಕಾರಿಗಳಿಗೆ ಹೇಳಿರಲಿಲ್ಲ. ತನ್ನ ಪಟ್ಟಣದ ಜೀವನದ ರೀತಿಯ ವಿಚಾರವನ್ನು ಆತ ಮನೆಯವರಿಗೆ ಬರೆದು ತಿಳಿಸಿರಲೂ ಇಲ್ಲ.

ಈಗಲೇ ಅವನು ಮನೆಗೆ ಹೋಗಿಬಿಟ್ಟರೆ ಹೇಗೆ? ಅವನೀಗಾಗಲೇ ಸಾಲದಲ್ಲಿ ಒಂದಿಷ್ಟನ್ನು ತೀರಿಸಿದ್ದ. ತಾನೇ ಎಲ್ಲ ಸಾಲ ತೀರಿಸುತ್ತೇನೆ ಎಂದವನು ಅಂದುಕೊಂಡಿದ್ದರೂ ಅವನೊಬ್ಬನೇ ಇಡೀ ಸಾಲಕ್ಕೆ ಹೊಣೆ ಎಂದೇನೂ ಇರಲಿಲ್ಲ. ಆದರೆ ಮನೆಗೆ ಹೋಗುವ ವಿಚಾರ ಬಂದಾಗಲೆಲ್ಲ ಅವನ ವಿವೇಕ "ನೀನು ಮಾತಿನಂತೆ ನಡೆಯುವವನಲ್ಲವೆ?" ಎಂದು ಕೇಳುತ್ತಿತ್ತು.

ಒಮ್ಮೊಮ್ಮೆಂದೊಮ್ಮೆ ಒಂದು ದಿನ ಆ ಕಾರಖಾನೆಯಲ್ಲಿ ಸಂಪು ನಡೆಯಿತು. ಕೂಲಿಕಾರ ಧುರೀಣರೇನೂ ಸಂಪಿನ ನಿರ್ಣಯ ಮಾಡಿರಲಿಲ್ಲ. ಮುಕಾದಮನೊಬ್ಬ ಒಬ್ಬ ಕೆಲಸಗಾರನನ್ನು ಪೀಡಿಸುತ್ತಿದ್ದ. ಆ ಕೆಲಸಗಾರನಿಗೆ ಅವನ ಮೇಲೆ ದ್ವೇಷವುಂಟಾಗಿತ್ತು. ಕೊನೆಗೆ ಮ್ಯಾನೇಜರ ಆ ಕೆಲಸಗಾರನನ್ನು ಕಿತ್ತಿಹಾಕಿ ಮುಕಾದಮನಿಗೆ ಸಹಾಯ ಮಾಡಿದ. ಆಗ ಎಲ್ಲ ಕೆಲಸಗಾರರು ಸಂಪು ಮಾಡಲು ನಿರ್ಧರಿಸಿ ಕೆಲಸ ಬಿಟ್ಟು ನಡೆದರು.

ಮ್ಯಾನೇಜರ ಅವರಿಗೆ ಹೇಳಿದ: "ಇನ್ನೈದು ನಿಮಿಷಗಳಲ್ಲಿ ಕೆಲಸಕ್ಕೆ ಬಾರದವರನ್ನೆಲ್ಲ ಕೆಲಸದಿಂದ ಕಿತ್ತಿ ಹಾಕಿಬಿಡುತ್ತೇನೆ."

ತಿರುಗಿ ಕೆಲಸಕ್ಕೆ ಹೋದ ಕೆಲವೇ ಕೆಲವರಲ್ಲಿ ವಿಠ್ಠಲನೂ ಒಬ್ಬನಾಗಿದ್ದ. ಉಳಿದವರಿಗೆ ಕಾರಖಾನೆ ಕಂಪೌಂಡ್ ಬಿಟ್ಟು ಹೊರಗೆ ಹೋಗಲ
ತಿಳಿಸಲಾಯಿತು.

ಕೆಲಸಕ್ಕೆ ಮರಳಿದವರಿಗಿಂತ ಬಿಟ್ಟು ಹೋ
ವರೇ ಹೆಚ್ಚು ಎಂದು ಕಂಡಾಗ ವಿಠ್ಠಲನಿಗೆ ಹೇ
ಹೇಗೊ ಆಯಿತು. ಮ್ಯಾನೇಜರ ಬೆದರಿಕೆ ಹಾ
ದೊಡನೆ ಎಲ್ಲರೂ ಕೆಲಸಕ್ಕೆ ಬರುವರೆಂದ
ವಿಠ್ಠಲ ಭಾವಿಸಿದ್ದ. ಇಷ್ಟೆಲ್ಲ ಜನ ಮ್ಯಾನೇಜರ
ಅಪ್ಪಣೆಯನ್ನು ಧಿಕ್ಕರಿಸುವರೆಂದು ಗೊತ್ತಿದ್ದ
ವಿಠ್ಠಲ ಕೂಡ ಕೆಲಸಕ್ಕೆ ಮರಳುತ್ತಿರಲಿಲ್ಲ.

ಎರಡು ತಾಸುಗಳ ವರೆಗೆ ಕಾರಖಾನೆ
ಕೆಲಸ ಸ್ಥಗಿತವಾಗಿತ್ತು. ಒಳಗಿನ ಮತ್ತು ಹೊ
ಗಿನವರಲ್ಲಿ ನಡೆದ ಸಂಧಾನದ ಮಾತುಕತೆಯ
ವಿಚಾರ ಅವನಿಗೆ ತಿಳಿದಿರಲಿಲ್ಲ. ಕೊನೆಗೆ ಹೊ
ಗಿನವರ ಜಯಘೋಷ ಅವನಿಗೆ ಕೇಳಿಸಿತು
ಹೊರಗಿದ್ದವರೆಲ್ಲ ಗದ್ದಲ ಮಾಡುತ್ತ ಒಳ
ಬಂದರು. ಸಂಪು ನಿಂತಿತ್ತು. ತೆಗೆದುಹಾಕಲ್ಪಟ್ಟ
ಕೆಲಸಗಾರ ಮತ್ತೆ ಸೇರಿಸಿಕೊಳ್ಳಲ್ಪಟ್ಟಿದ್ದ.

ಒಬ್ಬ ಕೆಲಸಗಾರ ವಿಠ್ಠಲನನ್ನು ಮರಾ
ಯಲ್ಲಿ ಬಯ್ಯತೊಡಗಿದ. ವಿಠ್ಠಲ ತನ್ನ ಅಜ್ಞಾ
ವನ್ನು ಹೇಳಿಕೊಂಡರೂ ಆತನೇನೂ ಕೇಳಲಿಲ್ಲ
ತಾನು ಸಂಪಿನಿಂದ ಹೊರಬಿದ್ದು ಇತರರ ಸಹಾ
ನುಭೂತಿಗೆರವಾದೆನೆಂದು ವಿಠ್ಠಲನಿಗೆ ತಿಳಿದು
ಹೋಯಿತು.

*

ಕೆಲವು ತಿಂಗಳ ನಂತರ ತಾಯಿ ಬೇನೆ ಬಿದ್
ದ್ದಾಳೆಂಬ ಪತ್ರ ವಿಠ್ಠಲನಿಗೆ ಬಂತು. ಅವಳಿ
ವಯಸ್ಸಾಗಿತ್ತು. ವಿಠ್ಠಲನೇ ಕೊನೆಯ ಮ
ನಾದ್ದರಿಂದ ಅವಳ ಪ್ರೀತಿ ಅವನ ಮೇ
ಹೆಚ್ಚಾಗಿತ್ತು

ಚಾಚಾನನ್ನು ಅವನು ಕೇಳಿದ "ಚಾಚಾ
ಅಮ್ಮನಿಗೆ ಶೀಕು. ನಾನು ಹೋಗಿ ನೋ
ಬೇಕು. ಏನು ಮಾಡಲಿ?"

"ಮುಕಾದಮನಿಗೆ ಹೇಳಿ ಹೋಗು. ಆದ
ರಜೆಯ ಮೇಲಿದ್ದಾಗ ನಿನಗೆ ಸಂಬಳ ಸಿಗು
ದಿಲ್ಲ."

"ಹಾಳಾಗಲಿ ಸಂಬಳ."

ಒಂದು ವಾರದ ರಜೆ ಪಡೆದು ವಿಠ್ಠಲ ಅಂದು
ಊರಿಗೆ ಹೋದ.

ಮನೆಗೆ ಬಂದಾಗ ತಾಯಿ ಮೊಮ್ಮಗಳೊಬ್ಬಳಿಗೆ ಉಣಿಸುತ್ತ ಬಾಗಿಲಲ್ಲೆ ಕುಳಿತಿದ್ದನ್ನಾತ ಕಂಡ. ಅವಳಿಗೆ ಜಡ್ಡಾದಂತೆ ಕಾಣಲಿಲ್ಲ.

"ಅಮ್ಮಾ, ಹೇಗಿದೆ ಪ್ರಕೃತಿ?" ಆತ ಕೇಳಿದ.

"ನನಗೇನಾಗಿದೆಯೊ? ಹೇಳಿಕೊಳ್ಳುವಂಥದೇನೂ ಆಗಿರಲಿಲ್ಲ. ಅಲ್ಲಾ, ನೀನು ಒಮ್ಮಿಂದೊಮ್ಮೆ ಏಕೆ ಬಂದುಬಿಟ್ಟೆ?"

ವಿಠ್ಠಲನಿಗೆ ಈ ಪ್ರಶ್ನೆಯಿಂದ ತುಂಬ ನೋವಾಯಿತು. "ಒಂದೇ ವಾರದ ರಜೆಯ ಮೇಲೆ ಬಂದಿದ್ದೇನೆ." ತಾಯಿ ಅದನ್ನು ಕೇಳಿ ಖಿನ್ನಳಾಗುವಳು ಎಂದಾತ ತಿಳಿದಿದ್ದ.

"ಹೀಗೇನು? ನಿನ್ನ ಮೆಚ್ಚಿನ ತಿಂಡಿಗಳನ್ನೆಲ್ಲ ಮಾಡಿ ಬಡಿಸುತ್ತೇನೆ ಅಷ್ಟರಲ್ಲಿ. ಅಲ್ಲಿಯ ಊಟ ಹೇಗಿದೆ?"

"ಕೇಳಬೇಡ. ಅದನ್ನು ತಿನ್ನಲಾಸಲ್ಲ."

ತಾಯಿಯ ಕರುಣಾಪೂರ್ಣ ದೃಷ್ಟಿಯಿಂದ ಅವನಿಗೆ ಹಾಯೆನಿಸಿತು.

ಅವನ ಹಿರಿಯಣ್ಣ ಅಷ್ಟರಲ್ಲಿ ಹೊರಗೆ ಬಂದು "ಏನೊ, ನಿನ್ನ ನೌಕರಿ ಮುಗಿದು ಹೋಯಿತೆ? ಮೊದಲೇ ಹೋಗಬೇಡೆಂದು ಹೇಳಿದ್ದೆ ನಾನು" ಎಂದ. ವಿಠ್ಠಲ ಬಂದದ್ದರಿಂದ ಅವನಿಗೆ ಅಸಮಾಧಾನವಾದಂತೆ ಕಂಡಿತು.

"ನಾನು ರಜೆಯ ಮೇಲೆ ಬಂದಿದ್ದೇನೆ. ನನ್ನ ನೌಕರಿಯಿಂದ ನಮಗೆಲ್ಲರಿಗೆ ಸಹಾಯುವಾಗಿದೆಯೆಂದು ನೀನು ಬಲ್ಲಿ. ಸಾಲದಲ್ಲಿ ಬಂದಿಷ್ಟನ್ನು ನಾವು ತೀರಿಸಿಲ್ಲವೆ?" ಎಂದು ವಿಠ್ಠಲ ತಾನು ಕಳುಹಿಸುತ್ತಿದ್ದ ಹಣದ ಪ್ರಸ್ತಾಪವನ್ನು ಅಪ್ರತ್ಯಕ್ಷವಾಗಿ ಎತ್ತಿದ. ಇದುವರೆಗೂ ಯಾರೂ ಆ ಮಾತನ್ನು ಎತ್ತಿರಲಿಲ್ಲ.

"ಓ! ಆ ಸಾಲವೆ? ಈ ರೀತಿ ಅದೆಂದೂ ತೀರಲಾರದು" ಅವನ ಅಣ್ಣ ಹೇಳಿದ.

"ಯಾಕಮ್ಮಾ?" ವಿಠ್ಠಲ ತನ್ನ ತಾಯಿಯನ್ನು ಕೇಳಿದ "ನಾನು ಕಳುಹಿಸಿದ ಹಣವನ್ನು ಸಾಲ ತೀರಿಸಲು ಉಪಯೋಗಿಸಲಿಲ್ಲವೆ?"

ತಾಯಿ ನಕ್ಕು ನುಡಿದಳು: "ಸಾಲ ತೀರಿಸಬೇಕೆಂದೇನೊ ಇದ್ದೆವು. ಆದರೆ ಅದು ಇದು ಒಂದು ಖರ್ಚಿನ ಬಾಬು ಬಂದುಬಿಟ್ಟಿತು. ಈಗ ನೀನು ದುಡಿಯಹತ್ತಿರುವುದರಿಂದ ಸಾಲ ತೀರುವುದರಲ್ಲಿ ಸಂಶಯವಿಲ್ಲ."

"ಅಂದರೆ ಸಾಹುಕಾರನಿಗೆ ಒಂದು ಕಾಸು ಕೂಡ ಕೊಡಲಿಲ್ಲವೊ?" ವಿಠ್ಠಲ ನೇರ ಪ್ರಶ್ನೆ ಹಾಕಿದ.

"ಇದು ವರೆಗಂತೂ ಕೊಟ್ಟಿಲ್ಲ."

"ನಾನು ಕಳಿಸಿದ ಹಣ ಏನಾಯಿತು?"

ತಾಯಿ ಅಸಹನೆಯಿಂದಲೆ ಹೇಳಿದಳು: "ನಾನೇನು ಅದನ್ನು ಚಲ್ಲಿ ಕೊಟ್ಟೆನೇನು? ನೀನು ಮೊದಲ ಸಲ ಹಣ ಕಳಿಸಿದಾಗ ಮೀಮು ಮತ್ತು ಅವಳ ಮನೆಯವರು ಬಂದರು. ಅವಳ ಬರಿಗೈ ನೋಡಲಾರದೆ ಬಳೆ ತೆಗೆಸಿಕೊಟ್ಟೆ. ಅವಳಿಗೆ ಕೊಟ್ಟ ಮೇಲೆ ಗೌರಿಯ ಮಗುವಿಗೂ ಕೊಡಬೇಕಾಯಿತು. ಹೆಣ್ಣು ಮಕ್ಕಳಿಗೆ ಮಾಡುತ್ತಾಳೆ, ಗಂಡು ಮಕ್ಕಳಿಗೆ ಇಲ್ಲ ಎಂದು ಜನರನ್ನಬಾರದೆಂದು ಅವರ ಮಕ್ಕಳಿಗೂ ಅದು ಇದು ಎಂದು ಕೊಡಿಸಿದೆ. ಹಣ ನನ್ನ ಹೆಸರಿಗೆ ಬರುತ್ತಿತ್ತೆಂದಮೇಲೆ ನನ್ನಿಷ್ಟದಂತೆ ನಾನು ಖರ್ಚು ಮಾಡಬಹುದೆಂದು ತಿಳಿದೆ. ಸಾಲ ತೀರಿಸಲು ಎಂದು ನೀನು ತಿಳಿಸಬೇಕಾಗಿತ್ತು."

*

ವಿಠ್ಠಲನಿಗೆ ತನ್ನ ಜನರಲ್ಲಿ ಬೇಸರವುಂಟಾಗಿತ್ತು. ತನ್ನ ಈ ಬಂಧುಗಳೆಲ್ಲ ಸ್ವಾರ್ಥಿಗಳು, ತನ್ನ ಭಾವನೆಯನ್ನು ಅರಿತುಕೊಳ್ಳದವರು ಎಂದವನಿಗನಿಸತೊಡಗಿತು. ಆರು ತಿಂಗಳ ನಂತರ ಅವನು ಮನೆಗೆ ಬಂದಿದ್ದರೂ ಯಾರಿಗೂ ಅವನನ್ನು ಕಂಡು ಸಂತೋಷವಾದಂತಿರಲಿಲ್ಲ. ಅವನು ಅವರೆಲ್ಲರದು ಕೂಡಿದಷ್ಟುದುಡಿದಿದ್ದರೂ ಯಾರೂ ಅಭಿಮಾನ ತೋರಿಸಿರಲಿಲ್ಲ. ಮತ್ತೆ ಅವನು ತನ್ನ ಸುಖದುಃಖ ನೋಡದೆ ಉಳಿಸಿ ಕಳಿಸಿದ್ದನ್ನು ಪೋಲುವೆಚ್ಚ ಮಾಡಿದ್ದರು.

ಅವನಿಗೆ ಕಾರಖಾನೆಯ ಜೀವನ ನೆನಪಾಯಿತು. ಅಲ್ಲಿ! ಅಲ್ಲಿ ತಮ್ಮಲ್ಲೊಬ್ಬನನ್ನು ಕೆಲಸದಿಂದ ತೆಗೆದುಹಾಕಿದರೆಂದು ಉಳಿದವರೆಲ್ಲರೂ ಕೆಲಸ ಬಿಟ್ಟು ಹೋಗಿದ್ದರು. ಅವರೇ ನಿಜವಾದ ಗಂಡಸರು. ತನ್ನ ಈ ಅಣ್ಣಂದಿರಲ್ಲ. ಇವರೆಲ್ಲರಿಗಿಂತ ಚಾಚಾ ಅವನನ್ನು ಹೆಚ್ಚು ಪ್ರೀತಿಸುತ್ತಿದ್ದ.

"ಆದರೆ ಇವರನ್ನುದೂರಿ ಪ್ರಯೋಜನವೇನು? ಅವರ ಜೀವನದ ರೀತಿಯೆ ಹಾಗಿದೆ. ನಾನೂ

ಕೂಡ ಆರು ತಿಂಗಳ ಹಿಂದೆ ಇವರಲ್ಲೊಬ್ಬನೇ ಆಗಿದ್ದೆ. ನಾನು ಇಲ್ಲಿರಲಾಗದು" ಎಂದು ಯೋಚಿಸಿದ ವಿಠ್ಠಲ.

ಮರುದಿನವೇ ಆತ ಹೊರಟ. "ಇಷ್ಟು ಬೇಗ ಹೊರಟೆಯಾ?" ಎಂದರು ಅವನ ಮನೆಯವರು. ಆದರೆ ಅವರ ಧ್ವನಿಯಲ್ಲೇನೂ ಅವನು ಇರಬೇಕೆಂಬ ಭಾವವಿರಲಿಲ್ಲ.

"ಹೌದು. ನಾನು ಹೋಗಬೇಕು. ನಾನಿಲ್ಲಿದ್ದರೆ ಪ್ರತಿದಿನವೂ ನನಗೆ ೧॥ ರೂಪಾಯಿ ನಷ್ಟವಾಗುತ್ತದೆ. ಅಮ್ಮನಿಗೆ ನೆಟ್ಟಗಾಗಿದೆಯೆಂದು ತಿಳಿದಿದ್ದರೆ ನಾನು ಬರುತ್ತಲೇ ಇರಲಿಲ್ಲ."

ಆತ ತಿರುಗಿ ಹೋದಾಗ ಕಾರಖಾನೆಯ ಶಾಶ್ವತ ಕೆಲಸಗಾರನಾಗಿಬಿಟ್ಟಿದ್ದ. ಪಟ್ಟಣದ ಜೀವನ ಅವನನ್ನು ತನ್ನಲ್ಲಿ ಲೀನಮಾಡಿಕೊಂಡುಬಿಟ್ಟಿತು. ಆ ಮೇಲೆ ಅವನು ತನ್ನ ಮನೆಯವರಿಗೆ ಹಣ ಕಳಿಸಲೇ ಇಲ್ಲ. *



## ತಾಯಿಯ ಹೃದಯ

ಮಹಾಭಾರತದ ಕೊನೆಯ ಘಟ್ಟ. ಅಭಿಮಾನ ಮೇರು, ಛಲದಂಕಮಲ್ಲನಾದ ದುರ್ಯೋಧನನು, ಊರುಭಂಗ, ಕಿರೀಟಭಂಗನಾಗಿ, ಕುರುಭೂಮಿಯ ರುದ್ರರಂಗದಲ್ಲಿ ಗತಪ್ರಾಣನಾಗುವುದರಲ್ಲಿದ್ದ. ಅಷ್ಟರಲ್ಲಿ ಸ್ವಾಮಿಸೇವಾನಿಷ್ಠನಾದ ಅಶ್ವತ್ಥಾಮನು ಪ್ರವೇಶಿಸಿ ಕೌರವನ ಕೊನೆಯ ಇಚ್ಛೆ ಯಾವುದೆಂದು ಕೇಳಿದ. ದುರ್ಯೋಧನನು ಭೀಮನ ತಲೆಯನ್ನು ಅಪೇಕ್ಷಿಸಿದನು.

ಅಶ್ವತ್ಥಾಮನು ಈಶ್ವರ ಶಕ್ತಿಯಿಂದ ಪಾಂಡವರ ಬಿಡಾರವನ್ನು ಪ್ರವೇಶಿಸಿ ದ್ರೌಪದಿಯ ಪಕ್ಕದಲ್ಲಿ ಮಲಗಿರುವ ಉಪಪಾಂಡವರನ್ನು ಪಾಂಡವರೆಂದೇ ಭ್ರಮಿಸಿ ಆ ಮಕ್ಕಳ ಶಿರಸ್ಸುಗಳನ್ನು ಕತ್ತರಿಸಿ ದುರ್ಯೋಧನನಲ್ಲಿಗೆ ಕೊಂಡೊಯ್ದನು.

ಇತ್ತ ದ್ರೌಪದಿಯು ಮಕ್ಕಳ ಸಂಹಾರದಿಂದ ಶೋಕತಪ್ತಳಾದಳು. ಭೀಮನು ಆ ಕೃತ್ಯಕ್ಕೆ ಕಾರಣನಾದ ಅಶ್ವತ್ಥಾಮನನ್ನು ಎಳೆತಂದು ದ್ರೌಪದಿಯ ಎದುರಿಗೆ ನಿಲ್ಲಿಸಿ, "ಹೇಳು ದ್ರೌಪದಿ, ನಮ್ಮ ಮಕ್ಕಳನ್ನು ಮೋಸದಿಂದ ಕೊಂದ ಇವನನ್ನು ಯಾವ ರೀತಿಯಿಂದ ಸಂಹರಿಸಿದರೆ, ನಿನ್ನ ಮನಸ್ಸು ಸಮಾಧಾನವಾಗುತ್ತದೆ?" ಎಂದು ಕೇಳಿದನು.

ಅದಕ್ಕೆ ದ್ರೌಪದಿಯು ಹೇಳಿದಳು: "ಭೀಮಸೇನ, ಮಕ್ಕಳನ್ನು ಕಳೆದುಕೊಂಡುದುದರಿಂದ ಉಂಟಾದ ಪರಿತಾಪ, ವೇದನೆ, ಅದಾವ ರೀತಿ ಹೆತ್ತ ತಾಯಿಗೆ ಸಹಿಸಲಸಾಧ್ಯವಾದದ್ದೆಂದು ನಾನೀಗ ಅರಿತಿದ್ದೇನೆ. ಅಶ್ವತ್ಥಾಮನನ್ನು ಸಂಹರಿಸಿ ಅವನ ತಾಯಿಯಾದ ಕೃತ್ತಿಕಾದೇವಿಗೆ ಅಂಥ ದುಃಖವನ್ನು ಉಂಟುಮಾಡುವುದು ಬೇಡ. ಆ ದುಃಖ ನನಗೊಬ್ಬಳಿಗೇ ಇರಲಿ."

—ಸಂಗ್ರಹ: ಹೆಚ್. ಸಿ. ಸುಬ್ಬರಾವ



ಈಚೆಗಿನ ನ್ಯಾಯೇತಿಹಾಸದ ಅತ್ಯಂತ ರಹಸ್ಯಪೂರ್ಣವಾದ ಪ್ರಕರಣ

# ಈ ಡಾಕ್ಟರರು ಶ್ರೀಮಂತ ವಿಧವೆಯನ್ನು ಕೊಂದರೆ?


ಮಾಧವ ನಾ. ಮಹಿಷಿ,
ಬಿ. ಎ., ಎಲ್ ಎಲ್. ಬಿ.


"ಲಕ್ಷ್ಮೀಬಾಯಿ, ಏನೇ ಆದರೂ ನಾಡಿದು ನಮ್ಮಲ್ಲಿ ಬರಲು ನೀವು ತಪ್ಪಬಾರದು" ಚಂಪೂತಾಯಿ ಗೋಖಲೆ ಆಗ್ರಹಪಡಿಸಿದರು.

"ಇಷ್ಟೊಂದು ಪ್ರೀತಿಯಿಂದ ನೀವು ಕರೆಯುವಾಗ ನಾನು ಬರದಿರುವುದು ಸಾಧ್ಯವೆ? ನಾಡಿದು ಮಧ್ಯಾಹ್ನ ಮೂರು ಗಂಟೆಗೆ ಮುಂಬಯಿಯಲ್ಲಿ ಡಾ. ಸಾಠೆಯವರನ್ನು ಕಾಣಬೇಕಾಗಿದೆ. ನಂತರ ಸಂಜೆಯ ಮೇಲುಗಾಡಿಯಿಂದಲೇ ಹೊರಟು ಆ ರಾತ್ರಿ ಎಷ್ಟು ಹೊತ್ತಾದರೂ ಬಂದ ನಿಮ್ಮಲ್ಲಿ ಊಟ ಮಾಡಿ ಹೋಗುತ್ತೇನೆ. ನಿಮ್ಮ ಮಗನ ಹುಟ್ಟು ಹಬ್ಬದ ಊಟವನ್ನು ನಾನೆಂತು ತಪ್ಪಿಸಲಿ?"

ಚಂಪೂತಾಯಿ ಹೊರಟು ಹೋದ ಮೇಲೆ ಲಕ್ಷ್ಮೀಬಾಯಿ ಕರ್ವೆ ತನ್ನ ವಕೀಲ ವಿಶ್ವನಾಥ ಕರಂದೀಕರರನ್ನು ಕಂಡು ಬರಬೇಕೆಂದು ನಡೆದಳು. ಅಂದು ೧೯೫೬ ನವೆಂಬರ್ ೧೧. ಮರುದಿನ ರಾತ್ರಿಯೇ ಅವಳು ತನ್ನ ಖಾಸ-ಚಿಕಿತ್ಸಕರಾದ ಡಾ. ಅನಂತ ಲಾಗು ಅವರೊಂದಿಗೆ ಮುಂಬಯಿಗೆ ಹೊರಡುವುದೆಂದು ನಿಶ್ಚಯವಾಗಿತ್ತು. ಆದರೆ ಅವಳ ಮಲಮಗ ವಿಷ್ಣು ಆರಂಭಿಸಿದ್ದ ಖಟ್ಲೆಯ ವಿಚಾರಣೆ ೧೩ ರಂದೇ ಪ್ರಾರಂಭವಾಗಲಿತ್ತು. ಆಗ ಕೋರ್ಟಿನಲ್ಲಿ ತಾನಿರಲೇಬೇಕೆಂದೇನಿಲ್ಲವೆಂದು ವಕೀಲರು ಹೇಳಿದಾಗ ಅವಳಿಗದೆಷ್ಟು ಹಗುರೆನಿಸಿತು!

ಆ ರಾತ್ರಿಯಿಡಿ ಲಕ್ಷ್ಮೀಬಾಯಿಗೆ ತನ್ನ ಮರು ದಿನದ ಮುಂಬಯಿ ಪ್ರಯಾಣದ ವಿಚಾರವೇ ವಿಚಾರ. ೧೩ ರಂದು ಮಧ್ಯಾಹ್ನ ಡಾ. ಸಾಠೆಯವರನ್ನು ಕಾಣಬೇಕಿದ್ದರೆ ಅಂದೇ ಮುಂಜಾನೆಯ ಶೀಘ್ರಗತಿಯ ಗಾಡಿಗೆ ಹೊರಟರಾಗುವುದಿಲ್ಲವೆ? ಹಿಂದಿನ ರಾತ್ರಿಯ ಮಂದಗಾಮಿ ಪೆಸೆಂಜರ್ ಗಾಡಿಗೆ ಹೊರಟು ಬೆಳತನಕ ಗಾಡಿಯಲ್ಲೇ ಕಳೆಯಬೇಕೇಕೆ? ಡಾಕ್ಟರರನ್ನು ಮರುದಿನ ಕೇಳಿಯೇ ಬಿಡಬೇಕೆಂದು ನಿರ್ಧರಿಸಿಕೊಂಡು ನಿದ್ರೆಹೋದಳು ಲಕ್ಷ್ಮೀಬಾಯಿ.

ಮರುದಿನವೂ ಎಂದಿನಂತೆಯೇ ಬೆಳಗಾಯಿತು ಹಿಂದಿನ ರಾತ್ರಿ ತಾನು ಮನದಲ್ಲಿಯೇ ಮಾಡಿಕೊಂಡಿದ್ದ ನಿರ್ಧಾರದ ನೆನಪೇನೊ ಲಕ್ಷ್ಮೀಬಾಯಿಗೆ ಬಂತು. ಆದರೆ ಹಾಗೆಂದು ಡಾಕ್ಟರರನ್ನು ತಟ್ಟನೆ ಕೇಳಿಬಿಡಲು ಮನಸ್ಸಾಗಲಿಲ್ಲ. ಸಮಯ ಸರಿದಂತೆ ಆ ನಿರ್ಧಾರದ ಹಿಂದಿನ ಒತ್ತಡವೂ ಕರಗಲಾರಂಭಿಸಿತು. ಕೊನೆಗೆ ಏನೊ ಕಾರಣಕ್ಕಾಗಿ ಡಾಕ್ಟರರೇ ಅವಳಲ್ಲಿಗೆ ಬಂದಾಗ ರಾತ್ರಿ ಗಾಡಿಗೆಯೆ ಹೊರಡಲು ಅವರು ನಿರ್ಧರಿಸಿರುವುದಕ್ಕೆ ಒಳ್ಳೆಯ ಕಾರಣವೇ ಇದ್ದಿರಬೇಕೆಂದು ಅವಳಿಗೆನಿಸಿಬಿಟ್ಟಿತು.

ಆ ಮುಂಬಯಿ ಪ್ರವಾಸದಿಂದ ಲಕ್ಷ್ಮೀಬಾಯಿ ಮರಳಲೇ ಇಲ್ಲ. ಅವಳ ಮಿತ್ರಳಾದ ಚಂಪೂತಾಯಿಯ ಮಗುವಿನ ಹುಟ್ಟುಹಬ್ಬ ಲಕ್ಷ್ಮೀ-ಬಾಯಿ ಇಲ್ಲದೇನೇ ನಡೆದುಹೋಯಿತು.

ನವೆಂಬರ್ ೧೩ ರಂದು ಸಂಜೆಗೆ ಡಾ. ಲಾಗು ಒಬ್ಬರೇ ಪುಣೆಗೆ ಮರಳಿದರು. ಆಂದು ಅವರೊಡನೆಯೆ ಲಕ್ಷ್ಮೀಬಾಯಿ ಏಕೆ ಮರಳಲಿಲ್ಲವೆಂಬ ಸಮಸ್ಯೆಗೆ ಉತ್ತರವೆಂಬಂತೆ ಲಕ್ಷ್ಮೀಬಾಯಿಯಿಂದ ಕೆಲ ದಿನಗಳ ನಂತರ ಅವಳ ಸಂಬಂಧಿಕರಿಗೆ ವಿಚಿತ್ರ ಪತ್ರಗಳು ಬರಲಾರಂಭಿಸಿದವು. ಆಕೆ ಉತ್ತರ ಭಾರತದಲ್ಲಿ ತೀರ್ಥಯಾತ್ರೆಯಲ್ಲಿರುವುದಾಗಿ ಅವುಗಳಲ್ಲಿ ಬರೆಯಲಾಗಿತ್ತು. ಪತ್ರಗಳು ಉತ್ತರ ಭಾರತದ ಬೇರೆ ಬೇರೆ ದೂರದೂರದ ಊರುಗಳಿಂದ ಬರುತ್ತಿದ್ದವು. ನವೆಂಬರ್ ೧೩ ರ ನಂತರ ಆಕೆಯನ್ನು ತಾವು ಹಲವಾರು ಸಲ ಕಂಡಿರುವುದಾಗಿಯೂ ಆಕೆ ಆರೋಗ್ಯದಿಂದಿರುವುದಾಗಿಯೂ ಡಾ. ಲಾಗು ಅನೇಕರೆದುರಿಗೆ ಆಗಲೇ ಹೇಳಿದ್ದರು.

ಲಕ್ಷ್ಮೀಬಾಯಿಯ ಸಂಬಂಧಿಕರಿಗೆ ಇದರಲ್ಲೇನೋ ಹುಳುಕಿರಬೇಕೆನಿಸಿತು. ಅವರ ಸಂಶಯ ದೃಷ್ಟಿ ಡಾ. ಲಾಗುರತ್ತ ಹೊರಳಿತು.

ಅನಂತ ಚಿಂತಾಮಣ ಲಾಗು ಅನೇಕ ವರುಷಗಳಿಂದ ಪುಣೆಯಲ್ಲಿ ಪ್ರ್ಯಾಕ್ಟೀಸ್ ಮಾಡುತ್ತಿದ್ದ ಡಾಕ್ಟರ್. ಅವರ ಪ್ರ್ಯಾಕ್ಟೀಸ್ ಚೆನ್ನಾಗಿದ್ದರೂ ಇತ್ತೀಚಿನ ಕೆಲ ವರುಷಗಳಿಂದ ವಿಧವೆಯಾದ ಲಕ್ಷ್ಮೀಬಾಯಿ ಕರ್ವೆಯ ಕುಟುಂಬ ವೈದ್ಯರೆಂದು ಅವಳ ಶುಶ್ರೂಷೆಯಲ್ಲಿಯೆ ಅವರ ಹೆಚ್ಚಿನ ವೇಳೆ ವ್ಯಯವಾಗುತ್ತಿತ್ತು. ಅಂತೆಯೇ ಜನ ಅವರಿಬ್ಬರ ಬಗ್ಗೆ ಆಡಿಕೊಳ್ಳಲಾರಂಭಿಸಿದ್ದರು.

೧೯೨೨ ರಲ್ಲಿ ೧೧ ವರುಷದವಳಿದ್ದಾಗ ಅನಂತ ಕರ್ವೆಯೆಂಬ ವಿಧುರನೊಡನೆ ಲಕ್ಷ್ಮೀಬಾಯಿಯ ಮದುವೆಯಾಗಿತ್ತು. ಅನಂತನಿಗೆ ಮೊದಲನೆಯ ಹೆಂಡತಿಯಿಂದ ವಿಷ್ಣು ಎಂಬ ಮಗನಿದ್ದನು.

ಅನಂತ ಕರ್ವೆ ಪುಣೆಯಲ್ಲಿ ವ್ಯಾಪಾರಿಯಾಗಿದ್ದು ಸಾಕಷ್ಟು ಶ್ರೀಮಂತನೆನಿಸಿದ್ದನು. ಶುಕ್ರವಾರ ಪೇಟೆಯ ೯೩-೯೫ ನಂಬರಿನ ಮನೆ ಅವನದಾಗಿತ್ತು. ಲಕ್ಷ್ಮೀಬಾಯಿಗೆ ರಾಮಚಂದ್ರ ಹಾಗೂ ಪುರುಷೋತ್ತಮ (ಅರವಿಂದ) ಎಂಬ ಎರಡು ಗಂಡು ಮಕ್ಕಳಾದವು.

೧೯೪೫ ರಲ್ಲಿ ಅನಂತ ಕರ್ವೆ ಪ್ಲುರಸಿಯಿಂದ ನಿಧನಹೊಂದಿದನು. ಡಾ. ಲಾಗು ಅವರೇ ನಿಧನದ ವರೆಗೆ ಅವನ ಶುಶ್ರೂಷೆ ಮಾಡಿದ್ದರು.

ಅನಂತ ಕರ್ವೆ ತನ್ನ ನಿಧನದ ಮೊದಲೇ ಹಿರಿಮಗ ವಿಷ್ಣುವಿಗೆ ३೦,೦೦೦ ರೂಪಾಯಿಗಳನ್ನಿತ್ತು ವ್ಯಾಪಾರದಲ್ಲಿ ತೊಡಗಿಸಿದ್ದನು. ಮೃತ್ಯುಪತ್ರದ ಮೂಲಕ ಲಕ್ಷ್ಮೀಬಾಯಿ, ರಾಮಚಂದ್ರ ಹಾಗು ಅರವಿಂದರಿಗೆ ತನ್ನ ಉಳಿದ ಆಸ್ತಿಯನ್ನು ಹಂಚಿದ್ದನು. ಲಕ್ಷ್ಮೀಬಾಯಿ ತನ್ನ ಗಂಡನಿಂದ ಬಂದ ಆಸ್ತಿಯಲ್ಲದೆ ೧೯೪೭ ರಲ್ಲಿ ತನ್ನ ತಾಯಿಯಿಂದ ೬೦ ತೊಲೆ ಬಂಗಾರ, ೨೫,೦೦೦ ರೂಪಾಯಿ ಬೆಲೆ ಬಾಳುವ ಶೇರುಗಳನ್ನೂ ಪಡೆದಿದ್ದಳು.

ಲಕ್ಷ್ಮೀಬಾಯಿ ತನ್ನ ಇಬ್ಬರು ಮಕ್ಕಳೊಂದಿಗೆ ಅದೇ ಮನೆಯಲ್ಲಿದ್ದರೂ ರಾಮಚಂದ್ರನು ತನ್ನ

ತಾಯಿಯೊಂದಿಗೆ ಭಿನ್ನಾಭಿಪ್ರಾಯವುಂಟಾಗಿದ್ದರಿಂದ ಅದೇ ಮನೆಯಲ್ಲಿ ಬೇರೆ ಇರತೊಡಗಿ ಹೋಟಲಿನಲ್ಲಿ ಉಣ್ಣಲಾರಂಭಿಸಿದ. ಅವನು ಹಾಗೆ ಮಾಡುವುದಕ್ಕೆ ಕಾರಣ ತನ್ನ ತಾಯಿಯ ಮೇಲಿದ್ದ ಡಾ. ಲಾಗು ಅವರ ವರ್ಚಸ್ಸು ಎಂದು ಅವನು ನಂತರ ನ್ಯಾಯಾಲಯದಲ್ಲಿ ನುಡಿದನು. ೧೯೫೨ ರಲ್ಲಿ ರಾಮಚಂದ್ರ ಸೈನ್ಯವನ್ನು ಸೇರಿ ಪುಣೆಯಿಂದ ಹೊರಟುಹೋದನಾದರೂ ಆಗೀಗ ಬಂದು ತಾಯಿಯನ್ನು ಕಾಣುತ್ತಿದ್ದನು. ಮೇ ೧೯೫೬ ರಲ್ಲಿ ಲಕ್ಷ್ಮೀಬಾಯಿ ಅವನಿಗೆ ಮದುವೆ ಮಾಡಿದಳು.

ಅನಂತ ಕರ್ವೆಯ ನಿಧನದ ನಂತರ ಡಾ. ಲಾಗು ಅವರ ಬಗ್ಗೆ ಲಕ್ಷ್ಮೀಬಾಯಿಯ ವಿಶ್ವಾಸ ಕ್ರಮೇಣ ಹೆಚ್ಚುತ್ತ ನಡೆದು ಅವಳ ಹಣಕಾಸು ಹಾಗು ಇತರ ವ್ಯವಹಾರಗಳನ್ನು ಸಹಿತ ಅವರೇ ನೋಡಿಕೊಳ್ಳಲಾರಂಭಿಸಿದ್ದರು.

ಅರವಿಂದ ಕೂಡ, ನೌಕರಿ ದೊರೆತುದರಿಂದ ೧೯೫೩ ರಲ್ಲಿ ಪುಣೆಯನ್ನು ಬಿಡಬೇಕಾಯಿತು. ಜನೆವರಿ ೧೯೫೪ ರಲ್ಲಿ ಅವನು ತಾಯಿಯನ್ನು ಕಾಣಲೆಂದು ಕೆಲ ದಿನಗಳ ಮಟ್ಟಿಗೆ ಪುಣೆಗೆ ಬಂದಾಗ ಒಮ್ಮೆಲೆ ಅಸ್ವಸ್ಥನಾದನು. ಡಾ. ಲಾಗು ಅವನ ಆರೈಕೆಯನ್ನಾರಂಭಿಸಿದರು. ಜನೆವರಿ ೧೪ ರಂದು ಅವನು ನಿಧನ ಹೊಂದಿದನು. ಆಗ ಅವನ ಮರಣಕ್ಕೆ ವಿಷವೇ ಕಾರಣವೆಂಬ ಬಲವಾದ ವದಂತಿಯಿತ್ತು.

ಅರವಿಂದ ಅವಿವಾಹಿತನಾಗಿಯೇ ತೀರಿಕೊಂಡದ್ದರಿಂದ ಅವನ ಆಸ್ತಿಗೆಲ್ಲ ಲಕ್ಷ್ಮೀಬಾಯಿಯೇ ಬಾಧ್ಯಸ್ಥಳಾದಳು. ಇದರಿಂದ ಇನ್ನೂ ಸಿರಿವಂತಳಾದ ಈ ದುರ್ದೈವಿ ಮಹಿಳೆಗೆ ಏಕಾಂತವೇ ಗತಿಯಾಗಿ ತನ್ನ ದುಃಖಶಮನಕ್ಕಾಗಿ ಡಾ. ಲಾಗು ಅವರನ್ನು ಇನ್ನೂ ಹೆಚ್ಚಾಗಿ ಅವಲಂಬಿಸಲಾರಂಭಿಸಿದಳು. ಮುಂದೆ ೧೯೫೫ ರಲ್ಲಿ ಡಾ. ಲಾಗು ಅವಳ ಮನೆಯಲ್ಲಿಯ ದೊಡ್ಡ ಹಾಲೊಂದನ್ನು ತಮ್ಮ ಖಾಸಗಿ ಉಪಯೋಗಕ್ಕಾಗಿ ಬಾಡಿಗೆ ಹಿಡಿದರು. ಆ ಸುಮಾರಿಗೆ ಲಕ್ಷ್ಮೀಬಾಯಿಯು ಸುಮಾರು ೮೦,೦೦೦ ರೂಪಾಯಿ ಬೆಲೆ ಬಾಳುವ ಆಸ್ತಿಗೆ ಒಡತಿಯಾಗಿದ್ದಳು.

೧೯೩೬ ರಿಂದಲೂ ಕ್ಷಯ, ಮಧುಮೇಹ, ಹಿಸ್ಟಿರಿಕಲ್ ಫಿಟ್ಸ್ ಮೊದಲಾದ ಒಂದಿಲ್ಲೊಂದು ರೋಗ ಅವಳನ್ನು ಕಾಡುತ್ತಿದ್ದರೂ ೧೯೪೮ ರಲ್ಲೊಂದು ಹಾಗು ೧೯೫೦ ರಲ್ಲಿನ್ನೊಂದು ಶಸ್ತ್ರಕ್ರಿಯೆಯಿಂದಾಗಿ ೧೯೫೬ ರಲ್ಲಿ ಸಾಕಷ್ಟು ಆರೋಗ್ಯವಂತಳೇ ಆಗಿದ್ದಳು. ತನ್ನ ಅಡಿಗೆಯನ್ನು ತಾನೇ ಮಾಡಿಕೊಳ್ಳುತ್ತಿದ್ದುದಲ್ಲದೆ ನಿತ್ಯದ ಕೆಲಸಗಳನ್ನೆಲ್ಲ ಸಾಮಾನ್ಯ ಆರೋಗ್ಯವಂತ ಸ್ತ್ರೀಯಂತೆಯೆ ನಿರ್ವಹಿಸುತ್ತಿದ್ದಳು. ಅವಳ ಮಧುಮೇಹ ಕೂಡ ನಿಯಂತ್ರಣದಲ್ಲಿತ್ತು. ಆದರೂ ಡಾ. ಲಾಗುರವರು ಮನವೊಲಿಸಿದ್ದರಿಂದ ೧೩ ನವೆಂಬರ್ ೧೯೫೬ ರಂದು ಮಧ್ಯಾಹ್ನ ೩-೩೦ ಕ್ಕೆ ಮುಂಬಯಿಯ ತಜ್ಞ ಡಾ. ಸಾಠೆಯವರನ್ನು ಕಾಣಲು ಒಪ್ಪಿಕೊಂಡಿದ್ದಳು.

ಉತ್ತರ ಭಾರತದಿಂದ ಬರುತ್ತಿದ್ದ ಅವಳ ಪತ್ರಗಳಲ್ಲಿ ಮೊದಮೊದಲು ವಿಶೇಷವೇನೂ ಇರುತ್ತಿರಲಿಲ್ಲವಾದರೂ ಕೆಲ ತಿಂಗಳುಗಳ ನಂತರ ತಾನು ಜೋಶಿಯೆಂಬವರೊಡನೆ ವಿವಾಹವಾಗಿರುವುದಾಗಿಯೂ ಜಯಪುರದ ಹತ್ತಿರ ರಾಠೋಡಿಯಲ್ಲಿ ಹೊಸ ಗಂಡನೊಡನೆ ಸುಖವಾಗಿರುವುದಾಗಿಯೂ ಅನೇಕರಿಗೆ ಪತ್ರಗಳು ಬಂದವು. ಅವುಗಳಲ್ಲಿ ಅವಳು ತಾನು ಪುಣೆಗೆ ಮರಳಲು ಇಚ್ಛಿಸುತ್ತಿಲ್ಲವೆಂದೂ ಯಾರೂ ತನ್ನನ್ನು ಶೋಧಿಸಲು ಪ್ರಯತ್ನಿಸಬಾರದೆಂದೂ ತಿಳಿಸಿದ್ದಳು. ಒಂದು ವರ್ಷದ ನಂತರ ಪೋಲೀಸರು ಶೋಧಿಸಿದಾಗ ರಾಠೋಡಿ ಎಂಬ ಊರೇ ಪ್ರಪಂಚದಲ್ಲಿರಲಿಲ್ಲ.

ಎಂದೋ ತಾರುಣ್ಯಕ್ಕೆರವಾಗಿದ್ದ ಲಕ್ಷ್ಮೀಬಾಯಿಯ ಜೀವನದ ದಿಕ್ಕು ಈ ರೀತಿ ಬದಲಾದುದು ಅವಳ ಪರಿಚಯದವರಿಗೆಲ್ಲ ತುಂಬ ಆಶ್ಚರ್ಯವನ್ನುಂಟುಮಾಡಿತು. ಮನೆಯಲ್ಲಿ ಅವಳು ವಾಸಿಸುತ್ತಿದ್ದ ಕೋಣೆಗಳಿಗೆ ಹೋಗಿ ನೋಡಿದಾಗ ಮೊದಮೊದಲು ಅವುಗಳಿಗೆ ಕೀಲಿ ಇರುತ್ತಿತ್ತು. ಆದರೆ ಕೆಲ ದಿನಗಳಲ್ಲಿಯೆ ಕೀಲಿಗಳು ತೆರೆಯಲ್ಪಟ್ಟು ಮನೆಯಲ್ಲಿಯ ವಸ್ತುಗಳು ಒಂದೊಂದಾಗಿ ಮಾಯವಾಗತೊಡಗಿದವು. ಇದರಿಂದ ಜನರಿಗೆ ಸಂಶಯ ಬಲವತ್ತರವಾದರೂ ಅದರ ನಿವಾರಣೆಗಾಗಿ ಅವಳಿಂದ ತಾನೇ ಗುಪ್ತವಾಗಿ ಬಂದು ತನ್ನ ವಸ್ತುಗಳನ್ನೊಯ್ಯುತ್ತಿರುವ

ದಾಗಿ ಪತ್ರಗಳು ಬಂದುದರಿಂದ ಅವರು ಬೆರಗಾಗುತ್ತಿದ್ದರು.

ಒಂದು ವರುಷದ ನಂತರವೂ ಲಕ್ಷ್ಮೀಬಾಯಿ ಪುಣೆಗೆ ಮರಳಿ ಬಾರದಿರಲು ಅವಳ ಸಂಬಂಧಿಕರು ಚಿಂತೆಗೀಡಾದರು. ೧೯೫೭ ರ ಡಿಸೆಂಬರ್‌ನಲ್ಲಿ ಜಿ. ಡಿ. ಭಾವೆಯೆಂಬವರು ಮುಂಬಯಿಯ ಮುಖ್ಯಮಂತ್ರಿಗಳಿಗೊಂದು ಪತ್ರ ಬರೆದು ಈ ಬಗ್ಗೆ ದೂರಿಕೊಂಡರು. ಮುಂದೆ ಫೆಬ್ರುವರಿ ೧೯೫೮ ರಲ್ಲಿ ಡಾ. ಜಿ. ಎನ್. ದಾತಾರರೆಂಬವರು ಸಹ ಮುಖ್ಯಮಂತ್ರಿಗಳಿಗೆ ಈ ಕುರಿತು ಬರೆದು ವಿಚಾರಣೆಯಾಗಬೇಕೆಂದು ಒತ್ತಾಯಪಡಿಸಿದರು. ತತ್ಪರಿಣಾಮವಾಗಿ ಪುಣೆಯ ಸಿ. ಐ. ಡಿ. ಡೆಪ್ಯುಟಿ ಸುಪರಿಂಟೆಂಡೆಂಟ್ ಶ್ರೀ ಧೋಂಡೆಯವರಿಗೆ ಈ ಪ್ರಕರಣ ಒಪ್ಪಿಸಲ್ಪಟ್ಟಿತು.

ಡೆ. ಸುಪರಿಂಟೆಂಡೆಂಟ್ ಧೋಂಡೆಯವರ ತಪಾಸಣೆಯಲ್ಲಿ ನಿಗೂಢ ತಥ್ಯಗಳು ಅವರಿಗೆದುರಾದವು. ಲಕ್ಷ್ಮೀಬಾಯಿ ಕರ್ವೆ ಪುಣೆಯಿಂದ ಕೊನೆಯದಾಗಿ ಅಸ್ತಂಗತಳಾದ ಮರುದಿನವೇ ಒಬ್ಬ ಹೆಂಗಸಿನ ಮರಣದ ಸಂಬಂಧದಲ್ಲಿ ಡಾ. ಲಾಗು ಅವರ ಹೆಸರು ಉಲ್ಲೇಖಿತವಾದದ್ದು ಮುಂಬಯಿ ಮತ್ತು ಪುಣೆ ಪೋಲೀಸ್ ವರದಿಗಳಲ್ಲಿ ಅವರಿಗೆ ಸಿಕ್ಕಿತು. ಆದರೆ ಆ ಹೆಂಗಸಿನ ಹೆಸರು ಲಕ್ಷ್ಮೀಬಾಯಿ ಕರ್ವೆ ಎಂದಿರಲಿಲ್ಲ. ಆದರೂ ಧೋಂಡೆಯವರು ಆ ಪ್ರಕರಣದ ವೈಚಿತ್ರ್ಯದಿಂದ ಪ್ರೇರಿತರಾಗಿ ಅದರ ತಳ ಶೋಧಿಸಿದರು.

ನವಂಬರ್ ೧೩, ೧೯೫೬ ರಂದು ನಸುಕಿನ ೫-೪೫ ರ ಹೊತ್ತಿಗೆ ಮುಂಬಯಿಯ ಗೋಕುಲದಾಸ ತೇಜಪಾಲ ಆಸ್ಪತ್ರೆಗೆ ಡಾ. ಲಾಗು ಎಂಬವರು ಟ್ಯಾಕ್ಸಿಯಲ್ಲಿ ಅಪ್ರಜ್ಞಾವಸ್ಥೆಯಲ್ಲಿದ್ದ ಒಬ್ಬ ಮಹಿಳೆಯನ್ನು ತಂದಿದ್ದರು. ರೋಗಿಯನ್ನು ಒಡನೆಯೆ ಕ್ಯಾಜುವಾಲ್ಟಿ ಡಿಪಾರ್ಟ್‌ಮೆಂಟಿನ ಡಾ. ಉಗಳೆಯವರು ಆಸ್ಪತ್ರೆಗೆ ಸೇರಿಸಿಕೊಂಡಿದ್ದರು.

ಅವಳನ್ನಲ್ಲಿಗೆ ಕರೆತಂದವರು ತಾನು ಪುಣೆಯಲ್ಲಿ ಪ್ರ್ಯಾಕ್ಟಿಸ್ ಮಾಡುತ್ತಿರುವ ಡಾ. ಲಾಗು ಎಂದು ಪರಿಚಯ ಮಾಡಿಕೊಟ್ಟು ತಾನು ಕರೆತಂದ ರೋಗಿಯ ಹೆಸರು ಇಂದುಮತಿ ಪಾವುಸ್ಕೆ ಎಂದೂ ಅವಳ ವಯಸ್ಸು ಸುಮಾರು ೪೦ ಇರಬಹುದೆಂದೂ ಹೇಳಿದರು. ನಂತರ "C/o ಡಾ. ಲಾಗು, ೨೦-ಬಿ ಶುಕ್ರವಾರ, ಗಲಾ ನಂ. ೧೨ ಪುಣೆ-೨" ಎಂಬುದಾಗಿ ಅವಳ ವಿಳಾಸವನ್ನಿತ್ತರು. ಅವಳನ್ನು ಮುಂಬಯಿಯಲ್ಲಿ ಸ್ಪೆಶಲಿಸ್ಟರೊಬ್ಬರಿಗೆ ತೋರಿಸಲೆಂದು ತಾವು ಕರೆತಂದುದಾಗಿಯೂ ಗಾಡಿಯಲ್ಲಿ ಆಕೆ ಒಮ್ಮೆಲೆ ಪ್ರಜ್ಞಾಹೀನಳಾದಳೆಂದೂ ಅವರು ವಿವರಿಸಿದರು. ಅವಳಿಗೆ ಮೇಲಿಂದ ಮೇಲೆ ಹಿಸ್ಟೀರಿಕಲ್ ಫಿಟ್ಸ್ ಬರುತ್ತಿತ್ತೆಂದೂ ತಿಳಿಸಿದರು.

ನಂತರ ಐದು ನಿಮಿಷಗಳಲ್ಲಿಯೇ ಅವಳನ್ನು ನಂ. ೧೨ ನೆಯ ವಾರ್ಡಿಗೆ ಸಾಗಿಸಲಾಯಿತು. ಅದೇ ಹಿಂದಿನ ಜೂನ್ ತಿಂಗಳಲ್ಲಿ ಎಂ. ಬಿ., ಬಿ. ಎಸ್. ಮುಗಿಸಿ ಹೌಸ್ ಫಿಜೀಶಿಯನ್ ಆಗಿದ್ದ ಡಾ. ಕುಮಾರಿ ಅನೀಜಾ ಆ ವಾರ್ಡಿನ ಮೇಲ್ವಿಚಾರಣೆಗೆಂದಿದ್ದರು. ರೋಗಿಯು ಪುಣೆಯಿಂದ ಬರುವಾಗ ಗಾಡಿಯಲ್ಲಿ ಒಮ್ಮೆಲೆ ಪ್ರಜ್ಞಾಹೀನಳಾದಳೆಂದೂ ತಾವು ಬಹು ವರುಷಗಳಿಂದ ಬಲ್ಲ ಅವಳಿಗೆ ಆಗೀಗ ಹೀಗಾಗುತ್ತಿದ್ದುದುಂಟೆಂದೂ ಡಾ. ಲಾಗು ಡಾ. ಅನೀಜಾರಿಗೆ ಹೇಳಿದರು.

ಡಾ. ಅನೀಜಾ ರೋಗಿಯನ್ನು ಪರೀಕ್ಷಿಸಿ ಉಪಚಾರ ನಡೆಸಿದರು. ರೋಗಿಯ ಮೂತ್ರವನ್ನು ಪರೀಕ್ಷಿಸಿದಾಗ ಅದರಲ್ಲಿ ಸಕ್ಕರೆ ಕಂಡುಬಂದುದರಿಂದ ರೋಗಿಯು ಮಧುಮೇಹದಿಂದ ಬಳಲುತ್ತಿರುವುದಾಗಿ ತಿಳಿದು, ಅವಳ ಪ್ರಜ್ಞಾಹೀನ ಅವಸ್ಥೆ ಡೈಬೆಟಿಕ್ ಕೋಮಾ ಎಂದು ನಿರ್ಧರಿಸಿದರು.

ಆದರೆ ಹನ್ನೊಂದು ಗಂಟೆಯ ಸುಮಾರಿಗೆ ಆಸ್ಪತ್ರೆಯ ಗೌರವ ಡಾಕ್ಟರ್ ವರ್ತೈಪಾ ನಂ. ೧೨ ನೆಯ ವಾರ್ಡಿಗೆ ಬಂದವರು ಡಾ. ಅನೀಜಾರಿಗೆ "ಮೂತ್ರದಲ್ಲಿ ಎಸಿಟೋನ್ ಇದೆಯೇನೆಂದು ನೋಡಿದಿರಾ?" ಎಂದು ಕೇಳಿದರು.

"ಇಲ್ಲ."

"ಹಾಗಿದ್ದರೆ ಈಗ ರೋಗಿಯಿರುವುದು ಡೈಬೆಟಿಕ್ ಕೋಮಾದಲ್ಲೆಂದು ಹೇಗೆ ಹೇಳುವಿರಿ?"

ಡಾ. ಅನೀಜಾರಿಗೆ ತಮ್ಮ ತಪ್ಪಿನ ಅರಿವಾಗಿ ತಕ್ಷಣ ರೋಗಿಯ ಮೂತ್ರ ಪರೀಕ್ಷೆಯನ್ನು ಡಾ.

ವರ್ಕೈವಾರೆದುರಿನಲ್ಲಿಯೇ ಮಾಡಿದರು. ತೀರ ಅಲ್ಪ ಪ್ರಮಾಣದಲ್ಲಿ ಎಸಿಟೋನ್ ಇದ್ದಿರುವುದು ಕಂಡಿತು. ಎಸಿಟೋನಿನ ಈ ಅಭಾವವು ಮುಂದೆ ಕೋರ್ಟಿನಲ್ಲಿ ಈ ಪ್ರಕರಣದ ಒಂದು ಪ್ರಾಮುಖ್ಯ ಅಂಶವಾಯಿತು. ಯಾವ ಚಿಕಿತ್ಸೆಯೂ ಅಪೇಕ್ಷಿತ ಪರಿಣಾಮ ನೀಡಲಿಲ್ಲ. ರೋಗಿಗೆ ಪ್ರಜ್ಞೆ ಮರಳದೆ ಮುಂಜಾನೆ ೧೧-೩೦ರ ಸುಮಾರಿಗೆ ಅವಳು ಕೊನೆಯುಸಿರೆಳೆದಳು.

ಡಾ. ವರ್ಕೈವಾರಿಗೆ ಅವಳು ಡೈಬೆಟಿಕ್ ಕೋಮಾದಲ್ಲಿ ಮರಣ ಹೊಂದಿದಳೆಂದು ನಂಬುವುದಾಗಲಿಲ್ಲ. ಅಂತೆಯೇ ಅವರು ಶವದ ಮರಣೋತ್ತರ ಪರೀಕ್ಷೆ ಆಗಬೇಕೆಂದು ಹೇಳಿ ಹೋದರು. ಕೂಡಲೆ ಕೇಸ್ ಪೇಪರಿನ ಮೇಲೆ ಡಾ. ಅನೀಜಾ "ಮರಣೋತ್ತರ ಪರೀಕ್ಷೆಯಾಗಬೇಕು" ಎಂದು ಬರೆದು ಮರಣದ ಕಾರಣವನ್ನು ಬರೆಯಬೇಕಾದ ಸ್ಥಳವನ್ನು ಹಾಗೆಯೇ ಬಿಟ್ಟರು.

ಕೇಸ್ ಪೇಪರುಗಳು ಮಧ್ಯಾಹ್ನ ೧ ಗಂಟೆಗೆ ಆಸ್ಪತ್ರೆಯ ರೆಸಿಡೆಂಟ್ ಮೆಡಿಕಲ್ ಆಫೀಸರ್ ಡಾ. ಮೌಸ್ಕರರೆಡೆಗೆ ಹೋದ ನಂತರ ಅವರು ಶವದ ಮರಣೋತ್ತರ ಪರೀಕ್ಷೆಗಾಗಿ ಏರ್ಪಾಡು ಮಾಡುವ ಬದಲು ಡಾ. ಲಾಗು ಅವರ ವಿಳಾಸಕ್ಕೆ ಪುಣೆಗೆ ತಂತಿ ಕಳಿಸಿ ಇಂದುಮತಿ ನಿಧನಳಾದಳೆಂದೂ ಅವಳ ಮೃತದೇಹವನ್ನು ಆಸ್ಪತ್ರೆಯಿಂದೊಯ್ಯಲು ಏರ್ಪಾಡು ಮಾಡಬೇಕೆಂದೂ ತಿಳಿಸಿದ್ದಲ್ಲದೆ ತಂತಿಗೆ ಕೂಡಲೇ ಉತ್ತರಿಸಬೇಕೆಂದೂ ಕೇಳಿಕೊಂಡಿದ್ದರು. ಅವರು ತಂತಿ ಕಳಿಸಿದಾಗ ಮಧ್ಯಾಹ್ನ ೨ ಗಂಟೆಯಾಗಿತ್ತು.

ಮರುದಿನ, ಅಂದರೆ ನವೆಂಬರ್ ೧೪ ರ ಸಂಜೆಯವರೆಗೂ ಶವ ಜಿ. ಟಿ. ಆಸ್ಪತ್ರೆಯಲ್ಲಿಯೇ ಇಡಲ್ಪಟ್ಟಿತ್ತು. ಆದರೆ ಅದು ವರೆಗೂ ಡಾ. ಲಾಗು ಅವರಿಂದ ಉತ್ತರ ಬರದಿರಲು ಅದನ್ನು ಸುರಕ್ಷಿತವಾಗಿಡಲೋಸುಗ ಜೆ. ಜೆ. ಆಸ್ಪತ್ರೆಯ ಶವಗೃಹಕ್ಕೆ ಕಳಿಸಲಾಯಿತು.

ಆ ತಂತಿಗೆ ಉತ್ತರವಾಗಿ ಡಾ. ಲಾಗು ೧೪ ರಂದು ಡಾ. ಮೌಸ್ಕರರಿಗೆ ಈ ರೀತಿ ಪತ್ರ ಬರೆದರು: "ಆಗಲೇ ನಾನು ಕಲಕತ್ತೆಯಲ್ಲಿರುವ ಶ್ರೀಮತಿ ಇಂದುಮತಿ ಪಾನ್ಸೈಯವರ ಸೋದರನಿಗೆ ತಂತಿ ಮೂಲಕ ಈ ವಿಷಯ ತಿಳಿಸಿರುವೆ. ಅತಿ ಬೇಗವೆಂದರೂ ಅವನು ಗುರುವಾರ ನವೆಂಬರ್ ೧೫ ರಂದು ಮುಂಬಯಿ ತಲುಪಬಹುದು. ಅವನ ಹೆಸರು ಗೋವಿಂದ ವಾಮನ ದೇಶಪಾಂಡೆ ಎಂದಿದ್ದು ಇಂದುಮತಿ ಪಾನ್ಸೈಯ ಬಗ್ಗೆ ಅವನು ವಿಚಾರಿಸುವನು. ಆಸ್ಪತ್ರೆಯ ವಾರ್ಡ್ ಬುಕ್ಕನ್ನು ನಾನು ನೋಡಿದ್ದೇನೆ. ಅದರಲ್ಲಿ ಇಂದುಮತಿ ಪಾವುನ್ಸೈ ಎಂದು ಅವಳ ಹೆಸರನ್ನು ನಮೂದಿಸಲಾಗಿದೆ. ಅವಳ ನಿಜ ಹೆಸರು ಇಂದುಮತಿ ಪಾನ್ಸೈ. ದಯವಿಟ್ಟು ಆ ಹೆಚ್ಚಿನ 'ವು' ವನ್ನು ತೆಗೆದು ಹಾಕಿ ಸರಿಪಡಿಸಿರಿ. ನಾನೀಗ ಬರೆಯುತ್ತಿರುವುದು ಇದೇ ಮಂಗಳವಾರ ೧೩ ನೆ ನವೆಂಬರ್ ೧೯೫೬ ರಂದು ನಸುಕಿನ ೬ ಗಂಟೆಗೆ. ಜಿ. ಟಿ. ಆಸ್ಪತ್ರೆಗೆ ಸೇರಿಸಲ್ಪಟ್ಟು ಅಂದೇ ಮಧ್ಯಾಹ್ನ ೧೧ ಗಂಟೆಗೆ ನಿಧನ ಹೊಂದಿದ ೩೪-೩೫ ವರುಷದ ಸ್ತ್ರೀಯ ವಿಷಯ.

"ಶ್ರೀ ಗೋವಿಂದ ವಾಮನ ದೇಶಪಾಂಡೆ ಅವಳ ಮೃತದೇಹವನ್ನು ವಶಕ್ಕೆ ತೆಗೆದುಕೊಂಡು ಹಿಂದೂ ಧಾರ್ಮಿಕ ವಿಧಿಯ ಪ್ರಕಾರ ಶವಸಂಸ್ಕಾರ ನೆರವೇರಿಸುತ್ತಾನೆ."

ಎರಡು ವರುಷಗಳ ನಂತರ ವಿಚಾರಣೆಯಲ್ಲಿ ಡಾ. ಲಾಗು ಬರೆದ ಈ ಪತ್ರಕ್ಕೆ ತುಂಬ ಮಹತ್ವ ಪ್ರಾಪ್ತವಾಯಿತು.

ನವೆಂಬರ್ ೧೫ ರಂದು ಈ ಪತ್ರ ಡಾ. ಮೌಸ್ಕರರ ಕೈಸೇರಿತು ಆದರೆ ಆ ವೇಳೆಗಾಗಲೇ ಅವರು ಎಸ್ಪ್ಲೆನೇಡ್ ಪೋಲೀಸ್ ಸ್ಟೇಶನ್ನಿನ ಮೂಲಕ ಇಂದುಮತಿಯ ದೇಹವನ್ನು ಜೆ. ಜೆ. ಆಸ್ಪತ್ರೆಯ ಶವಗೃಹಕ್ಕೆ ಕಳಿಸಿಬಿಟ್ಟು ಕೊರೋನರ್‌ರಿಗೂ ಈ ವಿಷಯ ತಿಳಿಸಿದ್ದರು.

ಆದರೆ ಇಂದುಮತಿಯ ಮರಣದ ಕಾರಣವನ್ನೇ ತಿಳಿಸಲಾಗಿಲ್ಲವಾದ್ದರಿಂದ ಆ ಬಗ್ಗೆ ವಿಚಾರಣೆಯಾಗಬೇಕೆಂದು ಪೋಲೀಸರು ಕೋರೋನರ್‌ರನ್ನು ಕೇಳಿಕೊಂಡರು.

ಕೊರೋನರ್ ಈ ಬಗ್ಗೆ ಜಿ.ಟಿ. ಆಸ್ಪತ್ರೆಯಲ್ಲಿ ವಿಚಾರಿಸಿದ ನಂತರ ಡಾ. ಮೌಸ್ಕರರು ಇಂದುಮತಿ ಡೈಬೆಟಿಕ್ ಕೋಮಾದಿಂದ ನಿಧನಹೊಂದಿದಳೆಂದು ಸರ್ಟಿಫಿಕೇಟ್ ಕೊಟ್ಟರು. ಇದರಿಂದಾಗಿ ಶವದ ಮರಣೋತ್ತರ ಪರೀಕ್ಷೆಯೇನೂ ಅವಶ್ಯವಿಲ್ಲವೆಂದು ನಿರ್ಧರಿಸಿ ಕೊರೋನರ್

ಅದರ ಫೋಟೋವೊಂದನ್ನು ತೆಗಸಿ 'ಅಜ್ಞಾತ ಶವ' ಎಂದು ಅದನ್ನು ಮೆಡಿಕಲ್ ಕಾಲೇಜಿಗೆ ವಿದ್ಯಾರ್ಥಿಗಳಿಗೆ ಡಿಸೆಕ್ಶನಿಗಾಗಿ ಕೊಟ್ಟು ಬಿಡಬೇಕೆಂದು ನವೆಂಬರ್ ೧೯ ರಂದು ಆಜ್ಞೆ ವಿಧಿಸಿದರು.

ಶವದ ಫೋಟೊವೊಂದಿಲ್ಲದಿದ್ದರೆ ಡಾ. ಲಾಗುರವರು ತಮ್ಮ ಮೇಲಿನ ಆರೋಪವನ್ನು ಎಳವೆಯಲ್ಲಿಯೆ ಚಿವುಟಿ ಒಗೆಯಬಹುದಿತ್ತು.

ಅಕಸ್ಮಾತ್ತಾಗಿ ಸಂಭವಿಸುವ ಅನಿರೀಕ್ಷಿತ ಸಂಗತಿಗಳು ಅನೇಕ ಸಲ ಎಂದೂ ಬೆಳಕಿಗೆ ಬರಲಾರದಂತಹ ಹೀನ ಅಪರಾಧಗಳ ಶೋಧನೆಗೆ ಕಾರಣವಾಗುತ್ತವೆಂಬುದಕ್ಕೆ ಈ ಪ್ರಕರಣವೊಂದು ಉದಾಹರಣೆ ಎನ್ನಬಹುದು. ನವೆಂಬರ್ ೨೦ ರಂದು ಇಂದುಮತಿಯ ಶವವನ್ನು ಡಿಸೆಕ್ಶನ್ನಿಗೆಂದು ಗ್ರ್ಯಾಂಟ್ ಮೆಡಿಕಲ್ ಕಾಲೇಜಿಗೆ ಕೊಡಲಾಯಿತು. ಶವವನ್ನು ಡಿಸೆಕ್ಶನ್ ಹಾಲಿನಲ್ಲಿಟ್ಟ ನಂತರ ಅನೇಕ ವರುಷಗಳಿಂದ ಅಲ್ಲಿಯೇ ಕೆಲಸಕ್ಕಿದ್ದ ಒಬ್ಬ ಸಿಪಾಯಿಯು ಶವದ ಕುತ್ತಿಗೆಯ ಹಿಂಭಾಗದಲ್ಲಿ ಕೆಲವು ಗೆರೆಗಳನ್ನು ಕಂಡನು. ಸಂದೇಹಗೊಂಡ ಅವನಿಂದ ಈ ವಿಷಯ ತಿಳಿದ ಅನಾಟಮಿ ಪ್ರಾಧ್ಯಾಪಕರು ಬಂದು ಅವುಗಳನ್ನು ಪರೀಕ್ಷಿಸಿದರು. ತಕ್ಷಣ ಅವರು ಆ ಶವವನ್ನು ಕೊಯ್ಯಕೂಡದೆಂದು ತಮ್ಮ ವಿದ್ಯಾರ್ಥಿಗಳಿಗೆ ಹೇಳಿ ವಿಷಯವನ್ನು ಪೋಲೀಸರಿಗೆ ತಿಳಿಸಿದರು.

ಪ್ರಕರಣ ಮತ್ತೆ ಕೊರೋನರ್‌ರೆಡೆಗೆ ಹೋಯಿತು. ನವೆಂಬರ್ ೨೩ ರಂದು, ಸತ್ತು ೧೦ ದಿನಗಳ ನಂತರ ಇಂದುಮತಿಯ ಮರಣೋತ್ತರ ಪರೀಕ್ಷೆಯನ್ನು ಪೋಲೀಸ್ ಸರ್ಜನ್ ಡಾ. ಝೂಲಾ ನಡೆಸಿದರು. ಇಷ್ಟು ದಿನಗಳವರೆಗೆ ಇಂದುಮತಿಯ ಶವ ಸುಸ್ಥಿತಿಯಲ್ಲಿದ್ದುದು ಆಶ್ಚರ್ಯಕರವಾಗಿತ್ತು.

ಕುತ್ತಿಗೆಯ ಮೇಲಿನ ಗೆರೆಗಳು ವ್ಯಕ್ತಿ ಸತ್ತ ಮೇಲೆ ಸಾಗಿಸುವಾಗ ಮೂಡಿದವೆಂದು ಡಾ. ಝೂಲಾ ಪರೀಕ್ಷೆಯ ನಂತರ ನಿರ್ಧರಿಸಿದರು. ಗುರುತಿಸಬಹುದಾದಂತಹ ಯಾವ ವಿಷದ ವಾಸನೆಯೂ ಅವರಿಗೆ ಬರಲಿಲ್ಲ. ಒಳಗಿನ ಮುಖ್ಯ ಅಂಗಗಳನ್ನು ತೆಗೆದು ಗವರ್ನ್‌ಮೆಂಟ್ ಕೆಮಿಕಲ್ ಎಕ್ಸಾಮಿನರ್‌ರಿಗೆ ಕಳಿಸಿದ ನಂತರ ಶವವನ್ನು ಸಂಸ್ಕಾರಕ್ಕೆಂದು ೨೪ ರಂದು ಹಿಂದೂ ರಿಲೀಫ್ ಸೊಸೈಟಿಗೊಪ್ಪಿಸಲಾಯಿತು. ಈ ಒಂದು ಆಕಸ್ಮಿಕ ಘಟನೆಯು ಡಾ. ಲಾಗು ಅವರ ಮೇಲೆ ಬಲವಾದ ಪುರಾವೆಗೆ ಕಾರಣವಾಯಿತು. ಮರಣೋತ್ತರ ಪರೀಕ್ಷೆಗೆ ಕಾರಣ ಕೊರಳಲ್ಲಿದ್ದ ಗೀರುಗಳು. ಅವೇನೂ ಸಾವಿಗೆ ಕಾರಣವಾಗಿರಲಿಲ್ಲ. ಆದರೆ ಈ ಗೀರುಗಳಿದ್ದುದರಿಂದಲೇ ಮರಣೋತ್ತರ ಪರೀಕ್ಷೆಯಾಯಿತು. ಅದರಲ್ಲಿ ಕಂಡುಬಂದ ಅಂಶಗಳು ಅನಂತರ ಲಾಗುರಿಗೆ ಮಾರಕವಾದವು.

ಇಷ್ಟಾದರೂ ಕಲಕತ್ತೆಯಿಂದ ಡಾ. ಲಾಗು[illegible] ಪತ್ರದ ಪ್ರಕಾರ ಬರಬೇಕಿದ್ದ ಗೋವಿಂದ ವಾಮನ ದೇಶಪಾಂಡೆ ಮಾತ್ರ ಬರಲೇ ಇಲ್ಲ. ನಿಜ ಕೇಳಿದರೆ ಅಂಥ ವ್ಯಕ್ತಿ ಪ್ರಪಂಚದಲ್ಲಿಯೆ ಇರಲಿಲ್ಲ.

ಆ ಪ್ರಕರಣ ಅಲ್ಲಿಗೆಯೇ ಮುಗಿದು ಹೋಗ[illegible] ಬೇಕಿತ್ತು. ಆದರೆ ಪೋಲೀಸರು ಮಾತ್ರ ಅದನ್ನಷ್ಟಕ್ಕೆಯೇ ಬಿಡಲಿಚ್ಛಿಸಲಿಲ್ಲ. ಇಂದುಮತಿಯನ್ನು ಆಸ್ಪತ್ರೆಗೆ ಸೇರಿಸಿದಾಗ ಅವಳ ಮೈಮೇಲೆ ಆಭರಣವೊಂದೂ ಇರದಿರುವುದು ಹಾಗು ಅವಳ ಹತ್ತಿರ ಹಣವೂ ಇಲ್ಲದಿರುವುದು ಅವರ ಸಂಶಯಕ್ಕೆ ಕಾರಣವಾಗಿತ್ತು. ಮುಂಬಯಿಗೆ ಸ್ಪೆಶಲಿಸ್ಟನ್ನು ಕಾಣಲು ಬರುವ ರೋಗಿಯೆಂದರೆ ಸಾಧಾರಣಮಟ್ಟಿಗಾದರೂ ಶ್ರೀಮಂತಳಾಗಿರಬೇಕಿದ್ದುದು ಸ್ವಾಭಾವಿಕವಿತ್ತು. ಅಲ್ಲದೆ ಕಲಕತ್ತೆಯಿಂದ ಬರಬೇಕಿದ್ದ ಅವಳ ಸೋದರ ಬಾರದಿದ್ದುದೂ ಈ ಸಂಶಯಕ್ಕೆ ಪುಟ ಕೊಡುವಂತಿತ್ತು.

ನವೆಂಬರ್ ೧೫ ರಂದು ಮುಂಬಯಿ ಪೋಲೀಸರು ಪುಣೆಯ ಪೋಲೀಸರಿಗೆ ಈ ಬಗ್ಗೆ ಡಾ. ಲಾಗು ಅವರನ್ನು ವಿಚಾರಿಸಲು ತಿಳಿಸಿದರು. ಪುಣೆಯ ಪೋಲೀಸರಿಗೆ ಡಾ. ಲಾಗು ಹೀಗೆ ಹೇಳಿಕೆ ಕೊಟ್ಟರು:

"ನವೆಂಬರ್ ೧೨ ರಂದು ರಾತ್ರಿ ೧೦ ಗಂಟೆಗೆ ಪುಣೆಯನ್ನು ಬಿಡುವ ಗಾಡಿಯಿಂದ ನಾನು ಮುಂಬಯಿಗೆ ಹೊರಟೆ. ೧೩ ರಂದು ನಸುಕಿನ ೫–೧೫ ಕ್ಕೆ ವಿಕ್ಟೋರಿಯಾ ಟರ್ಮಿನಸ್ ತಲುಪಿದೆನು. ನಾನು ಕುಳಿತ ಡಬ್ಬಿಯಲ್ಲಿಯ ಒಬ್ಬ

ಸ್ತ್ರೀ ಪ್ರಯಾಣಿಕಳನ್ನೊಳಗೊಂಡ ಅನೇಕರೊಡನೆ ನಾನು ಮಾತನಾಡಿದೆನು. ಗಾಡಿ ಹೊರಟ ಕೆಲ ಹೊತ್ತಿನಲ್ಲಿಯೇ ಬಹುಶಃ ಎಲ್ಲರೂ ತೂಕಡಿಸತೊಡಗಿದೆವು. ರಾತ್ರಿ ೧೨ ರ ಸುಮಾರಿಗೆ ಎಲ್ಲರೂ ನಿದ್ರೆಹೋದೆವು. ಬಾಯಖಳಾ ಬಂದಾಗ ನಾವು ಎದ್ದು ಕೆಳಗಿಳಿಯುವ ಸಿದ್ಧತೆಯಲ್ಲಿ ನಮ್ಮ ಗಂಟುಗದಡಿಗಳನ್ನು ಸಾವರಿಸಿಕೊಳ್ಳಲಾರಂಭಿಸಿದೆವು. ಆಗ ಸ್ತ್ರೀಯೊಬ್ಬಳು ಗಾಢನಿದ್ರೆಯಲ್ಲಿದ್ದುದು ನನ್ನ ಲಕ್ಷ್ಯಕ್ಕೆ ಬಂದಿತು. ಅವಳ ಹೆಸರು ಇಂದುಮತಿ ಪಾನ್ಸೆ ಎಂದೂ ವಯಸ್ಸು ಸುಮಾರು ೩೬ ವರುಷವಿರಬಹುದೆಂದೂ, ಆಕೆಯ ಸೋದರನೊಬ್ಬ ಕಲಕತ್ತೆಯಲ್ಲಿ ನೌಕರಿಗಿದ್ದಾನೆಂದೂ ಇತರ ಪ್ರಯಾಣಿಕರೊಂದಿಗೆ ಮಾತನಾಡುವಾಗ ನನಗೆ ತಿಳಿದು ಬಂದಿತು. ವಿ. ಟಿ. ಯಲ್ಲಿ ಗಾಡಿ ನಿಂತೊಡನೆಯೆ ಇತರ ಪ್ರಯಾಣಿಕರೆಲ್ಲ ಇಳಿದು ಹೋದರೂ ಆ ಸ್ತ್ರೀಯು ಏಳದಿದ್ದುದರಿಂದ ನಾನು ಅವಳನ್ನು ದಿಟ್ಟಿಸಿ ನೋಡಿದೆ. ಆಗ ಅವಳು ಪ್ರಜ್ಞಾಹೀನಳಾಗಿರುವುದಾಗಿ ನನಗೆ ತೋರಿತು. ಸ್ವತಃ ಡಾಕ್ಟರನಾದ ನಾನು ತಕ್ಷಣ ಅವಳನ್ನು ಆಸ್ಪತ್ರೆಗೆ ಕರೆದೊಯ್ಯುವುದು ನನ್ನ ಕರ್ತವ್ಯವೆಂದು ಭಾವಿಸಿದೆನು. ಅಂತೆಯೆ ಟ್ಯಾಕ್ಸಿಯೊಂದರಲ್ಲಿ ಸಮೀಪದಲ್ಲಿನ ಜಿ. ಟಿ. ಆಸ್ಪತ್ರೆಗೆ ಅವಳನ್ನೊಯ್ದೆ. ಆ ಮಹಿಳೆಯನ್ನು ಆಸ್ಪತ್ರೆಗೊಯ್ದುವನು ನಾನಾದ್ದರಿಂದ ಡ್ಯೂಟಿಯ ಮೇಲಿದ್ದ ಮೆಡಿಕಲ್ ಆಫೀಸರರು ನನ್ನ ವಿಳಾಸವನ್ನು ಬರೆದುಕೊಂಡರು. ಇದಕ್ಕಿಂತ ಹೆಚ್ಚು ನನಗೇನೂ ಗೊತ್ತಿಲ್ಲ. ಅವಳು ನನ್ನ ಸಂಬಂಧಿಕಳಲ್ಲ ಹಾಗು ಅವಳ ಬಗ್ಗೆ ನಾನು ಯಾವ ರೀತಿಯಿಂದಲೂ ಹೊಣೆಗಾರನಲ್ಲ."

ನವೆಂಬರ್ ೧೬ ರಂದು ಈ ವಿಷಯ ತಿಳಿದೊಡನೆ ಮುಂಬಯಿ ಪೋಲೀಸರು ಈ ಪ್ರಕರಣ ಮುಗಿಯಿತೆಂದು ನಿರ್ಧರಿಸಿಬಿಟ್ಟಿದ್ದರು.

ಸಂಬಂಧಿಕರ ದೂರಿನ ದೆಸೆಯಿಂದ ಈ ಪ್ರಕರಣ ಪುನರುಜ್ಜೀವನಗೊಳ್ಳದಿದ್ದರೆ ಇಡೀ ಪ್ರಕರಣ ಇಲ್ಲಿಗೇ ಮುಚ್ಚಿ ಹೋಗಬಹುದಿತ್ತು. ಅದು ಪುನರುಜ್ಜೀವನವಾದ ಮೇಲೆ ಡೆ. ಸುಪರಿಂಟೆಂಡೆಂಟ್ ಧೋಂಡೆಯವರಿಗೆ ಇಂದುಮತಿ ಪಾವುಸ್ಸೆ (ಅಥವಾ ಪಾನ್ಸೆ) ಮತ್ತು ಲಕ್ಷ್ಮೀಬಾಯಿ ಕರ್ವೆ ಒಂದೇ ವ್ಯಕ್ತಿಯಿರಬೇಕೆಂಬುದರಲ್ಲಿ ಏನೂ ಸಂಶಯವುಳಿಯಲಿಲ್ಲ. ಹಾಗೆಯೆ ಇಡೀ ಪ್ರಕರಣದಲ್ಲಿ ಡಾ. ಲಾಗು ಅವರ ಪಾತ್ರ ನಿರ್ಮಲವಾಗಿರಲಿಲ್ಲವೆಂಬುದು ಸ್ವಯಂವೇದ್ಯವಾಗಿತ್ತು. ಧೋಂಡೆಯವರು ಡಾ. ಲಾಗು ಅವರನ್ನು ಕಂಡಾಗ ಅವರು ಲಕ್ಷ್ಮೀಬಾಯಿಯನ್ನು ತಾವು ಮುಂಬಯಿಗೆ ೧೯೫೬ ನವೆಂಬರ್ ೧೨ ರಂದು ಕರೆದೊಯ್ದುದ್ದು ನಿಜವೆಂದೂ ಅವಳು ಮರುದಿನ ಜಿ. ಟಿ. ಆಸ್ಪತ್ರೆಯಲ್ಲಿ ನಿಧನ ಹೊಂದಿದಳೆಂದೂ ಒಪ್ಪಿಕೊಂಡರು. ಜಿ. ಟಿ. ಆಸ್ಪತ್ರೆಯಲ್ಲಿ ಇಂದುಮತಿ ತನ್ನ ರೋಗಿಯೆಂದು ಹೇಳಿದ್ದ ಡಾ. ಲಾಗು ಪೋಲೀಸರು ಬಂದು ಕೇಳಿದಾಗ ಅವಳು ತನ್ನ ರೋಗಿಯಲ್ಲವೆಂದು ಹೇಳಿದ್ದೇಕೆಂಬುದಕ್ಕೆ ಉತ್ತರ ಸಿಗಲಿಲ್ಲ.

ಜಿ. ಟಿ. ಆಸ್ಪತ್ರೆಯಲ್ಲಿ ದೊರೆತ ಅವಳ ಬಟ್ಟೆಗಳನ್ನು ಹಾಗೂ ಕೊರೋನರ್ ಕಚೇರಿಯಲ್ಲಿದ್ದ ಶವದ ಫೋಟೋವನ್ನು ಲಕ್ಷ್ಮೀಬಾಯಿಯ ಸಂಬಂಧಿಕರು ಗುರುತಿಸಿದರು. ಮಾರ್ಚ್ ೧೨, ೧೯೫೮ ರಂದು ಲಕ್ಷ್ಮೀಬಾಯಿ ಕರ್ವೆಯ ಕೊಲೆ ಮಾಡಿದ ಆರೋಪವಿರಿಸಿ ಡಾ. ಅನಂತ ಲಾಗು ಅವರನ್ನು ಬಂಧಿಸಲಾಯಿತು.

ಲಕ್ಷ್ಮೀಬಾಯಿ ಮರಣಹೊಂದಿ ಎರಡು ವರುಷಗಳ ನಂತರ ಪುಣೆಯ ಸೆಶನ್ಸ್ ನ್ಯಾಯಾಧೀಶ ಶ್ರೀ. ವಿ. ಏ. ನಾಯಿಕ (ಈಗ ಮಹಾರಾಷ್ಟ್ರ ಹೈಕೋರ್ಟಿನ ನ್ಯಾಯಾಧೀಶರಾಗಿದ್ದಾರೆ) ಅವರ ನ್ಯಾಯಾಲಯದಲ್ಲಿ ಡಾ. ಲಾಗು ಅವರ ವಿಚಾರಣೆಗೆ ಆರಂಭವಾದಾಗ ಪುಣೆಯ ನಾಗರಿಕರ ಕುತೂಹಲವನ್ನದು ಅತಿಯಾಗಿ ಕೆರಳಿಸಿದ್ದರಿಂದ ನಿತ್ಯವೂ ಜನ ಕಿಕ್ಕಿರಿದು ನೆರೆದಿರುತ್ತಿದ್ದರು.

೧೯೫೬ ರ ನವೆಂಬರ್ ೧೨ ಹಾಗೂ ೧೩ ರ ನಡುವಿನ ರಾತ್ರಿ ಪೆಸೆಂಜರ್ ಗಾಡಿಯಲ್ಲಿ ಲಕ್ಷ್ಮೀಬಾಯಿಯನ್ನು ಮುಂಬಯಿಗೆ ಕರೆದೊಯ್ಯುತ್ತಿರುವಾಗ ಗುರುತಿಸಲಾಗದಂಥ ವಿಷವನ್ನು ಅವಳಿಗಿತ್ತು ಅವಳ ಕೊಲೆಗೈದ ನಂತರ ಅವಳ ಜಂಗಮ ಆಸ್ತಿ ಹಾಗೂ ಹಣವನ್ನು ಡಾ. ಲಾಗು ಎತ್ತಿಹಾಕಿದ್ದಾರೆಂದು ಸರಕಾರಿ ಪಕ್ಷದ ವಾದ

ವಾಗಿತ್ತು.

ಹಣ ಎತ್ತಿಹಾಕಿದ್ದರ ಬಗ್ಗೆ ಏನೂ ಸಂಶಯವಿರಲಿಲ್ಲ. ಲಾಗು ಅವರ ವಕೀಲರು ಅದನ್ನು ನಿರಾಕರಿಸುವ ಗೋಜಿಗೇ ಹೋಗಲಿಲ್ಲ. ಖಟ್ಲೆ ಪ್ರಾರಂಭವಾಗುವ ವೇಳೆಗಾಗಲೇ ಅವರು ಲಕ್ಷ್ಮೀಬಾಯಿಯ ಆಸ್ತಿಯಲ್ಲಿ ರೂ. ೨೬,೦೮೦ ದಷ್ಟು ಎತ್ತಿ ಹಾಕಿದ್ದರು.

ಅವಳ ಮರಣದ ಮೊದಲೇ ನವೆಂಬರ ೮ ರಿಂದ ೧೦ ರೊಳಗೆ ಅವಳಿಂದ ಅವಳ ಖಾತೆಯಿರುವ ಬ್ಯಾಂಕ್ ಆಫ್ ಮಹಾರಾಷ್ಟ್ರಕ್ಕೆ ಮುಂದಿನ ವಾರ ೧೦೦೦ ದಿಂದ ೫೦೦೦ ರೂಪಾಯಿಗಳ ವರೆಗೆ ಹಿಂತೆಗೆದುಕೊಳ್ಳಬೇಕಿದೆಂಬ ಬಗ್ಗೆ ನೋಟೀಸ್ ಬರೆಯಿಸಿಕೊಟ್ಟಿದ್ದರು. ನವೆಂಬರ್ ೧೨ ರಂದು ಅವಳ ಹೆಸರಿನ ೨,೬೦೭-೬-೦ ರ ಡಿವಿಡೆಂಡ್ ವಾರಂಟನ್ನು ತಾವೇ ಅವಳ ಸಹಿ ಮಾಡಿ ಬ್ಯಾಂಕಿಗಿತ್ತಾಗ ಬ್ಯಾಂಕು ಸ್ವೀಕರಿಸಿತು. ಇದರಿಂದ ತಾವು ಅವಳ ಸಹಿ ಮಾಡಿರುವುದನ್ನು ಬ್ಯಾಂಕು ನಂಬುವುದಾಗಿ ಖಚಿತಪಡಿಸಿಕೊಂಡ ಅವರು ಅವಳ ಮರಣದ ನಂತರ ಕೂಡಲೇ ರೂ. ೫೦೦೦ ವನ್ನು ಅಲ್ಲಿಂದ ಚೆಕ್ ಮೂಲಕ ಪಡೆದುಕೊಂಡರು. ಮುಂದೆ, ಖೊಟ್ಟಿ ಚೆಕ್ಕುಗಳ ಮೂಲಕ ಹಾಗು ಇತರ ದುರ್ವ್ಯಾಪಾರಗಳ ಮೂಲಕ ಅವರು ಉಳಿದ ಹಣ ಎತ್ತಿಹಾಕಿದ್ದರು.

ಆದರೆ ಕೊಲೆಯ ಮಾತು ಹಾಗಿರಲಿಲ್ಲ. ಮರಣೋತ್ತರ ಶವಪರೀಕ್ಷೆಯಲ್ಲಿ ಹಾಗೂ ಕೆಮಿಕಲ್ ಎಕ್ಸಾಮಿನರ್‌ರ ವರದಿಗಳೆರಡರಲ್ಲೂ ಲಕ್ಷ್ಮೀಬಾಯಿಯ ಮೃತದೇಹದಲ್ಲಿ ಯಾವುದೇ ವಿಷದ ಅಂಶ ಕಂಡುಬಂದಿಸಲಿಲ್ಲ. ಆದುದರಿಂದ ಸರಕಾರಿ ಪಕ್ಷದ ವಾದವು ಇತರ ಪ್ರಾಸಂಗಿಕ ಸಾಕ್ಷಿಗಳನ್ನೇ ಸಂಪೂರ್ಣ ಅವಲಂಬಿಸಬೇಕಿತ್ತು.

ಲಕ್ಷ್ಮೀಬಾಯಿಯು ಮುಂಬಯಿಗೆ ಹೊರಡುವ ಮೊದಲು ಸಾಕಷ್ಟು ಆರೋಗದಿಂದಲೇ ಇದ್ದಳು ಎನ್ನುವುದಕ್ಕೆ ಅವಳನ್ನು ಅವಳು ಮನೆಯನ್ನು ಬಿಡುವವರೆಗೆ ನೋಡಿದ, ಮಾತಾಡಿಸಿದ ಅನೇಕ ನಂಬಲರ್ಹರಾದ ವ್ಯಕ್ತಿಗಳ ಸಾಕ್ಷಿಗಳಾದವು. ಅವಳ ರೋಗಗಳ ಇತಿಹಾಸದಿಂದಲೂ ಇದೇ ಸಂಗತಿ ವ್ಯಕ್ತವಾಯಿತು.

ಲಕ್ಷ್ಮೀಬಾಯಿಯ ಮನೆಯಲ್ಲಿ ಕೆಲಸದಾ- ಯಾಗಿದ್ದ ಶಾಂತಾಬಾಯಿಯ ಸಾಕ್ಷಿ ಡಾ. ಲಾಗುರವರ ಮೇಲಿನ ಆರೋಪ ಸಿದ್ಧಪಡಿಸ- ವಲ್ಲಿ ಮಹತ್ವದ ಪಾತ್ರವನ್ನಾಡಿತು. ಅವಳ ಕಿವುಡಿ ಮತ್ತು ಮೂಕಿಯಾದ್ದರಿಂದ ಕಿವುಡ- ಮೂಕರ ಶಾಲೆಯ ಪ್ರಿನ್ಸಿಪಾಲರ ಸಹಾಯದಿಂ- ಅವಳ ಸಾಕ್ಷಿಯನ್ನು ಕೇಳಿಕೊಳ್ಳಲಾಯಿತು. ಆದರೂ ತುಸುಮಟ್ಟಿಗೆ ಮರಾಠಿ ಓದುಬರೆ- ವನ್ನು ಅವಳು ತಿಳಿದಿದ್ದರಿಂದ ತುಂಬ ಪ್ರಯೋ- ಜನವಾಯಿತು. ಲಕ್ಷ್ಮೀಬಾಯಿ ಮುಂಬಯಿ- ಹೊರಟ ದಿನವೇ ಡಾ. ಲಾಗು ಅವಳಿಗೆರಡ- ಇಂಜೆಕ್ಶನ್‌ಗಳನ್ನಿತ್ತರೆಂದು ಅವಳಿತ್ತ ಹೇಳಿ- ಯನ್ನು ನಿರಾಕರಿಸುವುದು ಆರೋಪಿಗಾಗಲಿಲ್ಲ.

ಲಕ್ಷ್ಮೀಬಾಯಿಗೆ ಶುಶ್ರೂಷೆಯಿತ್ತ ಬಗ್ಗೆ ಡಾ. ಲಾಗು ಅವರ ದವಾಖಾನೆಯಲ್ಲಿ ಕೇಸ್ ಪೇಪರ- ಗಳು ದೊರೆತವು. ನವೆಂಬರ್ ೧೧ ರ ವರೆಗೆ ಅವ- ಗಿತ್ತ ಶುಶ್ರೂಷೆಯ ವಿವರಗಳೆಲ್ಲ ದೊರೆತವು. ಆದರೆ ೧೨ ರಂದು ಏನಾಯಿತೆಂದು ಮಾತ್ರ ಉಲ್ಲೇಖವಿರಲೇ ಇಲ್ಲ. ಆದರೆ ಇನ್ನೂ ವಿಚಿತ್ರ- ವೆಂದರೆ, ಲಕ್ಷ್ಮೀಬಾಯಿ ೧೩ ರಂದು ಮರ- ಹೊಂದಿದಳೆಂದು ಡಾ. ಲಾಗುರವರೇ ಒಪ್ಪಿದ್ದರೂ ಕೂಡ ೧೩ ನೇ ನವೆಂಬರ್‌ದಿಂದ ೨೮ ನೇ ಫೆಬ್ರು- ವರಿ ೧೯೫೭ ರ ವರೆಗೆ ಅವಳಿಗೆ ಶುಶ್ರೂಷೆಯಿತ್ತ ಬಗ್ಗೆ ಡಾ. ಲಾಗು ಅವರಲ್ಲಿ ಕೇಸ್ ಪೇಪರುಗಳ ದೊರೆತವು !

ಲಕ್ಷ್ಮೀಬಾಯಿಯನ್ನು ಜಿ. ಟಿ. ಆಸ್ಪತ್ರೆಯ- ಸೇರಿಸಿದ ನಂತರ ನಡೆದ ಘಟನೆಗಳು ಈ ಪ್ರಕ- ಣದ ಮಹತ್ವದ ಅಂಶಗಳ ಮೇಲೆ ಬೆಳ- ಬೀರುತ್ತವೆ.

ರೋಗಿ ಡೈಬೆಟಿಕ್ ಕೋಮಾದಿಂದಲ- ಸತ್ತಳೆಂದು ದಾಖಲೆ ತಯಾರಿಸಲು ಮತ್ತು ಮರಣೋತ್ತರ ಪರೀಕ್ಷೆಯಾಗದಂತೆ ಮಾಡ- ಕಾಣದ ಕೈಗಳು ಕೆಲಸ ಮಾಡಿದವೆಂದು ತೋ- ಬರುತ್ತದೆ.

ಲಕ್ಷ್ಮೀಬಾಯಿಯು ಸಾಯುವ ಸುಮಾ- ಕಾಲು ಗಂಟೆ ಮೊದಲು ಡಾ. ವರ್ತೈವಾರ ಆಜ್ಞೆ- ಮೇರೆಗೆ ಡಾ. ಅನೀಜಾ ಅವಳ ಮೂತ್ರ- ವನ್ನು ಎಸಿಟೋನ್‌ಗಾಗಿ ಪರೀಕ್ಷಿಸಿದಾಗ ಅದ-

ಅಂಶ ಅಲ್ಪಮಟ್ಟಿಗೆ ಕಂಡರೂ ಅವಳು ಡೈಬೆಟಿಕ್ ಕೋಮಾದಲ್ಲಿರುವಳೆಂಬುದನ್ನು ಹಾಗು ಅವಳ ನಿಧನದ ಕಾರಣ ಅದುವೇ ಎಂಬುದನ್ನು ಡಾ. ವರ್ಯೈವಾ ಒಪ್ಪುವುದಿಲ್ಲ. ಡೈಬೆಟಿಕ್ ಕೋಮಾ ಒಮ್ಮೆಲೆ ಬರುವುದಿಲ್ಲ; ಹಾಗು ಆ ಅವಸ್ಥೆಯಲ್ಲಿ ರೋಗಿಗೆ ನಡುಕ ಹುಟ್ಟುವುದಿಲ್ಲ. (ನಡುಕವನ್ನು ಡಾ. ಉಗಳೆ ಗಮನಿಸಿದ್ದರು) ಆದ್ದರಿಂದ ಅವಳ ಮರಣದ ಕಾರಣ ನಿರ್ಧರಿಸಲು ಮರಣೋತ್ತರ ಶವಪರೀಕ್ಷೆ ಆಗಬೇಕೆಂದು ವರ್ಯೈವಾ ಆಜ್ಞೆ ವಿಧಿಸುತ್ತಾರೆ. ಹಾಗೆಂದು ತಕ್ಷಣ ಡಾ. ಅನೀಜಾ ಕೇಸ್ ಪೇಪರಿನ ಮೇಲೆ ನಮೂದಿಸುತ್ತಾರೆ. ಆದರೆ ಅವಳ ಮೂತ್ರದಲ್ಲಿ ಎಸಿಟೋನ್ ಇರುವ ಅಂಶವನ್ನು ಮಾತ್ರ ಡಾ. ವರ್ಯೈವಾರ ಎದುರಿನಲ್ಲಿ ಕೇಸ್ ಪೇಪರಿನ ಮೇಲೆ ಬರೆಯಲಿಲ್ಲ. ನಂತರ ಯಾವಾಗಲೊ ಬೇರೆ ಮಶಿಯಲ್ಲಿ ಅದನ್ನು ಬರೆಯಲಾಗಿತ್ತಲ್ಲದೆ ಮರಣೋತ್ತರ ಶವಪರೀಕ್ಷೆಯಾಗಬೇಕೆಂದು ಮೊದಲು ಬರೆದುದನ್ನು ರದ್ದುಗೊಳಿಸಲಾಗಿತ್ತು. ಇವೆರಡೂ ಡಾ. ಅನೀಜಾರ ಹಸ್ತಾಕ್ಷರಗಳಲ್ಲಿಯೇ ಇದ್ದವು.

ಶವಪರೀಕ್ಷೆ ಏಕೆ ರದ್ದಾಯಿತು ? ಕೋರ್ಟಿನಲ್ಲಿ ಕೇಳಿದಾಗ ಡಾ. ಅನೀಜಾ ಹೇಳಿದ್ದುದು: ಇಂದುಮತಿಯ ಕೇಸ್ ಪೇಪರಿನೊಡನೆ ತಾನು ಹಿರಿಯ ಡಾಕ್ಟರರಾದ ಮೌಸ್ಕರರ ಕಚೇರಿಗೆ ಹೊರಟಿದ್ದಾಗ ಆ ಕಚೇರಿಯ ಬಾಗಿಲಲ್ಲೇ ನಿಂತಿದ್ದ ಆಸ್ಪತ್ರೆಯ ಇನ್ನೊಬ್ಬ ಹಿರಿಯ ಡಾಕ್ಟರ್ ಸೈಫಿಯವರು ಅದನ್ನು ನೋಡಿ ಎಸಿಟೋನ್ ಇದ್ದುದ್ದರಿಂದ ರೋಗಿ ಸತ್ತದ್ದು ಡೈಬೆಟಿಕ್ ಕೋಮಾದಿಂದೆಂಬುದು ನಿಸ್ಸಂದಿಗ್ಧವೆಂದೂ ಆದ್ದರಿಂದ ಮರಣೋತ್ತರ ಪರೀಕ್ಷೆ ಅನಗತ್ಯವೆಂದೂ ಹೇಳಿದರು. ಆ ಪ್ರಕಾರ ಪರೀಕ್ಷೆ ರದ್ದುಪಡಿಸಲಾಯಿತು— ಎಂದು.

ಆದರೆ ಡಾ. ಮೌಸ್ಕರರು ತಮ್ಮ ಸಾಕ್ಷಿಯಲ್ಲಿ ಕೇಸ್ ಪೇಪರ್ ತಮ್ಮ ಕಡೆ ಬಂದಿತ್ತೆಂದೊಪ್ಪಿದರಲ್ಲದೆ ಮರಣೋತ್ತರ ಪರೀಕ್ಷೆಗೆ ಸಂಬಂಧಿಕರ ಒಪ್ಪಿಗೆ ಬೇಕಾದ್ದರಿಂದ ತಾವು ಡಾ. ಲಾಗು ಅವರಿಗೆ ತಂತಿ ಕಳಿಸಿದ್ದಾಗಿ ಹೇಳಿದರು. ಅಲ್ಲದೆ ಕೇಸ್ ಪೇಪರಿನಲ್ಲಿ ಮರಣದ ಕಾರಣ ಬರೆಯದ್ದರಿಂದ ಅದನ್ನು ಬರೆಯಲು ಡಾ. ಸೈಫಿ ಅಥವಾ ಡಾ. ವರ್ಯೈವಾರ ಕಡೆ ಒಯ್ಯಲು ತಿಳಿಸಿದ್ದಾಗಿಯೂ ಹೇಳಿದರು.

ಆದರೆ ಡಾ. ಮೌಸ್ಕರರು ಮರಣದ ಕಾರಣವನ್ನು ಬರೆಯಲು ಡಾ. ವರ್ಯೈವಾ ಇಲ್ಲವೆ ಡಾ. ಸೈಫಿಯವರನ್ನು ಕೇಳಿರುವುದು ಸಾಧ್ಯವಿಲ್ಲ. ಏಕೆಂದರೆ ಡಾ. ವರ್ಯೈವಾರಿಗೆ ಮರಣೋತ್ತರ ಪರೀಕ್ಷೆ ರದ್ದಾದ ಸುದ್ದಿ ತಿಳಿದದ್ದು ಕೋರ್ಟಿನಲ್ಲಿಯೆ. ಇನ್ನು ಡಾ. ಸೈಫಿಯವರು ಅಂದು (೧೩ ರಂದು) ಆಸ್ಪತ್ರೆಯಲ್ಲಷ್ಟೇಯೇಕೆ, ಮುಂಬಯಿಯಲ್ಲೂ ಇರಲಿಲ್ಲ. ನವೆಂಬರ್ ೮ ರಿಂದ ಅವರು ರಜೆಯ ಮೇಲಿದ್ದು ಇಂದೂರಿನಲ್ಲಿದ್ದರು.

ಎಂದಾಗ ಈ ಕುರಿತು ಡಾ. ಅನೀಜಾ ಹಾಗು ಡಾ. ಮೌಸ್ಕರ ಇಬ್ಬರೂ ಸುಳ್ಳಾಡಿದ್ದಾರೆಂದಂತಾಯಿತು. ಅಂದ ಮೇಲೆ ಡಾ. ಅನೀಜಾ ಈ ತಿದ್ದುಪಡಿಗಳನ್ನು ಮಾಡಿದ್ದೇಕೆ? ಹಾಗೂ ಎಲ್ಲಿ? ತಾವು ಡಾ. ಮೌಸ್ಕರರ ಆಫೀಸಿನ ಬಾಗಿಲ ವರೆಗೆ ಬಂದುದನ್ನು ಡಾ. ಅನೀಜಾರೇ ಒಪ್ಪಿದ್ದಾರೆ. ಅಲ್ಲಿ ಅವರು ಹೇಳಿದ ಡಾ. ಸೈಫಿ ಇರಲಿಲ್ಲವೆಂದಾಗ ಆಫೀಸಿನೊಳಗೆಯೇ ಅವರು ಹೋಗಿರಬೇಕು. ಅಲ್ಲಿ ತಮ್ಮ ಹಿರಿಯ ಅಧಿಕಾರಿ ರೆಸಿಡೆಂಟ್ ಮೆಡಿಕಲ್ ಆಫೀಸರ್ ಡಾ. ಮೌಸ್ಕರರ ಆಜ್ಞೆಯ ಮೇರೆಗೆಯೇ ಈ ತಿದ್ದುಪಡಿಗಳನ್ನು ಅವರು ಮಾಡಿರಬೇಕು.

ಡಾ. ಅನೀಜಾರ ಸಾಕ್ಷಿಯಿಂದ ಡಾ. ಲಾಗು ಅವರು ಲಕ್ಷ್ಮೀಬಾಯಿಯು ನಿಧನ ಹೊಂದಿದಾಗ ಜಿ. ಟಿ. ಆಸ್ಪತ್ರೆಯಲ್ಲಿಯೇ ಇದ್ದರೆಂದೂ ಸಿದ್ಧವಾಯಿತು ಡಾ. ಲಾಗು ಹಾಗು ಡಾ. ಮೌಸ್ಕರ್ ೧೯೩೮ ರಲ್ಲಿ ಪುಣೆಯ ಎಸ್. ಪಿ. ಕಾಲೇಜಿನಲ್ಲಿ ಸಹಪಾಠಿಗಳಾಗಿದ್ದರು. ಹಾಗು ಅನೇಕ ವರುಷಗಳ ವರೆಗೆ ಡಾ. ಮೌಸ್ಕರ್ ಪುಣೆಯಲ್ಲಿ ವಾಸವಾಗಿದ್ದರು. ಜಿ. ಟಿ. ಆಸ್ಪತ್ರೆಯಲ್ಲಿ ತಮ್ಮ ಮಿತ್ರನೇ ಆರ್. ಎಂ. ಓ. ಆಗಿರುವುದು ಗೊತ್ತಿದ್ದುದರಿಂದಲೇ ವಿ. ಟಿ. ಯಿಂದ ಐದು ಫರ್ಲಾಂಗ್ ದೂರದಲ್ಲಿಯ ಈ ಆಸ್ಪತ್ರೆಗೆ ಡಾ. ಲಾಗು ಅವಳನ್ನು ತಂದರು. ಇಲ್ಲವಾದಲ್ಲಿ ಪ್ರಜ್ಞಾಹೀನಳಾದ ಲಕ್ಷ್ಮೀಬಾಯಿಯನ್ನು ವಿ.ಟಿ. ಯೆದುರಿನಲ್ಲೇ ಇರುವ ಸೇಂಟ್ ಜಾರ್ಜ್ ಆಸ್ಪ-

ತ್ರಿಗೆ ಕರೆದೊಯ್ಯುವುದು ಸ್ವಾಭಾವಿಕ ಕೃತಿಯೆನಿಸುತ್ತಿತ್ತು.

ಮರಣೋತ್ತರ ಪರೀಕ್ಷೆಗೆ ಲಕ್ಷ್ಮೀಬಾಯಿಯ ಮೃತದೇಹವನ್ನೊಪ್ಪಿಸದಿರಲು ಡಾ. ಲಾಗುರವರೇ ಡಾ. ಮೌಸ್ಕರರ ಮನವೊಲಿಸಿರಬೇಕು.

ಇಲ್ಲಿಂದ ಮುಂದೆ ಎಲ್ಲವೂ ಸ್ಪಷ್ಟವೇ ಇತ್ತು. ಡಾ. ಲಾಗುರಿಗೆ ಈ ಶವ ಆದಷ್ಟು ಬೇಗ ನಿರ್ನಾಮವಾಗುವುದು ಬೇಕಿತ್ತು. ಅದಕ್ಕಾಗಿ ಅವರು ಮೃತಳ ಸೋದರನ ಕಥೆ ಕಟ್ಟಿದರು. ಆತ ಬಂದು ಶವ ಸ್ವೀಕರಿಸದಿದ್ದರೆ ಅನಾಥ ಶವವೆಂದು ಅದನ್ನು ವಿದ್ಯಾರ್ಥಿಗಳಿಗೆ ಸಿಗಿಯಲು ಕೊಡುವರೆಂದು ಅನಾಟಮಿ ಆ್ಯಕ್ಟ್ ಗೊತ್ತಿದ್ದ ಲಾಗೂರಿಗೆ ಯಾರೂ ಹೇಳಿಕೊಡಬೇಕಿರಲಿಲ್ಲ. ಸಿಗಿದುಹೋದರೆ ಕೊಲೆ ಸಿದ್ಧವಾಗುವುದು ಅಸಾಧ್ಯವಾಗಿತ್ತು.

ಡಾ. ಲಾಗುರಿಗೆ ಬೇಕಾಗಿದ್ದುದು ಲಕ್ಷ್ಮೀಬಾಯಿಯ ಹಣ. ಲಕ್ಷ್ಮೀಬಾಯಿ ಸತ್ತಿದ್ದಾಳೆಂದು ಪ್ರಸಿದ್ಧವಾದರೆ ಅದು ಅವರ ಕೈ ಸೇರುತ್ತಿರಲಿಲ್ಲ. ಅದಕ್ಕಾಗಿ ಮೊದಲೇ ಅವಳ ಹೆಸರನ್ನು "ಇಂದುಮತಿ ಪಾವುನ್ಸೆ" ಎಂದು ಬರೆಸಿದ್ದರು. ಇದು ತೀರ ಸುಳ್ಳು ಹೆಸರಾಗಿರಲಿಲ್ಲ. ಲಕ್ಷ್ಮೀಬಾಯಿಯ ವಿವಾಹಪೂರ್ವ ಹೆಸರು ಇಂದುಮತಿ ಪೋಂಕ್ಸೆ ಎಂದಿತ್ತು. ಪುಣೆಯಲ್ಲಿ ಈ ಹೆಸರಿನ ಹೆಂಗಸು ಸತ್ತಳೆಂದು ಗೊತ್ತಾದರೂ ಸಂಶಯ ಬರಬಾರದೆಂದು ಅವಳ ಹೆಸರನ್ನು ತುಸು ಬದಲಾಯಿಸಿರಬೇಕು. ಲಕ್ಷ್ಮೀಬಾಯಿ ಇನ್ನೂ ಬದುಕಿದ್ದಳೆಂಬ ನಟನೆಗೆ ಆಧಾರವಿರಲೆಂದು ಅವಳ ಕೇಸ್‌ಪೇಪರಿನ ಮೇಲೆ ಚಿಕಿತ್ಸಾ ವಿವರಗಳನ್ನು ಬರೆಯುತ್ತಲೇ ಇದ್ದರೇನೋ.

ಎಲ್ಲವೂ ಅವರೆಣಿಸಿದಂತೆಯೆ ಆಯಿತು. ಆದರೆ ಅವರು ತಮ್ಮ ನಟನೆಯನ್ನು ಮಿತಿಮೀರಿ ಮುಂದುವರಿಸಿದ್ದರಿಂದಲೋ ಏನೋ ಲಕ್ಷ್ಮೀಬಾಯಿಯ ಸಂಬಂಧಿಕರಿಗೆ ಸಂಶಯ ಬಂದು ಅವರು ದೂರು ಕೊಟ್ಟರು. ಮೆಡಿಕಲ್ ಕಾಲೇಜಿನ ಪೇದೆ ಶವಪರೀಕ್ಷೆಗೆ ಕಾರಣನಾಗಿದ್ದ. ಅದೇ ಡಾ. ಲಾಗುಗೆ ಮುಳುವಾಯಿತು.

ಪ್ರಕರಣ ಮತ್ತೆ ಎದ್ದಾಗ ಲಕ್ಷ್ಮೀಬಾಯಿಯ ನಿಧನಕ್ಕೆ ಸಂಬಂಧಿಸಿದ ಎಲ್ಲ ವೈದ್ಯಕೀಯ ಕಾಗದ ಪತ್ರಗಳನ್ನೂ ವಿಶೇಷ ತಜ್ಞರಾದ ಡಾ. ಎಚ್.ಎಸ್. ಮೆಹತಾರಿಗೆ ಒಪ್ಪಿಸಲಾಗಿ ಅವರು ಅವಳ ನಿಧನವು ಡೈಬೆಟಿಕ್ ಕೋಮಾದಿಂದಲ್ಲವೆಂದು ಸ್ಪಷ್ಟ ಅಭಿಪ್ರಾಯ ಹೇಳಿದ್ದಲ್ಲದೆ ಮರಣೋತ್ತರ ಶವಪರೀಕ್ಷೆಯಲ್ಲಿ ಹಾಗು ರಾಸಾಯನಿಕ ವಿಶ್ಲೇಷಣೆಯಲ್ಲಿ ಕಂಡುಬರದಂತಹ ಗುರುತಿಸಲಾಗದ ವಿಷಗಳೂ ಹಲವಿವೆಯೆಂಬುದಾಗಿಯೂ ತಿಳಿಸಿದರು. ಆರೋಪಿಯು ಡಾಕ್ಟರ್ ಆಗಿದ್ದರಿಂದ ಅವರಿಗೆ ಇಂಥ ವಿಷಗಳು ಗೊತ್ತಿರುವುದು ಹಾಗೂ ಅವರ ಹತ್ತಿರ ಅವು ಇರುವುದು ಅಸಂಭವವೇನಲ್ಲ.

ಮರಣೋತ್ತರ ಪರೀಕ್ಷೆಯಲ್ಲಿ ವಿಷ ಸಿಗದಿದ್ದರೂ ಪರೀಕ್ಷಿಸಲಾದ ಅಂಗಾಂಗಗಳ ಬಗ್ಗೆ ಪರೀಕ್ಷಕರು ಬರೆದ ವರದಿಯ ವಿವರಗಳು ಡೈಬೆಟಿಕ್ ಕೋಮಾದಿಂದ ರೋಗಿ ಸತ್ತಿಲ್ಲವೆಂದು ತೋರಿಸಲು ಸಾಕಾದವು. ಲಕ್ಷ್ಮೀಬಾಯಿಯ ಹೊಟ್ಟೆಯಲ್ಲಿ ಆಹಾರವಿದ್ದುದು, ಅವಳ ಮೈ ಒಣಗದಿದ್ದುದು, ನಡುಕವಿದ್ದುದು ಕೋಮಾದ ಲಕ್ಷಣಗಳಿಗೆ ವಿರುದ್ಧವಾಗಿದ್ದವು. ಮಿದುಳಿನಲ್ಲಿ ಕೀವಾಗದಿದ್ದರೆ ಡೈಬೆಟಿಕ್ ಕೋಮಾ ಏಕಾಏಕಿ ಬರುವುದಿಲ್ಲ. ಶವಪರೀಕ್ಷಕರು ಕೀವಿನ ವರದಿ ಮಾಡಿರಲಿಲ್ಲ.

ಸೆಶನ್ಸ್, ಹೈಕೋರ್ಟುಗಳಲ್ಲಿ ತೀರ್ಮಾನವಾದ ಮೇಲೆ ವರಿಷ್ಠ ನ್ಯಾಯಾಲಯದ ಮುಂದೆ ಡಾ. ಲಾಗುರರ ಅಪೀಲು ಬಂತು. ಡಾ. ಲಾಗುರ ಮೇಲಿನ ಆರೋಪ ಸಿದ್ಧವಾಗಿದೆಂದು ಕೆಳಗಿನ ಎರಡು ನ್ಯಾಯಾಲಯಗಳು ವಿಧಿಸಿದ ಮರಣದಂಡನೆಯನ್ನು ನ್ಯಾಯಮೂರ್ತಿಗಳಾದ ಶ್ರೀ ಎಸ್. ಕೆ. ದಾಸ ಹಾಗು ಡಾ. ಎಂ. ಹಿದಾಯತುಲ್ಲಾರವರು ದೃಢಪಡಿಸಿದರು. ಅವರು ಬರೆದದ್ದು: "ಡಾ. ಲಾಗು ನಿಜವಾಗಿ ನೋಡಿದರೆ ಲಕ್ಷ್ಮೀಬಾಯಿಯ ಆಪ್ತ ಮಿತ್ರರು, ಹಿತಚಿಂತಕರು. ಅವಳ ಕಲ್ಯಾಣವಾಗುವಂತೆ ನೋಡಿಕೊಳ್ಳುವುದು ಅವರ ಆದ್ಯಕರ್ತವ್ಯವಾಗಿತ್ತು. ಆದರೆ ಅವರು ಅವಳು ತಮ್ಮಲ್ಲಿರಿಸಿದ ವಿಶ್ವಾಸದ ಸಂಪೂರ್ಣ ದುರುಪಯೋಗ ಮಾಡಿಕೊಳ್ಳಲೆತ್ನಿಸಿದರು. ಅವಳನ್ನು ಕೊಂದು ಅವಳ ಆಸ್ತಿಯನ್ನೆಲ್ಲ ಕಬಳಿಸುವ ಉದ್ದೇಶದಿಂದ ಅವರು ಸಂಪೂರ್ಣ

ಯೋಜನೆಯೊಂದನ್ನು ಮಾಡಿಕೊಂಡು ಕೃತಿಗಿಳಿಸಿದರು. ಆವಳು ಪುಣೆಯಲ್ಲಿಯೇ ಮರಣಹೊಂದಿದರೆ ಅನಾವಶ್ಯಕವಾಗಿ ಅವಳ ಸಂಬಂಧಿಕರು ಗದ್ದಲವೆಬ್ಬಿಸಬಹುದೆಂದು ಬಗೆದು ಅವಳನ್ನು ಮುಂಬಯಿಗೆ ಕರೆತಂದರು. ನಸುಕಿನಲ್ಲಿ ಮುಂಬಯಿಗೆಬರುವಂತಹ ಗಾಡಿಯನ್ನುಆಯ್ದುಕೊಂಡು ಅಲ್ಲಿ ಅನಾವಶ್ಯಕ ಸಂಶಯ ಬಾರದಂತೆ ನೋಡಿಕೊಂಡರು. ವಿ. ಟಿ. ಯ ಸಮೀಪವೇ ಸೇಂಟ್ ಜಾರ್ಜ್ ಆಸ್ಪತ್ರೆಯಿರುವಾಗ ಅವಳನ್ನು ದೂರದ ಜಿ.ಟಿ. ಆಸ್ಪತ್ರೆಗೆ ಕರೆದೊಯ್ದರಲ್ಲದೆ ಅಲ್ಲಿ ಅವಳ ಸರಿಯಾದ ಹೆಸರು ಹೇಳಲಿಲ್ಲ. ಹಾಗು ಅವಳ ರೋಗದ ಬಗ್ಗೆ ಅಲ್ಲಿಯ ಡಾಕ್ಟರರನ್ನು ತಪ್ಪು ಹಾದಿ ಹಿಡಿಸಿದರು. ನಂತರ ಅವಳು ಸಾಯುವವರೆಗೆ ಅಲ್ಲಿಯೇ ಉಳಿದು ತಮ್ಮ ಮಿತ್ರ ಡಾ. ಮೌಸ್ಕರರ ಮೂಲಕ ಶವಪರೀಕ್ಷೆಯಾಗದಂತೆ ನೋಡಿಕೊಂಡರು. ಅವಳ ಮೈಮೇಲಿನ ಆಭರಣ ಹಾಗು ಅವಳ ಹತ್ತಿರದ ಹಣವೆಲ್ಲವನ್ನೂ ತೆಗೆದುಕೊಂಡು ಆಸ್ಪತ್ರೆಯಲ್ಲಿ ಅವಳು ನಿರ್ಗತಿಕ ಹೆಣ್ಣುಮಗಳೆಂಬ ಭಾವನೆ ಬೀರಿದರು. ಒಮ್ಮೆ ಡಿಸೆಕ್ಶನ್ ನಡೆದುಹೋದ ಮೇಲೆ ಅವಳ ಮರಣದ ಕಾರಣ ಒತ್ತಟ್ಟಿಗಿರಲಿ, ಅವಳೇ ಮರಣ ಹೊಂದಿದಳೆಂದು ಸಿದ್ಧ ಮಾಡುವುದು ಕೂಡ ಕಠಿನವಿದೆಯೆಂಬುದು ಅವರಿಗೆ ಗೊತ್ತು."

ಡಾ. ಲಾಗು ಪರವಾಗಿ ವಾದಿಸಿದ ವಕೀಲರಿಗೆ ಅವರ ಪ್ರಕರಣದ ದೌರ್ಬಲ್ಯ ಗೊತ್ತಿತ್ತು. ಅದಕ್ಕಾಗಿ ಅವರು ಡಾ. ಲಾಗು ಕೊಲೆಮಾಡಿದ್ದು ಸುಳ್ಳು. ಆದರೆ ಲಕ್ಷ್ಮಿಬಾಯಿ ಸತ್ತ ಮೇಲೆಯೆ ಅವಳ ಆಸ್ತಿ ಎತ್ತಿಹಾಕುವ ವಿಚಾರ ಅವರ ತಲೆಯಲ್ಲಿ ಮೂಡಿ ಅವರು ಆ ಅಪರಾಧ ಮಾಡಿದರು ಎಂಬ ವಾದವನ್ನು ಮುಂದೊಡ್ಡಿದರು. ಶವಪರೀಕ್ಷೆಯಲ್ಲಿ ವಿಷ ಸಿಗಲಿಲ್ಲೆಂಬ ಅಂಶವನ್ನು ಅವರು ಒತ್ತಿಹೇಳಿದರು. ಸುಳ್ಳು ಹೆಸರು ಬರೆಸಿದ್ದು ದುರ್ಬುದ್ಧಿಯಿಂದಲ್ಲ. ಲಕ್ಷ್ಮೀಬಾಯಿಗೂ ಅವರಿಗೂ ಬಹುಶಃ ಅಂತರಂಗ ಪ್ರೀತಿಯಿದ್ದುದರಿಂದ ಅವಳನ್ನು ಅವಳ ತವರುಮನೆಯ ಹೆಸರಲ್ಲಿ ಕರೆದು ಅವರಿಗೆ ರೂಢಿಯಾಗಿರಬೇಕು. ಹಣ ಎತ್ತಿ ಹಾಕುವುದರಲ್ಲಿಯೂ ಅವರ ಉದ್ದೇಶ ಕೆಟ್ಟದ್ದಿರಲಿಲ್ಲ. "ಅದಕ್ಕೆ ನನ್ನದೂ ಸ್ವಲ್ಪ ಹಣ ಸೇರಿಸಿ ಯಾವುದಾದರೂ ಧರ್ಮಸಂಸ್ಥೆಗೆ ಕೊಡಬೇಕೆಂದಿದ್ದೆ" ಎಂದು ಲಾಗು ವಾದಿಸಿದ್ದರು!

ವರಿಷ್ಠ ನಾಯಾಲಯದ ಇಬ್ಬರು ನ್ಯಾಯಾಧೀಶರು ಈ ವಾದವನ್ನು ನಂಬಲಿಲ್ಲ. ಲಾಗು ಅವರ ನಿರಪರಾಧಿತ್ವಕ್ಕೆ ಒಂದೂ ಆಧಾರವಿಲ್ಲೆಂದು ಅವರ ಅಭಿಪ್ರಾಯವಾಗಿತ್ತು. ಮೂರನೇ ನ್ಯಾಯಾಧೀಶರಾದ ಎ. ಕೆ. ಸರಕಾರರು ಮಾತ್ರ ಲಾಗುರ ವಕೀಲರ ವಾದವನ್ನು ಅಂಶತಃ ಒಪ್ಪಿ ಅವರಿಗೆ ಸಂಶಯದ ಲಾಭ ಕೊಡಬೇಕೆಂದರು.

ಬಹುಮತದಿಂದ ಮರಣದಂಡನೆ ಸ್ಥಿರಪಟ್ಟಿತು. ಹೀಗೆ ನೇರ ಪುರಾವೆ ಇಲ್ಲದೆ ಮರಣದಂಡನೆ ವಿಧಿಸಿದ ಅತ್ಯಪೂರ್ವ ಪ್ರಕರಣಗಳಲ್ಲಿ ಇದೊಂದಾಯಿತು. *

ಡಾ. ಲಾಗು ಅವರು ದೇಶದ ಉಚ್ಚತಮ ನ್ಯಾಯಾಲಯದಲ್ಲಿ ತಮ್ಮ ಅಪೀಲು ವ್ಯರ್ಥವಾದಮೇಲೆ ರಾಷ್ಟ್ರಪತಿಗಳಿಂದ ಪ್ರಾಣಭಿಕ್ಷೆ ಬೇಡಿ ಅರ್ಜಿ ಮಾಡಿಕೊಂಡರು. ಬಹುಶಃ ನೇರವಾದ ಪುರಾವೆ ಇಲ್ಲದ್ದನ್ನು ಗಮನಿಸಿ ರಾಷ್ಟ್ರಪತಿಗಳು ಅವರ ಶಿಕ್ಷೆಯನ್ನು ಅಜೀವ ಕಾರಾಗ್ರಹ ವಾಸಕ್ಕೆ ಇಳಿಸಿದ್ದಾರೆ.

ಬುಟ್ಟಿತುಂಬ ಬುದ್ಧಿಗಿಂತ ಮುಷ್ಟಿಯಷ್ಟು ತಾಳ್ಮೆ ಲೇಸು. — ಡಚ್ ಗಾದೆ

ತಾಳ್ಮೆಯುಳ್ಳವನ ಕೋಪಕ್ಕಂಜು. — ಜಾನ್ ಡ್ರೈಡನ್

ತಾಳಿದವ ಬಾಳುವನು. — ಕನ್ನಡ ಗಾದೆ

# ದಾಕ್ಟರರ ಸಲಹೆ

ಪ್ರದೀಪನ ಮಗು ಹುಷಾರಿಲ್ಲ.
ಅವರು ದಾಕ್ಟರನ್ನು ನೋಡುತ್ತಾರೆ.




ದಾಕ್ಟರರು ಅವನಿಗೆ
ಸಲಹೆ ಕೊಡುತ್ತಾರೆ















**ಮ್ಯಾನರ್ಸ್ ಗ್ರೈಪ್ ಮಿಕ್ಶ್ಚರ್ ಕೊಟ್ಟು**

ಮುಖದಲ್ಲಿ ಪುನಃ ಮುಗುಳುನಗೆ ಮೂಡುವುದನ್ನು ನೋಡಿರಿ

GEOFFREY MANNERS & CO. LTD.

KAN ASP/GM-20 A

೧. ನಾಲಗೆಯ ಮೈ.
೨. ಜಿಹ್ವಾ ಟಾನ್ಸಿಲ್
೩. ವಾಯುನಾಳದ ಮುಚ್ಚಳ
೪. ಬಾಯಂಗಳದ ಟಾನ್ಸಿಲ್
೫. ಫರಿಂಕ್ಸ್
೬. ಅಡೆನಾಯ್ಡ್ ಟಾನ್ಸಿಲ್
೭. ಮೃದು ತಾಲು




ಇದು ಮಕ್ಕಳನ್ನು ಕಾಡುತ್ತದಾದರೂ ಅದರಿಂದ ಅನಂತ ಉಪಕಾರವಿದೆ

# ಟಾನ್ಸಿಲ್

"ಟುಡೇಸ್ ಹೆಲ್ತ್" ಆಧಾರದಿಂದ

ಟಾನ್ಸಿಲ್ಲುಗಳೆಂದರೆ ನಮ್ಮ ಗಂಟಲೊಳಗೆ ಆಯಕಟ್ಟಿನ ಸ್ಥಳಗಳಲ್ಲಿರುವ ಸ್ಪಂಜಿನಂಥ ರಚನೆಗಳು; ತಮ್ಮ ಮಗುವಿಗಾದ ಟಾನ್ಸಿಲ್ ಉಪದ್ರವಕ್ಕಾಗಿ ಅದನ್ನು ಶಪಿಸುವವರಿಗೆ ಟಾನ್ಸಿಲ್ಲುಗಳ ಉಪಕಾರ ಗೊತ್ತಿಲ್ಲ. ಅವು ನಮ್ಮ ಶರೀರದೊಳಗಿನ ಅಂಗಗಳ ಬಾಗಿಲಿಗಿರುವ ಕಾವಲುಗಾರರು. ನೀವು ಹುಟ್ಟಿ ಮೊದಲ ಉಸಿರನ್ನೆಳೆದುಕೊಂಡಂದಿನಿಂದ ನಿಮ್ಮ ಗಂಟಲ ಮೂಲಕ ಪ್ರವೇಶಿಸಲೆಳಸಿದ ರೋಗಾಣುಗಳನ್ನೂ ಇತರ ಹೊಲಸುಗಳನ್ನೂ ಹಿಡಿದು ಅವುಗಳನ್ನು ನಿರ್ನಾಮಮಾಡಲು ಅವು ಹೆಣಗುತ್ತ ಬಂದಿವೆ.

ಗಾಳಿಯೊಡನೆ ಪ್ರವೇಶಿಸಿದ ರೋಗಾಣುಗಳನ್ನು ಮಾತ್ರವಲ್ಲ, ನಿಮ್ಮ ಮಗು ತನ್ನ ಹೊಲಸು ಕೈಯನ್ನೂ ಇತರ ಸರಕುಗಳನ್ನೂ ಬಾಯೊಳಗೆ ತುರುಕಿದಾಗ ಅದರೊಡನೆ ಹೊಕ್ಕ ರೋಗಾಣುಗಳನ್ನೂ ಸೆರೆ ಹಿಡಿದು ಟಾನ್ಸಿಲ್ಲುಗಳು ಧ್ವಂಸ ಮಾಡುತ್ತವೆ.

ಗಂಟಲಲ್ಲಿ ಹಲವು ಟಾನ್ಸಿಲ್ಲುಗಳಿದ್ದರೂ ಸಾಮಾನ್ಯವಾಗಿ ಟಾನ್ಸಿಲ್ಲುಗಳೆಂದು ಕರೆಯಲ್ಪಡುವವುಗಳು ಗಂಟಲಲ್ಲಿ ನಾಲಿಗೆಯ ಹಿಂದೆ ಬಾಯಂಗಳಿನ ಎರಡೂ ಪಕ್ಕಗಳಲ್ಲಿರುವ ತಾಲವ್ಯ (Palatine) ಟಾನ್ಸಿಲ್ಲುಗಳು. ನಾಲಿಗೆಯನ್ನು ನೀಡಿ ಕೆಳಗೊತ್ತಿದರೆ ಕನ್ನಡಿಯಲ್ಲಿ ನೀವು ಅವನ್ನು ಕಾಣಬಹುದು. ಹಾಗೆಯೆ ನಾಲಗೆಯ ಬುಡದಲ್ಲೇ ಇನ್ನೊಂದು ಜತೆ ಟಾನ್ಸಿಲ್ಲುಗಳಿವೆ. ಇವಕ್ಕೆ ಜಿಹ್ವಾ ಟಾನ್ಸಿಲ್ಲುಗಳೆನ್ನಬಹುದು. ಮತ್ತೊಂದು ಜತೆ ಟಾನ್ಸಿಲ್ಲುಗಳು ನಿಮ್ಮ ಮೂಗಿನ ಮಾರ್ಗಗಳ ಹಿಂದೆ ಬಾಯಂಗಳ ಹಿಂದಿನ ಮೆತ್ತನ್ನ ಭಾಗದ ಮೇಲ್ಗಡೆ ಇದೆ. ಇವು ಅಡೆನಾಯ್ಡ್ ಟಾನ್ಸಿಲು

ಗಳು. ಇವುಗಳು ಗಾತ್ರದಲ್ಲಿ ಚಿಕ್ಕವಾಗಿದ್ದರೂ ಉಬ್ಬಿದಾಗ ಮೂಗಿನಿಂದ ಗಂಟಲೊಳಗೆ ಗಾಳಿ ಹೋಗುವ ಮಾರ್ಗವನ್ನು ಮುಚ್ಚಿಬಿಡಬಹುದು. ಈ ಟಾನ್ಸಿಲ್ ಬಾತವರು ಬಾಯಿಂದ ಉಸಿರಾಡಿಸಬೇಕಾಗುವುದು.

ಶರೀರವನ್ನು ಆಹಾರದೊಡನೆ ಅಥವಾ ಗಾಯಗಳ ಮೂಲಕ ಅಥವಾ ಗಾಳಿಯ ಸಂಗಡ ಪ್ರವೇಶಿಸುವ ಅಪಾಯಕರ ರೋಗಾಣು ಮೊದಲಾದ ಪದಾರ್ಥಗಳನ್ನು ನಾಶಮಾಡಲು ನಿಸರ್ಗವಿಟ್ಟ ಉಪಕರಣಗಳಲ್ಲಿ ಟಾನ್ಸಿಲ್ಲುಗಳೂ ಸೇರಿವೆ. ಅವುಗಳಲ್ಲಿ ಧಾರಾಳವಾಗಿರುವ ಬಿಳಿ ರಕ್ತಗೋಲಕಗಳು ರೋಗಾಣುಗಳನ್ನು ಆಕ್ರಮಿಸಿ ಅಕ್ಷರಶಃ ನುಂಗಿಬಿಡುತ್ತವೆ. ಟಾನ್ಸಿಲ್ಲುಗಳಲ್ಲಿ ಜೇನು ಹುಟ್ಟಿನಂಥ ಪದರು ಪದರಾದ ಜಾಲಗಳಿದ್ದು ಅವುಗಳಲ್ಲಿ ರೋಗಾಣುಗಳು ಸಿಕ್ಕಿಬೀಳುತ್ತವೆ.

ಮೂಗು ಬಾಯಿಗಳಿಂದ ಹೋಗುವ ಎಲ್ಲ ರೋಗಾಣುಗಳನ್ನು ಟಾನ್ಸಿಲ್ಲುಗಳು ಹಿಡಿಯಲಾರವಾದರೂ ಅವುಗಳಲ್ಲಿ ಬಹುದೊಡ್ಡ ಅಂಶವನ್ನು ಸೆರೆ ಹಿಡಿಯುತ್ತವೆ. ಮತ್ತು ಸಾಧ್ಯವಾದಷ್ಟನ್ನು ಕೊಲ್ಲುತ್ತವೆ. ಹೀಗೆ ಅಲ್ಲಿ ರೋಗಾಣುಗಳು ಕೂಡಿಬೀಳುವುದರಿಂದ ನೆಗಡಿ, ಗಂಟಲು ನೋವು ಮೊದಲಾದ ಅಸಂಖ್ಯ ತೊಂದರೆಗಳಿಗೆ ಅವೇ ಕಾರಣವೆಂದು ನಾವು ಭ್ರಮಿಸುತ್ತೇವೆ.

ತಮ್ಮೀ ಹೋರಾಟದಲ್ಲಿ ಸೋಲಾಗತೊಡಗಿದರೆ ಟಾನ್ಸಿಲ್ಲುಗಳು ಉಬ್ಬುತ್ತವೆ. ರೋಗನಾಶಕ ಬಿಳಿ ರಕ್ತಗೋಲಕಗಳು ರೋಗಾಣುಗಳನ್ನು ತಾವಾಗಿ ಅಥವಾ ಔಷಧಗಳ ಸಹಾಯದಿಂದ ಪೂರ್ತಿ ನಾಶಮಾಡಲು ಸಮರ್ಥವಾದರೆ ಈ ಬಾವು ತಾನಾಗಿ ಕುಗ್ಗಿ ನೋವು ಮಾಯವಾಗುತ್ತದೆ. ಆದರೆ ಕೆಲವೊಮ್ಮೆ "ಟಾನ್ಸಿಲೈಟಿಸ್" ತೀಕ್ಷ್ಣವಾಗಿದ್ದಾಗ ಮತ್ತು ಅದು ಬಹು ದಿನ ಹಾಗೆಯೆ ಉಳಿದರೆ ಉಸಿರಾಡಿಸಲಿಕ್ಕೂ ನುಂಗಲಿಕ್ಕೂ ಮಾತಾಡಲಿಕ್ಕೂ ಆತಂಕವಾಗಬಹುದು. ಅಡೆನಾಯ್ಡ್ ಟಾನ್ಸಿಲ್ಲುಗಳಿಗೆ ಅಸ್ವಸ್ಥವಾದರೆ ಕಿವಿ ಕೇಳದಿರಬಹುದು ಮತ್ತು ಉಸಿರಾಡಲಿಕ್ಕೂ ಕಷ್ಟವಾದೀತು. ಹಾಗೆಯೆ ಟಾನ್ಸಿಲ್ಲುಗಳಲ್ಲಿ ಕೂಡಿಬಿದ್ದ ರೋಗಾಣುಗಳೂ ಅವುಗಳು ಉತ್ಪಾ ದಿಸುವ ವಿಷಗಳೂ ಉಕ್ಕಿ ಹರಿದರೆ ಕಿವಿ, ಪಚ ನಾಂಗಗಳು ಮತ್ತು ಮೂಗಿನ ಮೇಲ್ಗಡೆ ಇರುವ ಪೊಳ್ಳು (ಸೈನ್ಯುಸ್) ಇವುಗಳಿಗೆ ರೋಗವಾಗ ಬಹುದು.

ಟಾನ್ಸಿಲ್ಲುಗಳು ಹೀಗೆ ಮೇಲಿಂದ ಮೇಲೆ ಗ್ರಸ್ತವಾದದ್ದಾದರೆ ಮತ್ತು ಅದರ ಪರಿಣಾಮ ತೀವ್ರವಾಗಿದ್ದರೆ ನಿಮ್ಮ ಡಾಕ್ಟರರು ಟಾನ್ಸಿಲ್ಲು ಗಳನ್ನು ಶಸ್ತ್ರಕ್ರಿಯೆಯಿಂದ ತೆಗೆದುಬಿಡಬೇ ಕೆಂದು ಸೂಚಿಸಬಹುದು. ಆಂಟಿಬಯಾಟಿಕ್ ಔಷಧಗಳು ಬರುವವರೆಗೆ ಟಾನ್ಸಿಲ್ ಉಪದ್ರ ವಕ್ಕೆ ಶಸ್ತ್ರಕ್ರಿಯೆಯೊಂದೇ ಪ್ರತೀಕಾರವೆಂದು ಭಾವಿಸಲಾಗಿತ್ತು. ಅನೇಕ ಶಸ್ತ್ರವೈದ್ಯರಿಗೆ ಇಂದಿಗೂ ಟಾನ್ಸಿಲ್ ತೆಗೆಯುವುದೇ ವ್ಯವಸಾ ಯದ ಮುಖ್ಯಾಂಶವಾಗಿದೆ. ಆದರೂ ಇಂದು ಶಸ್ತ್ರಕ್ರಿಯೆಯ ಸಲಹೆ ಕೊಡುವ ಮೊದಲು ಡಾಕ್ಟರರು ಬೇರೆ ಉಪಚಾರಗಳನ್ನು ಪ್ರಯೋ ಗಿಸಿ ನೋಡುತ್ತಾರೆ.

ಟಾನ್ಸಿಲ್ ಉಬ್ಬಿದೆಯೆಂದಾಕ್ಷಣ ಅದನ್ನು ತೆಗೆಸಲು ಧಾವಿಸಬೇಕಾಗಿಲ್ಲ. ಚಿಕ್ಕ ಮಗುವಿನ ಟಾನ್ಸಿಲ್ಲುಗಳು ದಿನಗಳೆದಂತೆ ಉಬ್ಬುತ್ತ ಶಾಲಾ ವಯಸ್ಸಿನಷ್ಟು ಹೊತ್ತಿಗೆ ಸಾಕಷ್ಟು ದೊಡ್ಡದಾಗಿ ಬಿಟ್ಟಿರುತ್ತದೆ. ಅದು ಬಾಲ್ಯವೆಲ್ಲ ಹಾಗೆಯೆ ಉಳಿದು ಪ್ರಾಯಕ್ಕೆ ಬಂದ ಮೇಲೆ ಮೆಲ್ಲಮೆಲ್ಲಗೆ ಚಿಕ್ಕದಾಗುತ್ತ ಹೋಗುತ್ತದೆ. ಬಾಲ್ಯದಲ್ಲಿ ಟಾನ್ಸಿಲ್ಲುಗಳು ದೊಡ್ಡದಾಗಿರಲು ಕಾರಣ ವೆಂದರೆ ಇತರ ಮಕ್ಕಳ ಸಂಪರ್ಕ ಹೆಚ್ಚಾಗಿ ನಾನಾ ತರದ ರೋಗಾಣುಗಳಿಗೆ ಮಗು ಗುರಿ ಯಾಗುವುದೇ ಇರಬೇಕು. ಮಕ್ಕಳು ಬೆಳೆದ ನಂತರ ಅನೇಕ ರೋಗಾಣುಗಳಿಗೆ ಶರೀರವು ಸಹಜ ಪ್ರತಿರೋಧ ಶಕ್ತಿಯನ್ನು ಪಡೆಯುವುದ ರಿಂದ ಮುಂದೆ ರೋಗನಿರೋಧ ಕಾರ್ಯದಲ್ಲಿ ಟಾನ್ಸಿಲ್ಲುಗಳ ಮಹತ್ವ ಗೌಣವಾಗುತ್ತದೆ.

ಟಾನ್ಸಿಲ್ಲುಗಳಲ್ಲಿ ರೋಗಾಣುಗಳು ಮಿತಿ ಮೀರಿ ಕೂಡಿಬಿದ್ದು ಅವು ಉಬ್ಬಿದರೆ ಮಾತ್ರ ಅದು ರೋಗಕ್ಕೆ ಕಾರಣವಾಗಬಲ್ಲದು. ಇಂಥ ಪ್ರಸಂಗದಲ್ಲಿ ಕೂಡ ಟಾನ್ಸಿಲ್ಲುಗಳನ್ನು ಕತ್ತರಿಸಿ ಹಾಕುವುದರಿಂದ ಪರಿಸ್ಥಿತಿ ಸುಧಾರಿಸಬಹುದೆಂದು ಖಂಡಿತ ಹೇಳಲುಬಾರದು. ಕೆಲ ಡಾಕ್ಟರರಂತೂ ಟಾನ್ಸಿಲ್ ಶಸ್ತ್ರಕ್ರಿಯೆ ನಿರುಪಯೋಗಿಯೆಂದೇ ಹೇಳತೊಡಗಿದ್ದಾರೆ. ಟಾನ್ಸಿಲ್ ತೆಗೆದ ಕೆಲ ಮಕ್ಕಳಿಗೆ ಆ ಮೇಲೆ ಶ್ವಾಸಾಂಗಗಳ ಪೀಡೆ ಕಡಿಮೆಯಾದಂತೆ ಕಂಡರೆ ಅದು ಶಸ್ತ್ರಕ್ರಿಯೆಯಿಂದಲ್ಲವೆಂದೂ ಮಕ್ಕಳಲ್ಲಿ ಸಹಜವಾಗಿಯೆ ರೋಗನಿರೋಧಕ ಶಕ್ತಿ ಹೆಚ್ಚುತ್ತ ಹೋಗುವುದರಿಂದ ಹಾಗೆ ಕಾಣಿಸುತ್ತದೆಂದೂ ಅವರು ಹೇಳುತ್ತಾರೆ. ಕೆಲ ಪರಿಶೀಲನೆಗಳು ಇದಕ್ಕೆ ಪುಷ್ಟಿ ಕೊಡುತ್ತವೆ. ಇಲಿನಾಸ್ ವಿಶ್ವವಿದ್ಯಾಲಯದವರು ನಡೆಸಿದ ಒಂದು ಪರಿಶೀಲನೆಯಲ್ಲಿ ಟಾನ್ಸಿಲ್ ತೆಗೆದ ಮಕ್ಕಳಿಗೆ ನೆಗಡಿಯಾಗುವುದಾಗಲಿ ಅದರ ತೀವ್ರತೆಯಾಗಲಿ ಕಡಿಮೆಯಾಗಲಿಲ್ಲೆಂದು ಸಿದ್ಧವಾಯಿತು. ಸಾವಿರಾರು ಹುಡುಗರನ್ನೊಳಗೊಂಡ ಇನ್ನೊಂದು ಪರಿಶೀಲನೆಯಲ್ಲಿ ಟಾನ್ಸಿಲ್ ತೆಗೆಸಿದ ಮಕ್ಕಳ ಆರೋಗ್ಯ ಸುಧಾರಣೆಯಾದಂತೆ ಕಂಡುಬರಲಿಲ್ಲ. ಟಾನ್ಸಿಲ್ ತೆಗೆಸಿದವರಿಗೂ ತೆಗೆಸಿದವರಷ್ಟೇ ನೆಗಡಿ ಮತ್ತು ಶ್ವಾಸ ವಿಕಾರಗಳಾಗುವುದು ಗೊತ್ತಾಯಿತು.

ಆದರೂ ಕೆಲವೇಳೆ ಶಸ್ತ್ರಕ್ರಿಯೆ ಅಗತ್ಯವೆನಿಸಬಹುದು. ಉದಾಹರಣೆಗೆ ಅಡೆನಾಯ್ಡ್ ಅಥವಾ ಟಾನ್ಸಿಲ್‌ಗಳು ಉಸಿರಾಡಿಸುವುದಕ್ಕೂ ನುಂಗುವುದಕ್ಕೂ ಆತಂಕ ಮಾಡಿದರೆ ಅವುಗಳ ರಕ್ಷಕ ಉಂಗುರವನ್ನು ಅಂಶತಃ ಕತ್ತರಿಸಿ ಹಾಕುವುದು ಅಗತ್ಯವೆನಿಸಬಹುದು.

ಐದು ವರ್ಷದೊಳಗಿನ ಮಕ್ಕಳಿಗೆ ಟಾನ್ಸಿಲ್ ಶಸ್ತ್ರಕ್ರಿಯೆ ಮಾಡಿಸುವುದು ಒಳಿತಲ್ಲವೆಂದು ಅನೇಕ ಡಾಕ್ಟರರು ಅಭಿಪ್ರಾಯ ಪಡುತ್ತಾರೆ. ಕೆಲಮಕ್ಕಳು ಬೆಳೆದಂತೆ ಟಾನ್ಸಿಲ್ಲಿನ ಲಿಂಫಾಯ್ಡ್ ರಚನೆಗಳು ಶಸ್ತ್ರಕ್ರಿಯಾನಂತರವೂ ಬೆಳೆಯುವುದುಂಟು. ಹೀಗಾದರೆ ಶಸ್ತ್ರಕ್ರಿಯೆ ಮಾಡಿದ ಸ್ಥಳದಲ್ಲಿ ಟಾನ್ಸಿಲ್ಲುಗಳು ಅಂಶತಃ ಚಿಗುರಿ ತೊಂದರೆ ಕೊಡುತ್ತವೆ.

ಅದೇ ಪ್ರಕಾರ ಶಸ್ತ್ರಕ್ರಿಯೆ ಅಗತ್ಯವೆನಿಸಿದಲ್ಲಿ ಅದನ್ನು ಬಿಟ್ಟು ಆಂಟಿಬಾಯಾಟಿಕ್ ಔಷಧಗಳನ್ನೇ ಅವಲಂಬಿಸುವುದೂ ಹಿತವಲ್ಲ. ಅನೇಕ ಆಂಟಿಬಾಯಾಟಿಕ್ ಔಷಧಗಳು ಎರಡು ಬಾಯಿಯ ಕತ್ತಿಯಂತಿದ್ದು ಅವುಗಳ ಮಿತಿಮೀರಿದ ಉಪಯೋಗವು ಲಾಭಕ್ಕಿಂತ ಹಾನಿಗೇ ಕಾರಣವಾಗುತ್ತದೆ. ಅನೇಕ ರೋಗಾಣುಗಳು ಈ ಔಷಧಗಳನ್ನು ಕಾಲ ಕಳೆದಂತೆ ದಕ್ಕಿಸಿಕೊಳ್ಳಲು ಕಲಿಯುತ್ತವೆ. ಶರೀರವೂ ಅದಕ್ಕೆ ಒಗ್ಗಿ ಹೋಗಬಹುದು. ಹೀಗೆ ಟಾನ್ಸಿಲ್ಲಿನಂಥ ಚಿಲ್ಲರೆ ಉಪದ್ರವವನ್ನು ತಡೆಯಲು ಉಪಯೋಗಿಸಿದ ಈ ಔಷಧಗಳು ಮುಂದೆ ಯಾವುದಾದರೂ ಘನರೋಗ ಬಂದಾಗ ನಿರರ್ಥಕವಾಗಬಹುದು.

ಇಂದು ಟಾನ್ಸಿಲ್ ಶಸ್ತ್ರಕ್ರಿಯೆ ಬಲು ಸುಕರವಾಗಿದೆ. ಆಸ್ಪತ್ರೆಯಲ್ಲಿ ಒಂದು ದಿನಕ್ಕಿಂತ ಹೆಚ್ಚು ಉಳಿಯಬೇಕಾಗುವುದು ವಿರಳ. ಬೆಳಗ್ಗೆ ಶಸ್ತ್ರಕ್ರಿಯೆಯಾದರೆ ರಾತ್ರಿ ಮನೆಗೆ ಮರಳಬಹುದು. ಸೂಕ್ತ ಪಥ್ಯಕ್ರಮದಲ್ಲಿದ್ದರೆ ಒಂದು ವಾರದೊಳಗೆ ಮಗು ಮತ್ತೆ ಶಾಲೆಗೆ ಹೋಗಬಹುದು. ಶಸ್ತ್ರಕ್ರಿಯಾನಂತರ ರಕ್ತ ಹರಿಯುವುದು ವಿರಳ; ಹರಿದರೂ ಅಪಾಯಕಾರಿಯಾಗುವುದು ಇನ್ನೂ ವಿರಳ. *



ಅವಳು ದಂತ ವೈದ್ಯನಿಗೆ ಹಲ್ಲು ತೋರಿಸಲು ಬಾಯಿ ತೆರೆದಳು. ಅವನೆಂದ: "ಅಷ್ಟು ಅಗಲಕ್ಕೇಕೆ ತೆರೆಯುತ್ತೀ ತಂಗಿ? ನಾನು ಹೊರಗೇ ನಿಂತು ಹಲ್ಲು ನೋಡಬೇಕೆಂದಿದ್ದೇನೆ."

# ಬಿಳಿಗೂದಲ ಬಲೆಯಿಂದ ಬಿಡಿಸಿಕೊಳ್ಳಿರಿ
# ಯಶಸ್ಸಿನ ಆವರಣದ ಒಳಬನ್ನಿ

## ಉಪಯೋಗಿಸಿರಿ ವಾಸ್ಮಾಲ್

ಬಿಳಿಗೂದಲನ್ನು ಪುನಃ ನಿಮ್ಮ ಸ್ವಾಭಾವಿಕ ಮಿರುಗುವ ಕಪ್ಪು ಕೂದಲಾಗಿಸಿ **ವಾಸ್ಮಾಲ** ನಿಮ್ಮನ್ನು ಕಿರಿಯರಂತೆ ಕಾಣಿಸುವಂತೆ, ಭಾವಿಸುವಂತೆ, ಅಧಿಕ ಆಕರ್ಷಕವನ್ನಾಗಿ ಮಾಡುವದಲ್ಲದೆ, ಹೆಚ್ಚಿನ ಪ್ರಗತಿಪಥದಲ್ಲಿ ಮುನ್ನಡೆಸುತ್ತದೆ ಒಂದು ಪ್ರಾಮಾಣಿಕ ಕಪ್ಪು ಕೂದಲಾಗಿಸುವ, ಕೇಶ ಶಕ್ತಿವರ್ಧಕ ಮತ್ತು ಪರಿಪೂರ್ಣ ಕೇಶಶೃಂಗಾರ, **ವಾಸ್ಮಾಲ** ಕೇಶ ಕ್ಷೇಮಕ್ಕೆ ಒಂದೇ ಆದ ಸಮಗ್ರ ಸೂತ್ರ.




ಎಲ್ಲ ಕೆಮಿಸ್ಟರುಗಳಲ್ಲಿ ಮತ್ತು ಅಂಗಡಿಗಳಲ್ಲಿ ವಿಶೇಷ ತೈಲ ರೂಪದಲ್ಲಿ ಮತ್ತು ಘೃತರೂಪದಲ್ಲಿ, ಕೆಡಿಸಲವಕಾಶವಿಲ್ಲದ ಶೀಸೆಗಳಲ್ಲಿ ದೊರೆಯುತ್ತದೆ

ಹೈಜೀನಿಕ್ ರಿಸರ್ಚ್ ಇನ್‌ಸ್ಟಿಟ್ಯೂಟ ಪೋ. ಆ. ಬಾಕ್ಸ 1192, ಮುಂಬೈ-1

ಅದರ ಬೆಲೆ ೧೦೦ ಕೋಟಿ
ರೂಪಾಯಿಯಷ್ಟಿತ್ತು. ಆದರೆ
ಕಾಲ ಅದನ್ನೂ ಕಬಳಿಸಿತು!

# ಇರಾಣಿನ ಅಪ್ರತಿಮ ರತ್ನಗಂಬಳಿ

ವಿವಿಧ ಮೂಲಗಳಿಂದ

ರತ್ನಗಂಬಳಿ ಎಂಬ ಹೆಸರನ್ನು ಸಾಮಾನ್ಯವಾಗಿ ಎಲ್ಲರೂ ಕೇಳಿರುತ್ತಾರೆ. ಚಿಕ್ಕಂದಿನಲ್ಲಿ ಕೇಳಿದ ಕಥೆಗಳಲ್ಲಿ ತನ್ನ ಮೇಲೆ ಕುಳಿತವನನ್ನು ಎಲ್ಲಿ ಬೇಕಲ್ಲಿಗೆ ನಿಮಿಷಾರ್ಧದಲ್ಲಿ ಅಂತರಿಕ್ಷ ಮಾರ್ಗವಾಗಿ ಕರೆದೊಯ್ಯುತ್ತಿದ್ದ ಮಾಯಾ ಕಂಬಳಿಯ ಕಥೆಯೂ ಒಂದಾಗಿರಬಹುದು. ಆದರೆ ನಿಜವಾಗಿಯೂ ರತ್ನಗಳಿರುವ ಕಂಬಳಿಯನ್ನು ನೋಡಿದವರಾಗಲಿ ಅಥವಾ ಅಂತರಿಕ್ಷದಲ್ಲಿ ಹಾರುವ ಕಂಬಳಿಯನ್ನು ಕಂಡವರಾಗಲಿ ಯಾರೂ ಇಲ್ಲ.

ಆದರೆ ಒಂದು ಮಾತು—, ಇಂದು ನಾವು ರತ್ನಖಚಿತವಾದ ಕಂಬಳಿಯನ್ನು ಕಾಣುವುದಂತಿರಲಿ, ಅಂಥ ಕಂಬಳಿಯಿರುವುದನ್ನು ಕೂಡ ಕಲ್ಪಿಸಿಕೊಳ್ಳಲಾರೆವಾದರೂ ಹಿಂದಕ್ಕೊಮ್ಮೆ ರತ್ನ, ವಜ್ರ, ಬಂಗಾರ, ರೇಶಿಮೆ ಮುಂತಾದವುಗಳಿಂದಲೇ ಹೆಣೆಯಲ್ಪಟ್ಟ ರೂ. ೧೦೦,೦೦,೦೦,೦೦೦ (ನೂರು ಕೋಟಿ) ರೂಪಾಯಿ ಬೆಲೆಬಾಳುವ ಕಂಬಳಿಯಿತ್ತೆಂಬುದು ಸಂಪೂರ್ಣ ಸತ್ಯವಾದ ಮಾತು. ಆ ಕಂಬಳಿಯ ಕಥೆಯೆ ಇದು.

ಪರ್ಶಿಯ (ಈಗಿನ ಇರಾಣ)ದ ರಾಜನಾಗಿದ್ದ ಎರಡನೆಯ ಖುಸ್ರು ಈ ಕಂಬಳಿಯನ್ನು ನೇಯಿಸಿದ ಬಹಾದ್ದೂರ. ಇಷ್ಟೊಂದು ಬೆಲೆಬಾಳುವ ವಜ್ರಾದಿಗಳನ್ನು ಈ ಕಂಬಳಿಯಲ್ಲಿ ಎಲ್ಲಿ ಬೇಕೆಂದಲ್ಲಿ ತುರುಕಿರಲಿಲ್ಲ. ಅವುಗಳನ್ನು ದೇಶದ ಸಂಸ್ಕೃತಿ, ಜನಜೀವನ ಮುಂತಾದವುಗಳ ಪ್ರತೀಕವಾಗಿ ಬಹು ಕಲಾತ್ಮಕವಾಗಿ, ಸುಂದರವಾಗಿ ಹೆಣೆದಿದ್ದರು. ಪರ್ಶಿಯದ ನಿಸರ್ಗರಮ್ಯ ದೃಶ್ಯಗಳು, ಸಂಪತ್ತುಗಳು, ಭಾವನೆಗಳು, ಧರ್ಮ, ತತ್ವ—ಎಲ್ಲವೂ ಆ ಕಂಬಳಿಯಲ್ಲಿ ಈ

ಮುತ್ತುರತ್ನಗಳ ಮೂಲಕ ಪ್ರತಿಬಿಂಬಿತವಾಗಿದ್ದವು.

ಖುಸ್ರು ವೈಭವಪ್ರಿಯನಾಗಿದ್ದ. ಅವನ ಸಭಾಭವನದ ೧೨೧ ಅಡಿ ಪರಿಧಿಯ ಅರ್ಧವರ್ತುಲ ಒಳಮಾಳಿಗೆಯ ಮೇಲೆ ನೀಲಿ ಹಿನ್ನೆಲೆಯಲ್ಲಿ ಬಂಗಾರದ ಎಳೆಗಳಿಂದ ರಾಶಿ ಚಕ್ರವನ್ನು ಬರೆದಿತ್ತು. ಆತನ ಸಿಂಹಾಸನ ಬಂಗಾರದ್ದು. ಅದರ ಕಾಲುಗಳಲ್ಲಿ ನೀಲ-ಪಚ್ಚೆಗಳು ಕೂಡಿಸಲ್ಪಟ್ಟಿದ್ದವು. ಮೇಲ್ಗಡೆ ನೇತಾಡುತ್ತಿದ್ದ ಸುವರ್ಣ ಕಿರೀಟದ ಕೆಳಗೆ ಖುಸ್ರು ಸಿಂಹಾಸನದ ಮೇಲೆ ಕುಳಿತಾಗ ಆ ಎಲ್ಲ ವೈಭವ ಕಣ್ಣುಕೋರೈಸುತ್ತಿತ್ತು. ಆದರೆ,ಈ ನಿಜವಾದ ರತ್ನಗಂಬಳಿಯನ್ನು ರಾಜನ ಎದುರು ಹಾಸಿದಾಗ ಅದರಲ್ಲಿನ ವಜ್ರಾದಿಗಳ ಹೊಳಪು ರಾಜನನ್ನೂ ಅವನ ಸಿಂಹಾಸನವನ್ನೂ ತೇಜೋಹೀನರನ್ನಾಗಿ ಮಾಡಿಬಿಡುತ್ತಿತ್ತು.

ಕಂಬಳಿಯ ಮೇಲೆ ಹೂಗಿಡಗಳಿಂದ ಫಲವೃಕ್ಷಗಳಿಂದ ಭರಿತವಾದ ತೋಟ ಹಬ್ಬಿತ್ತು. ನಡನಡುವೆ ಕಾಲುದಾರಿಗಳು. ಅಲ್ಲಲ್ಲಿ ಕಾರಂಜಿಗಳು. ವಜ್ರನಿರ್ಮಿತವಾದ ಎರಡು ನದಿಗಳು ಕಂಬಳಿಯನ್ನು ನಾಲ್ಭಾಗಗಳಾಗಿ ಮಾಡಿದ್ದವು. ಇವುಗಳ ನಡುವೆ ಸಾವಿರಾರು ಅಡಿ ಅತ್ಯಂತ ಶುಭ್ರವಾದ ಶುದ್ಧ ರೇಶ್ಮೆಯ ಪಟ್ಟಿ ಹಾಯ್ದಿತ್ತು. ನದಿಗಳು ಒಂದನ್ನೊಂದು ಕತ್ತರಿಸುವಲ್ಲಿ ನಟ್ಟ ನಡುವೆ ವಜ್ರಮಯವಾದ ಒಂದು ಕೊಳ; ಅದರಲ್ಲಿ ನಾಲ್ಕು ಹಂಸಗಳು ತೇಲುತ್ತಿದ್ದವು. ಕಂಬಳಿಯ ನಾಲ್ಕು ಮೂಲೆಗಳಲ್ಲಿ ನಾಲ್ಕು ಪಚ್ಚೆರತ್ನಗಳಿಂದ ರಚಿತವಾದ ಮಹಾ ದೇವದಾರುಗಳು. ಅವುಗಳ ಮೇಲೆ ಮುತ್ತುರತ್ನಗಳ, ಹವಳ ನೀಲಗಳ, ವಜ್ರ-ಮಾಣಿಕಗಳ ನವಿಲುಗಳು, ಗಿಣಿಗಳು, ಹಂಸಗಳು—ನಾನಾ ಬಗೆಯ ಹಕ್ಕಿಗಳು ಕುಳಿತು ಶೋಭಿಸುತ್ತಿದ್ದವು.

ರೇಶ್ಮೆ ಮತ್ತು ಮುತ್ತಿನ ಬಿಳಿಯ ಬಣ್ಣ ಶಾಂತಿ ಸತ್‌ಶೀಲದ ಪಾವಿತ್ರ್ಯದ ದ್ಯೋತಕವಾಗಿತ್ತು. ಬಂಗಾರದ ಬಣ್ಣ ರಾಜಮನೆತನದ ಆಢ್ಯತೆಯನ್ನು ಸೂಚಿಸುತ್ತಿತ್ತು.

ಜನರು ಸಾಯಬಹುದು, ರಾಜರು ಅಳಿಯಬಹುದು, ಆದರೆ ನಿಸರ್ಗ ಮಾತ್ರ ಎಂದೆಂದಿಗೂ ಸುಂದರವಾಗಿ, ಹಚ್ಚಹಸುರಾಗಿ ಶೋಭಿಸುತ್ತಲೇ ಇರುವುದು. ಈ ರತ್ನಗಂಬಳಿಯ ಮೇಲೆ ಜೀವನದ ನಾನಾ ಸಂಕಟಗಳನ್ನು ಮೀರಿ ಸದಾ ಸಂತಸದ ವಸಂತ ಮಾಸವೇ ಮೈವೆತ್ತು ನಿಂತಂತಿತ್ತು. ಈ ಅದ್ಭುತ ವಿಸ್ತಾರದ ಕಂಬಳಿಯ ಮೇಲೆ ಪ್ರತಿ ಕೆಲವೇ ಇಂಚುಗಳಿಗೊಮ್ಮೆಯಂತೆ ತುಂಬಿ ನಿಂತಿದ್ದ ಪಚ್ಚೆಗಳ ಬಣ್ಣ ಜೀವನದಲ್ಲಿ ತಾರುಣ್ಯ, ಸೌಂದರ್ಯ, ಸಂತೋಷಗಳೇ ಅತ್ಯುತ್ತಮವಾದವು ಎಂದು ಸಾರುತ್ತಿತ್ತು. ಕೊನೆಗೂ ಸತ್ಯಕ್ಕೆ, ಧರ್ಮಕ್ಕೆ, ಒಳಿತಿಗೆ ವಿಜಯ ಕಟ್ಟಿಟ್ಟದ್ದು, ಎಂಬ ನಂಬಿಗೆಯನ್ನೂ ಜೀವನದ ಆಶಾವಾದಿತ್ವವನ್ನೂ ಸಾರುತ್ತಿದ್ದ ಈ ರತ್ನಗಂಬಳಿಯನ್ನು ಜನ "ವಸಂತ ಕಂಬಳಿ," "ಸ್ವರ್ಗದ ಕಂಬಳಿ" ಎಂದು ಕರೆಯತೊಡಗಿದರು.

ಕಂಬಳಿಯ ಸೌಂದರ್ಯ ರಾಜಕೀಯ ಉದ್ದೇಶವೊಂದನ್ನೂ ಸಾಧಿಸುವುದಾಗಿತ್ತು. ಖುಸ್ರುವಿನ ಈ ಶತಕೋಟಿ ಬೆಲೆಯ ಕಂಬಳಿಯನ್ನು ಕಂಡೊಡನೆಯೆ ಶತ್ರುಗಳು ದಿಗ್ಭ್ರಾಂತರಾಗಿ ಬಿಡುತ್ತಿದ್ದರು. ರಾಜನ ಬೊಕ್ಕಸ ಹೀಗೆ ಸರ್ವರ ಎದುರು ಪ್ರದರ್ಶಿತವಾಗುವಂತಾಗಿತ್ತು. ಸಿಂಹಾಸನಕ್ಕೆ ನಿಷ್ಠರಾಗಿ, ಅನುಕೂಲರಾಗಿ ಇರುವವರಿಗೆಲ್ಲ ಈ ಕಂಬಳಿಯಲ್ಲಿ ನಿಸರ್ಗದ ಸಂಪತ್ತು ಮತ್ತು ಸೌಂದರ್ಯ ಮಾತ್ರ ಕಾಣಿಸುತ್ತಿತ್ತು. ಮಾನವನಲ್ಲಿ ನೆಲೆಗೊಳ್ಳಬಹುದಾದ ಸತ್ಯ-ಶೀಲ-ಸಚ್ಚಾರಿತ್ರ್ಯಗಳೂ ಅವಕ್ಕೆ ಲಭ್ಯವಾಗುವ ಶ್ರೇಯಸ್ಸೂ ಕಂಬಳಿಯ ಹೊಳಪಿನಲ್ಲಿ ಅವರಿಗೆ ಗೋಚರವಾಗುತ್ತಿದ್ದವು. ಆದರೆ ಸ್ವಾರ್ಥಪರರೂ ರಾಜನ ಅನಿಷ್ಟವನ್ನು ಚಿಂತಿಸುವವರೂ ಅದನ್ನು ನೋಡಿದಾಗ ಅವರಿಗೆ ಅದರಲ್ಲಿ ರಾಜನ ಅಪಾರ ಸಂಪತ್ತು ಸಾಮರ್ಥ್ಯಗಳ ದರ್ಶನವಾಗಿ ಅವರು ನಡುಗಲಾರಂಭಿಸುತ್ತಿದ್ದರು. ರಾಜನನ್ನು ಕೆರಳಿಸಿದರೆ

ಕೆಟ್ಟೀವು ಎಂದು ಅವರಿಗೆ ಮನವರಿಕೆಯಾಗಿ ಅವರು ಆ ವಿಚಾರವನ್ನೆ ತ್ಯಜಿಸುವಂತಾಗುತ್ತಿತ್ತು.

ಇಂಥ ಅತ್ಯಧಿಕ ಬೆಲೆಯ ಕಂಬಳಿಗೆ ಬೇಕಾದ ಸಾಮಗ್ರಿಗಳನ್ನು ಸಂಗ್ರಹಿಸಿದ ರೀತಿಯೂ ಕುತೂಹಲಕಾರಿಯಾಗಿದೆ. ಖುಸ್ರು ಅವನ್ನು ಎರಡು ವಿಧದಲ್ಲಿ ಸಂಪಾದಿಸಿದ. ಪ್ರಜೆಗಳು ಅವನಿಗೆ ತಮ್ಮ ಭಕ್ತಿಯ ಕಾಣಿಕೆಯೆಂದು, ಕೃತಜ್ಞತೆಯ ದ್ಯೋತಕವೆಂದು ಆಗಾಗ ಬೆಲೆಯುಳ್ಳ ವಸ್ತುಗಳನ್ನು ಕೊಡುತ್ತಿದ್ದರು. ಅವನ ಸಾಮಂತರು ಕೂಡ ಮುತ್ತು-ರತ್ನಾದಿಗಳ ಕಾಣಿಕೆಯನ್ನು ಅರ್ಪಿಸುತ್ತಿದ್ದರು.

ಶ್ರೇಷ್ಠ ಕಲಾವಿದರಾದ ನೇಕಾರರು ರಾಜನಲ್ಲಿ ಶೇಖರವಾಗಿದ್ದ ಈ ಮುತ್ತುರತ್ನಗಳು, ಚೀನದಿಂದ ಇದಕ್ಕಾಗಿಯೇ ತರಿಸಿದ ರೇಶ್ಮೆ ಬಟ್ಟೆಗಳನ್ನು ತೆಗೆದುಕೊಂಡು ಅದನ್ನು ಭವ್ಯ ಕಂಬಳಿಯನ್ನಾಗಿ ನೇಯ್ದರು. ಅದರಲ್ಲಿಯ ಪ್ರತಿಯೊಂದು ಎಳೆ, ಗಂಟು, ಸುಳಿವು ಕಲಾದೃಷ್ಟಿಯಿಂದ ಪರಿಪೂರ್ಣವಾಗಿತ್ತು. ಮುತ್ತಿನ ಝಾಲರಿಯ ಅಂಚನ್ನು ಬಿಟ್ಟೇ ಕಂಬಳಿ ೧೧೫ ಅಡಿ ಅಗಲವಾಗಿತ್ತು.

ಕಂಬಳಿಯನ್ನು ಕಂಡ ಸಹಸ್ರಗಟ್ಟಲೆ ಜನ ಆಶ್ಚರ್ಯಚಕಿತರಾಗಿಬಿಟ್ಟರು. ಕಂಬಳಿಯಲ್ಲಿ ಮಂತ್ರಶಕ್ತಿಯಿದೆ ಎಂದು ಜನ ಅನ್ನತೊಡಗಿದರು. ಪರ್ಶಿಯನ್ ಸ್ವರ್ಗದ ಪ್ರತೀಕವಾಗಿ ಬಿಟ್ಟಿತು ಈ ಕಂಬಳಿ. ಗೋಡೆಗಳಿಂದಾವೃತವಾದ ತೋಟದ ಚಿತ್ರ, ದೇಶದ ಧಾರ್ಮಿಕ ಪ್ರಮುಖನಾದ ರಾಜ ತನ್ನ ಪ್ರಜೆಗಳನ್ನು ಸನ್ಮಾರ್ಗದಲ್ಲಿ ನಡೆಸಿಕೊಂಡು ಹೋಗಲು ಬದ್ಧನಾಗಿರುವನೆಂಬುದರ ದ್ಯೋತಕವಾಗಿತ್ತು.

ಆದರೆ ಆ ನಂತರದ ಜನರಿಗೆ ಈ ಕಂಬಳಿಯ ಆಧ್ಯಾತ್ಮಿಕ, ಭಾವನಾತ್ಮಕ ಅಥವಾ ಕಲಾತ್ಮಕ ಬೆಲೆ ಅನಿಸದಂತಾಗತೊಡಗಿತು. ಇರಾಣದಲ್ಲಿ ಸಾರ್ವತ್ರಿಕ ಉತ್ಸವದ ಋತುವಾದ ವಸಂತ ಋತುವಿನ ಛಾಯೆಯನ್ನು ಕೂಡ ಇವರು ಕಾಣದಾದರು. ಅವರ ಧನಲಾಲಸೆಯ ಕಂಗಳಿಗೆ ಆ ಮುತ್ತು ರತ್ನಗಳಲ್ಲಿ ವ್ಯಕ್ತವಾದ ಸಾಂಕೇತಿಕ

ಭಾವಗಳು, ದರ್ಶನಗಳು ಕಾಣಿಸುವ ಬದಲು ಅವುಗಳ ವ್ಯಾವಹಾರಿಕ ಬೆಲೆಯ ಅಂಕೆಯೆ ಹೆಚ್ಚು ಆಕರ್ಷಕವಾಯಿತು.

ಖುಸ್ರುವಿನ ಮರಣಾನಂತರದಲ್ಲಿ ಅವನ ಮಗ ರಾಷ್ಟ್ರದ ಸಂಪತ್ತಿನಲ್ಲಿ ಬಹುಭಾಗವನ್ನು ಪೋಲು ವೆಚ್ಚ ಮಾಡಿಬಿಟ್ಟ. ಆ ಮೇಲೆ ಕ್ರಿ. ಶ. ೬೪೨ ರಲ್ಲಿ ಪರ್ಶಿಯವನ್ನು ಗೆದ್ದುಕೊಂಡ ಅರಬರು ಅವನಿಂದ ಅಳಿದುಳಿದ ಸಂಪತ್ತನ್ನೂ ದೋಚಿ ಕೊಂಡರು. ಹಸಿದ ಕ್ರೂರ ಮೃಗಗಳಂತೆ ಅವರು ಈ ದಿವ್ಯ-ಭವ್ಯ ಅಮೌಲ್ಯ ರತ್ನಗಂಬಳಿಯ ಮೇಲೆ ಎರಗಿದರು. ಅದರಲ್ಲಿನ ರತ್ನಾದಿಗಳನ್ನು ತೆಗೆದುಕೊಳ್ಳಲು ಅದನ್ನು ಹರಿದು ಚಿಂದಿ ಚಿಂದಿ ಮಾಡಿದರು. ಕುಂಬಾರನಿಗೆ ವರುಷ, ದೊಣ್ಣೆಗೆ ನಿಮಿಷವೆಂದಾಗಿ ಹೋಯಿತು ಕಂಬಳಿಯ ಅವಸ್ಥೆ. ಖಲೀಫ ಉಮರ ಅದರ ಐದರಲ್ಲೊಂದಂಶವನ್ನು ತೆಗೆದುಕೊಂಡ. ಇನ್ನೊಂದು ತುಂಡು ಪ್ರವಾದಿ ಮಹಮ್ಮದರ ಅಳಿಯ ಅಲಿಗೆ ಹೋಯಿತು. ಸಹಸ್ರಾರು ಸೈನಿಕರು, ಅವರ ನಾಯಕರು ಒಂದೊಂದು ತುಂಡಿಗಾಗಿ ಇಷ್ಟು ಸಿಕ್ಕರೆ ಮುಂದಿನ ಜೀವಮಾನವನ್ನೆಲ್ಲ ಐಷಾರಾಮದಿಂದ ಕಳೆಯಬಹುದು ಎಂದು ಗುದ್ದಾಡಿದರು. ಸಾಮಾನ್ಯ ಸೈನಿಕನೊಬ್ಬನಿಗೆ ಸಿಕ್ಕಿದ ತುಣುಕೇ ಬಗದಾದ ಪೇಟೆಯಲ್ಲಿ ರೂ. ೧೫,೦೦೦ ಬೆಲೆ ತಂದಿತು. ಪರ್ಶಿಯದ ಒಕ್ಕಟ್ಟಿನ ಸಮೃದ್ಧಿಯ ಸಂಕೇತ ನಾಶವಾಗಿಹೋಯಿತು.

ಕಟ್ಟುಕಥೆಯೊಂದನ್ನು ನಿಜವಾಗಿ ಮಾಡಿದ್ದ ಈ ರತ್ನಗಂಬಳಿಯ ಒಂದು ತುಣುಕು, ಒಂದು ಎಳೆ ಕೂಡ ಈಗಿಲ್ಲ. ಈ ಕಂಬಳಿಯ ಜೀವಮಾನದಲ್ಲಿ ಅದರ ಸೌಂದರ್ಯದಿಂದ ನೇಕಾರರು ಸ್ಫೂರ್ತಿ ಪಡೆದರು. ಕಲಾವಿದರು, ಇತಿಹಾಸಕಾರರು ಅದರ ಭವ್ಯತೆಗೆ ಮಾರು ಹೋದರು. ತತ್ತ್ವಜ್ಞಾನಿಗಳಿಗೆ ಮಾತ್ರ ಅದರ

---

ಸತ್ವವಿಂದಿಗೂ ಸೌಂದರ್ಯ ಮತ್ತು ಒಳ್ಳೆಯತನದ ಸಾಂಕೇತಿಕ ರೂಪದಲ್ಲಿ ಗೋಚರಿಸುತ್ತಿದೆ.

ಒಳ್ಳೆಯದೇ ಇರಲಿ, ಕೆಟ್ಟದ್ದೇ ಇರಲಿ, ಒಂದಿಲ್ಲೊಂದು ದಿನ ಅದಕ್ಕೂ ಕೊನೆಯಿದೆ ಎಂಬ ಸತ್ಯವನ್ನು, ತನ್ನ ಅಸ್ತಿತ್ವ ಕಾಲದಲ್ಲಿ ಜೀವನದ ಸೌಂದರ್ಯಾದಿಗಳನ್ನು ಸಾಂಕೇತಿಕವಾಗಿ ತೋರಿಸುತ್ತಿದ್ದ ಈ ರತ್ನಗಂಬಳಿ ತನ್ನ ನಾಶದ ಮೂಲಕ ತೋರಿಸಿತು. *



## ವಿಚಿತ್ರ ಜಾಹಿರಾತುಗಳು !

ನೀವು ಜಾಹೀರಾತುಗಳಲ್ಲಿ ವಿವಿಧ ಬಗೆಯುವನ್ನು ನೋಡಿರಬಹುದು. ಆದರೆ ಈಗ ಮುಂದೆ ಹೇಳಹೊರಟಿರುವ ವಿಚಿತ್ರ ಜಾಹಿರಾತುಗಳ ಬಗ್ಗೆ ಖಂಡಿತ ನಿಮಗೆ ತಿಳಿದಿರಲಿಕ್ಕಿಲ್ಲ :

ಅಮೇರಿಕಾದ ಸೇಂಟ್ ಲೂಯಿ ಎಂಬಲ್ಲಿ ವೃತ್ತಪತ್ರಿಕೆ ಮಾರುವ ಟೆಡ್ ಗಾರ್ಲಿ ಎಂಬಾತ ತನ್ನ ಅಂಗಡಿಯ ಮುಂದೆ ಒಂದು ಬೋರ್ಡು ತೂಗುಹಾಕಿ ಅದರಲ್ಲಿ— "ನನ್ನಲ್ಲಿ ವೃತ್ತಪತ್ರಿಕೆ ಕೊಂಡವರಿಗೆ "ಥ್ಯಾಂಕ್ ಯು" ಎಂದು ನಾನು ಹೇಳಲು ತಪ್ಪಿದರೆ ೨೫ ಡಾಲರ್ ಕೊಡುವೆನು" ಎಂದಿತ್ತು. ಅಲ್ಲಿಯ ವರೆಗೆ ಪ್ರತಿ ದಿನ ಮುನ್ನೂರು ಪತ್ರಿಕೆ ಖರ್ಚಾಗುತ್ತಿದ್ದರೆ ಈಗ ೮೦೦ ಪತ್ರಿಕೆಗೆ ಅವನ ವ್ಯಾಪಾರ ಏರಿತು. ಆದರೂ ಸಹ ಅತ "ಥ್ಯಾಂಕ್ ಯು" ಎಂದು ಹೇಳುವುದನ್ನು ಎಂದೂ ಮರೆಯಲಿಲ್ಲ.

ಇನ್ನೊಬ್ಬ ಸೆಕೆಂಡ್‌ಹ್ಯಾಂಡ್ ಕಾರಿನ ವ್ಯಾಪಾರಿ ಒಂದು ಬೋರ್ಡು ತೂಗು ಹಾಕಿ, ಅದರಲ್ಲಿ "ನಾಲ್ಕು ಚಕ್ರವಿರುವ ಯಾವುದರ ಜೊತೆಗೇ ಅಗಲಿ ೫೦ ಪೌಂಡು ಕೊಡುವವರಿಗೆ ಒಂದು ಕಾರು ಕೊಡಲಾಗುವುದು." ಎಂದು ಬರೆದಿದ್ದ. ಆದರೆ ಆ ಬೋರ್ಡನ್ನು ತೂಗುಹಾಕಿದ ಸ್ವಲ್ಪ ಸಮಯದಲ್ಲಿಯೇ ತೆಗೆದುಹಾಕಿದ. ಏಕೆಂದರೆ ಒಬ್ಬಾತ (Roller skate) ನೀರು ಗಡ್ಡೆಯ ಮೇಲೆ ಜಾರುವ ಹಾವಿಗೆ ಹಾಗೂ ೫೦ ಪೌಂ. ಕೊಟ್ಟು ಕಾರು ತೆಗೆದುಕೊಂಡು ಹೋದ !

ಮತ್ತೊಬ್ಬ ವ್ಯಾಪಾರಿ ಒಂದು ಕಾರಿಗೆ ೩೫ ಪೌಂ. ಬೆಲೆ ಇಟ್ಟು ಅದನ್ನು ಕೊಳ್ಳುವವರಿಗೆ, ಇರುವ ಒಂದು ಮಗುವಿಗೆ ೩॥ ಪೌಂ. ನಂತೆ ರಿಯಾಯಿತಿ ತೋರಿಸುವುದಾಗಿ ಜಾಹಿರಾತು ಮಾಡಿದ. ಸ್ವಲ್ಪ ಹೊತ್ತಿನಲ್ಲಿಯೇ ಒಬ್ಬಾತ ತನ್ನ ಹತ್ತು ಮಕ್ಕಳ ಜನನ ದಾಖಲೆಯೊಂದಿಗೆ, ಮಕ್ಕಳನ್ನೂ ಕರೆದುಕೊಂಡು ವ್ಯಾಪಾರಿಯ ಬಳಿ ಬಂದು ಕಾರನ್ನು ಪುಕ್ಕಟೆ ತೆಗೆದುಕೊಂಡುಹೋದ !

ಪೂರ್ವ ಲಂಡನ್‌ನ ಹೋಟೆಲ್ ಮಾಲೀಕ ಸಾಲ ಕೊಡುವುದನ್ನು ನಿಲ್ಲಿಸಬೇಕೆಂದು ಒಂದು ಜಾಹಿರಾತು ಮಾಡಿದ. ಅದರಲ್ಲಿ "ಸಾಲ ಬೇಕಾದವರು ೮೦ ಕ್ಕಿಂತ ಹೆಚ್ಚು ವಯಸ್ಸಾಗಿದ್ದು ಅಂತಹವರು ತಮ್ಮ ತಂದೆ ಅಥವಾ ತಾಯಿಯನ್ನು ಜೊತೆಗೆ ಕರೆದು ತರಬೇಕು" ಎಂದಿತ್ತು.

— "ಇಂದಿರಾಪ್ರಿಯ"




# ನ್ಯೂಯೋರ್ಕಿನಿಂದ ಮಾಸ್ಕೋಗೆ ಪಾದಯಾತ್ರೆ

T.K.RAO

# ನ್ಯೂಯಾರ್ಕಿನಿಂದ ಮಾಸ್ಕೋಗೆ ಪಾದಯಾತ್ರೆ

ಗಾಂಧೀಜಿಯ ಸತ್ಯ-ಅಹಿಂಸೆ-ವಿಶ್ವಪ್ರೇಮ ತತ್ತ್ವಗಳಿಂದ ಪ್ರಭಾವಿತರಾದವರು ಜಗತ್ತಿನಲ್ಲೆಲ್ಲ ಇದ್ದಾರೆ. ಅಮೇರಿಕದಲ್ಲಿರುವ ಇಂಥ ಕೆಲ ನಿಷ್ಠಾವಂತರು ಪ್ರಪಂಚ ವಿನಾಶಕಾರಿ ಯುದ್ಧದತ್ತ ಧಾವಿಸುತ್ತಿರುವ ಇಂದಿನ ಜಗತ್ತಿಗೆ ಈ ತತ್ತ್ವಗಳನ್ನು ತಿಳಿಸಿ ಶಾಂತಿಸ್ಥಾಪನೆಗಾಗಿ ಯತ್ನಿಸಲೆಂದು ನ್ಯೂಯಾರ್ಕ್‌ನಿಂದ ಮಾಸ್ಕೋ ವರೆಗೆ ಕೈಕೊಂಡ ೬೫೦೦ ಮೈಲುಗಳ ಪಾದಯಾತ್ರೆಯ ಹೃದಯಂಗಮ ವರ್ಣನೆ ಇಲ್ಲಿದೆ.

ಹೋದವರ್ಷ ಎಪ್ರಿಲ್ ತಿಂಗಳಲ್ಲಿ ಈಸ್ಟರ್ ರವಿವಾರದ ದಿನ ಚಿಕಾಗೊ ಥಿಯೊಲಾಜಿಕಲ್ ಸೆಮಿನರಿ ಚರ್ಚಿನಲ್ಲಿ ಇಪ್ಪತ್ತೈದು ವರ್ಷದ ಬೀ ಬರ್ನೆಟ್ ಮತ್ತು ಮೂವತ್ತೈದು ವರ್ಷದ ಸ್ಕಾಟ್ ಹೆರಿಕ್‌ರ ವಿವಾಹ ಜರುಗಿತು. ಅತ್ಯಂತ ನಿರಾಡಂಬರವಾಗಿ ಜರುಗಿದ ಈ ಮದುವೆಯ ಸುದ್ದಿ ನ್ಯೂಯಾರ್ಕ್ ಸಿಟಿ ಮತ್ತು ಚಿಕಾಗೋವಿನ ಪತ್ರಿಕೆಗಳಲ್ಲಿ ಒಂದು ನಾಲ್ಕು ಸಾಲುಗಳಲ್ಲಿ ಪ್ರಕಟವಾಯಿತು. ಹೀಗಿದ್ದರೂ ಇದು ಅತ್ಯಂತ ಅಪೂರ್ವವಾದ ವಿವಾಹವಾಗಿತ್ತೆನ್ನುವುದರಲ್ಲಿ ಸಂಶಯವೇ ಇಲ್ಲ.

ಬೀ ಬರ್ನೆಟ್ ನಾರ್ತ್ ಕೆರೊಲಿನಾದ ಒಬ್ಬ ರೈತನ ಮಗಳು. ಹನ್ನೊಂದು ಮಕ್ಕಳಲ್ಲಿ ಆರನೆಯವಳಾದ ಇವಳು ತನ್ನ ಬಾಲ್ಯವನ್ನೆಲ್ಲ ಹೊಲ ಮನೆಯ ಕೆಲಸದಲ್ಲಿ ಕಳೆದಿದ್ದಳು.

೧೭೫೮ ರಲ್ಲಿ ಅಮೇರಿಕಕ್ಕೆ ಬಂದು ನೆಲೆಸಿ ಸಮೃದ್ಧವಾದ ಒಂದು ಕುಟುಂಬದಲ್ಲಿ ಜನಿಸಿದವ ಸ್ಕಾಟ್ ಹೆರಿಕ್. ತಂದೆಗೆ ಇವನೊಬ್ಬನೇ ಮಗ. ನ್ಯೂಯಾರ್ಕ್ ನಗರದಲ್ಲಿದ್ದ ತಮ್ಮ ಸುಂದರವಾದ, ಅತ್ಯಾಧುನಿಕ ರೀತಿಯಲ್ಲಿ ಸಜ್ಜುಗೊಳಿಸಲ್ಪಟ್ಟ ಮನೆಯಲ್ಲಿ ಸ್ಕಾಟ್ ಬೆಳೆದಿದ್ದ.

ಆದರೆ ಇವರಿಬ್ಬರ ಲಗ್ನ ಶ್ರೀಮಂತ ವರ ಮತ್ತು ಬಡ ಕನ್ಯೆಯರಲ್ಲಿ ನಡೆದ ಮದುವೆ ಎಂದು ಅಪರೂಪವಾಗಿರದೆ ಅದಕ್ಕೆ ಬೇರೆಯೆ ಒಂದು ಕಾರಣವಿದೆ. ಮಾಸ್ಕೋಕ್ಕೆ ಕೈಕೊಂಡ ಪಾದಯಾತ್ರೆಯ ಪಥಕದಲ್ಲಿ ಸೇರಿದ್ದ ಇವರು ಪರಸ್ಪರ ಆಕರ್ಷಿಸಲ್ಪಟ್ಟವರಾಗಿ ಮದುವೆಯಾದರು ಎಂಬುದೇ ಇದರಲ್ಲಿನ ವಿಶೇಷವಾಗಿದೆ.

ಹೆರಿಕ್ ಕುಟುಂಬದವರೆಲ್ಲ ಮಹಾತ್ಮಾ ಗಾಂಧಿಯವರ ತತ್ತ್ವಗಳಿಂದ ಪ್ರಭಾವಿತರಾದವರು. ಯುದ್ಧ ಮತ್ತು ಅತ್ಯಾಚಾರಗಳಿಗೆ ಅಹಿಂಸಾತ್ಮಕ ಪ್ರತಿಭಟನೆಯೊಂದೇ ಯೋಗ್ಯವಾದ ನೈತಿಕ ಮಾರ್ಗವೆಂದೂ ಪರಮಾಣುಯುಗದ ಸಮಸ್ಯೆಗೆ ಅದೊಂದೇ ವ್ಯಾವಹಾರಿಕವಾದ ಪರಿಹಾರವೆಂದೂ ಇವರೆಲ್ಲ ನಂಬುತ್ತಾರೆ.

೧೯೬೦ ರಲ್ಲಿ ಅಹಿಂಸಾತ್ಮಕ ಕಾರ್ಯಾಚರಣೆಯ ಸಮಿತಿಯ ರಾಷ್ಟ್ರೀಯ ಕಾರ್ಯದರ್ಶಿ ಬ್ರಾಡ್‌ಫೋರ್ಡ್ ಲಿಟ್ಲ್ ಎಂಬವರು, ಶಾಂತಿಗಾಗಿ ಪ್ರಾರ್ಥಿಸಿಕೊಳ್ಳಲು, ನಿಶ್ಶಸ್ತ್ರೀಕರಣದ ಮಹಿಮೆಯನ್ನು ಪ್ರಚುರಪಡಿಸಲು ಮತ್ತು ಗಾಂಧೀಜಿಯ ಅಹಿಂಸಾಸಂದೇಶವನ್ನು ಬೀರಲು ಸಾನ್ ಫ್ರಾನ್ಸಿಸ್ಕೋದಿಂದ ಮಾಸ್ಕೋದವರೆಗೆ ಪಾದಯಾತ್ರೆ ಕೈಕೊಳ್ಳಲಿರುವ ತಮ್ಮನ್ನು ಕೂಡಿಕೊಳ್ಳಲು ಸ್ವಯಂಸೇವಕರು ಮುಂದೆ ಬರಬೇಕೆಂದು ಸಾರ್ವಜನಿಕ ಬಿನ್ನಹ ಮಾಡಿಕೊಂಡರು.

ಸ್ಕಾಟ್ ಹೆರಿಕ್ ಮತ್ತು ಬೀ ಬರ್ನೆಟ್‌ರು ತಮ್ಮ ತಮ್ಮ ಭಿನ್ನ ಜಗತ್ತುಗಳಿಂದ ಬ್ರಾಡ್‌ಫೋರ್ಡ್‌ರ ಕರೆಗೆ ಓಗೊಟ್ಟು ಮಾಸ್ಕೋಕ್ಕೆ

"ರೆಡ್ ಬುಕ್" ನಿಂದ

ಪಾದಯಾತ್ರೆ ಕೈಕೊಳ್ಳಲು ಸಿದ್ಧರಾದ ಇಪ್ಪತ್ತಾರು ಜನ ಶಾಂತಿವಾದಿಗಳ ಪಥಕವನ್ನು ಸೇರಿಕೊಂಡರು. ಈ ಪಥಕದವರು ತಮ್ಮ ಜೀವನದ ಎಂಟು ತಿಂಗಳ ಕಾಲವನ್ನು ಈ ಅಪೂರ್ವ ಕಾರ್ಯಕ್ಕಾಗಿ ಮೀಸಲಾಗಿರಿಸಿದ್ದರು. ಈ ಗುಂಪು ೬೦೦ ಮೈಲು ಹಾದಿಯನ್ನು ಕ್ರಮಿಸುವಷ್ಟರಲ್ಲಿ ಸ್ಕಾಟ್ ಮತ್ತು ಬೀ ಪ್ರೇಮಪಾಶದಲ್ಲಿ ಸಿಲುಕಿಕೊಂಡರು.

ಸ್ಕಾಟ್ ಹೆರಿಕ್ ಆರಡಿ ಎತ್ತರದ ಬಲಿಷ್ಠ ಆಳು. ಶ್ರೀಮಂತನಾದ ಈತನೇನೂ ಪ್ರೇಯಸಿಗಾಗಿ ಶಾಂತಿವಾದಿಗಳ ಇಂಥ ತಂಡದಲ್ಲಿ ಅರಸಬೇಕಾಗಿರಲಿಲ್ಲ. ಹತ್ತು ವರ್ಷಗಳಿಂದಲೂ ಆತ ತನ್ನನ್ನು ಬಲೆಯಲ್ಲಿ ಹಾಕಿಕೊಳ್ಳಲು ಪ್ರಯತ್ನಿಸುತ್ತಿದ್ದ ವಿವಾಹೇಚ್ಛು ಕನ್ಯೆಯರ ಮತ್ತು ಅವರ ತಾಯಂದಿರ ಗತ್ತುಗಳಿಂದ ತನ್ನನ್ನು ಕಾಪಾಡಿಕೊಂಡು ಬಂದಿದ್ದ. ಆತ ಶಾಂತಿವಾದಿಗಳ ಈ ಪಾದಯಾತ್ರೆಯನ್ನು ಕೂಡಿಕೊಂಡಿದ್ದು ಹೆಂಡತಿಯನ್ನು ಹುಡುಕುವುದಕ್ಕಾಗಿರದೆ ಇನ್ನೊಂದು ಮಹತ್ಕಾರ್ಯ ಸಾಧನೆಗಾಗಿ—ಮಾನವ ಜೀವಿತದ ಸುಖ ಭವಿತವ್ಯ ಸಾಧನೆಗಾಗಿ—ಆಗಿತ್ತು.

ನ್ಯೂಯಾರ್ಕಿನ ಖಾಸಗಿ ಶಾಲೆಯೊಂದರಲ್ಲಿ ವಿದ್ಯಾಭ್ಯಾಸ ಮಾಡಿದ ಸ್ಕಾಟನು ಪರ್ಲ್ ಹಾರ್ಬರಿನ ಘಟನೆ ಮತ್ತು ದ್ವಿತೀಯ ಮಹಾಯುದ್ಧದ ಪರಿಣಾಮವಾಗಿ ನೌಕಾದಲದ ಸಮವಸ್ತ್ರ ಧರಿಸಿ ಶಿಕ್ಷಣವನ್ನು ಮುಂದೆ ಸಾಗಿಸುವಂತಾಯಿತು. ೧೯೪೫ ರ ಬೇಸಿಗೆಯ ಆರಂಭದಲ್ಲಿ ಅವನಿಗೆ ಅಸಾಧ್ಯ ತಲೆನೋವು ಬರಲಾರಂಭಿಸಿತು. ಈತನ ಮಿದುಳಲ್ಲಿ ಹುಣ್ಣಾಗುತ್ತಿದೆಯೇನೂ ಎಂದು ಶಂಕಿಸಿದ ನೌಕಾ ಆಸ್ಪತ್ರೆಯವರು ಇವನನ್ನು ಚಿಕಿತ್ಸೆಗಾಗಿ ಬೆಥೆಸ್ಡಾ ನೌಕಾ ಆಸ್ಪತ್ರೆಗೆ ಸೇರಿಸಿದರು.

ಸ್ಕಾಟ್ ಈ ಆಸ್ಪತ್ರೆಯಲ್ಲಿದ್ದಾಗಲೇ ಹಿರೊಶಿಮಾ ಮತ್ತು ನಾಗಾಸಾಕಿಗಳ ಮೇಲೆ ಪರಮಾಣು ಬಾಂಬುಗಳು ಬಿದ್ದವು. ಅನೇಕ ಅಮೇರಿಕನ್ನರಂತೆ ಸ್ಕಾಟ್ ಕೂಡ, "ಅಬ್ಬಾ! ಎಂಥ ಭೀಕರ ಸಂಗತಿಯಿದು!" ಎಂದು ಯೋಚಿಸಿದ.

ಮುಂದೊಂದು ವರ್ಷವನ್ನು ಆತ ಕ್ಯಾಲಿಫೋರ್ನಿಯದ ಸಮುದ್ರ, ತೀರ ಮತ್ತು ಪರ್ವತ ಪ್ರದೇಶಗಳಲ್ಲಿ ಪ್ರವಾಸ ಮಾಡುತ್ತ ಕಳೆದ. "ನಾನು ಅಸ್ವಸ್ಥಚಿತ್ತನಾಗಿದ್ದೆ. ಏನು ಮಾಡಬೇಕೆಂದೇ ತಿಳಿಯುತ್ತಿರಲಿಲ್ಲ. ಮೊದಲಿನಿಂದಲೂ ಸಂಗೀತಪ್ರಿಯನಾಗಿದ್ದೆ. ಸುಲಭದಲ್ಲಿ ಯಾರಿಗೂ ಪ್ರವೇಶ ಸಿಗದ ನ್ಯೂಯಾರ್ಕಿನ ಜ್ಯುಲಿಯರ್ಡ್ ಸಂಗೀತ ಶಾಲೆಯನ್ನು ಸೇರಿದೆ. ಆದರೆ ಒಂದು ದಿನ ಇದ್ದಕ್ಕಿದ್ದಂತೆ ಶಾಲೆಗೆ ಹೋಗುವ ಬದಲು ಆಸ್ಟ್ರೇಲಿಯಕ್ಕೆ ಹೋಗಿಬಿಟ್ಟೆ, ಏಕೋ ಏನೋ ಬೇರೊಂದು ವಾತಾವರಣ ನನಗೆ ಬೇಕು ಎಂದನಿಸಿತು" ಎಂದು, ಸ್ಕಾಟ್ ತನ್ನ ಆ ದಿನಗಳನ್ನು ಕುರಿತು ಹೇಳುತ್ತಾನೆ.

ಅವನಿಗೆ, ಇಷ್ಟರಲ್ಲಿ ತನ್ನ ಅಜ್ಜ-ಅಜ್ಜಿಯರಿಂದ ಒಂದಿಷ್ಟು ಆಸ್ತಿ ಸಿಕ್ಕಿತ್ತು. ಆದರೆ ಆತ ಅದನ್ನು ಮುಟ್ಟಲಿಲ್ಲ. ಆಸ್ಟ್ರೇಲಿಯದಲ್ಲಿ ಆತ ಬಂದಿಳಿದಾಗ ಅವನ ಬಳಿ ಕೇವಲ ೧೦೦ ಡಾಲರುಗಳಿದ್ದವು. ಆಸ್ಟ್ರೇಲಿಯದಲ್ಲಿದ್ದ ಒಂದೂವರೆ ವರ್ಷ ಕಾಲದಲ್ಲಿ ಆತ ಕಬ್ಬಿನ ತೋಟದಲ್ಲಿ ಕೂಲಿಯಾಗಿ, ಕಬ್ಬಿಣ ಗಣಿಯಲ್ಲಿ ಕೂಲಿಯಾಗಿ, ಒಂದು ಖಾನಾವಳಿಯಲ್ಲಿ ಅಡಿಗೆಯವನಾಗಿ ಕೆಲಸ ಮಾಡಿದ. "ಸತ್ಯದ ಬೆಳಕನ್ನು ನಿರೀಕ್ಷಿಸುತ್ತಿದ್ದ ನನಗೆ ಅದು ಇನ್ನೂ ದೂರ ದೂರವೇ ಇರುವಂತೆ ಕಾಣುತ್ತಿತ್ತು. ನಾನು ಸಿಡ್ನಿಯಿಂದ ಸಿಂಗಾಪುರಕ್ಕೆ, ಅಲ್ಲಿಂದ ಸಿಲೋನ್, ಮುಂದೆ ಮಾರ್ಸೆಲಿಸ್ ಮತ್ತು ಲೆ ಹಾವ್ರೆಗೆ ಹಡಗಿನಲ್ಲಿ ಪ್ರಯಾಣ ಮಾಡಿದೆ. ಈ ಪ್ರವಾಸ ಸಮಯದಲ್ಲಿ ಯುಗಯುಗದ ಮಹಾನ್ ಚಿಂತಕರ ಪುಸ್ತಕಗಳನ್ನು ಓದಿದೆ. ಲೆ ಹಾವ್ರೆಯನ್ನು ತಲುಪಿದಾಗ ನನ್ನಲ್ಲಿ ಕುರುಡು ಕಾಸೂ ಇರಲಿಲ್ಲ. ರೇಲ್ವೆ ಸ್ಟೇಶನ್ನಿನಲ್ಲಿ ಬೀಡು ಬಿಟ್ಟಿದ್ದ ಕಂಗಾಲರ ಗುಂಪನ್ನು ಸೇರಿಕೊಂಡೆ. ಬೆಳಗಿನ ಜಾವ ನಾಲ್ಕು ಗಂಟೆಗೆ ಪೋಲೀಸರು ಬಂದು ನಮ್ಮನ್ನಲ್ಲಿಂದ ಓಡಿಸಿದರು.

"ನ್ಯೂಯಾರ್ಕಿಗೆ ಮರಳಿದ ಮೇಲೆ ಮೆಟ್ರೊಪಾಲಿಟನ್ ಆರ್ಟ್ ಮ್ಯೂಜಿಯಮ್ಮಿನಲ್ಲಿ ನೌಕರಿ ಹಿಡಿದೆ. ಇಷ್ಟರಲ್ಲಿ ನನ್ನ ಮನದಲ್ಲಿ ಅನೇಕಾನೇಕ ವಿಚಾರಗಳು ರೂಪುಗೊಳ್ಳುತ್ತಿದ್ದವು. ಈ ಜಗತ್ತಿನಲ್ಲಿ ಮಾನವನಲ್ಲಿಯ ಸಹೋದರ ಭಾವವೊಂದೇ ಸರ್ವಮಾನ್ಯ ಸತ್ಯವೆಂದು ನನಗನಿಸತೊಡಗಿತ್ತು. ಪ್ರತಿಯೊಬ್ಬ ಧಾರ್ಮಿಕ ಧುರೀಣ—ಜಗತ್ತನ್ನು ಸುಧಾರಿಸಲು ಸಹಾಯ ಮಾಡಿರುವ ಪ್ರತಿಯೊಬ್ಬನೂ- ಒಂದಲ್ಲ ಒಂದು ವಿಧದಲ್ಲಿ ನಮಗೆ ಪರಸ್ಪರರನ್ನು ಪ್ರೀತಿಸಲು ಪರಸ್ಪರರ ಸುಖಕ್ಕಾಗಿ ಹೆಣಗಲು ಉಪದೇಶಿಸಿದ್ದಾನೆ. ಹಾಗಿದ್ದರೂ ಮೂರು ಸಾವಿರ ವರ್ಷಗಳಿಂದಲೂ ಈ ಜಗತ್ತು ದ್ವೇಷ, ಹತ್ಯೆ ಮತ್ತು ಯುದ್ಧಗಳ ಮೂಲಕ ತನ್ನ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಯತ್ನಿಸುತ್ತ ಬಂದಿದೆ."

ಅಲ್ಲಿ ಮ್ಯೂಜಿಯಮ್ಮಿನಲ್ಲಿ ಧೂಳು ಕೊಡಹುವ ಗರಿಯ ಗುಂಚವನ್ನು ಹಿಡಿದು ನಿಂತಿದ್ದಂತೆ ಸ್ಕಾಟ್‌ನಿಗೆ ಯಾವುದೊ ಯುದ್ಧದ ಕರೆ ಬಂದಂತೆ ನಿಸಿತಂತೆ. ಆತ ಹೇಳುತ್ತಾನೆ: "ಗಾಂಧೀಜಿಯ ತಂತ್ರಗಳನ್ನು ಪ್ರಯೋಗಿಸಿ ನೋಡುತ್ತಿದ್ದ ಕೆಲ ಚಿಕ್ಕ ಚಿಕ್ಕ ತಂಡಗಳು ಅಮೇರಿಕಾದಲ್ಲಿ ಇರುವುದು ನನಗೆ ಗೊತ್ತಿತ್ತು. ಸೈನ್ಯದ ಟ್ರಕ್ಕುಗಳ ಹಾದಿಯಲ್ಲಿ ಮಲಗಿಕೊಳ್ಳುವುದು, ವೈಟ್‌ಹಾಊಸಿನ ಬೇಲಿಯ ತಂತಿಗೆ ತಮ್ಮನ್ನು ಕಟ್ಟಿಕೊಳ್ಳುವುದು, ಸೆರೆಮನೆಗೆ ಹೋಗಿ, ಅಲ್ಲಿ ಉಪವಾಸ ಮುಷ್ಕರ ಹೂಡುವುದು ಮುಂತಾದ ಹುಚ್ಚು ಉಪಟಳದ ಕಾರ್ಯಗಳನ್ನವರು ಮಾಡುತ್ತಿದ್ದಾರೆಂದು ನನಗನಿಸುತ್ತಿತ್ತು. ಆದರೂ ಈ ಜನರನ್ನು ಭೆಟ್ಟಿಯಾಗಬೇಕೆಂಬ ಕುತೂಹಲ ನನ್ನಲ್ಲಿತ್ತು. ಅಹಿಂಸಾತ್ಮಕ ಕಾರ್ಯಾಚರಣೆಯ ಸಮಿತಿಯೊಂದು ವಾಶಿಂಗ್ಟನ್ನಿನಲ್ಲಿ ಶಾಂತಿಗಾಗಿ ಮತಪ್ರದರ್ಶನ ನಡೆಸಲಿದೆ ಎಂಬ ಸುದ್ದಿಯನ್ನು ಯಾರೊ ನನಗೆ ಹೇಳಿದಾಗ ನಾನಲ್ಲಿಗೆ ಹೋದೆ.

"ಅದೇನೂ ಹೇಳಿಕೊಳ್ಳುವಂಥ ಕೆಲಸವೆನಿಸಲಿಲ್ಲ. ಆ ಜನ ಪಿಕೆಟಿಂಗ್ ಮಾಡುತ್ತಿದ್ದರು. ಪೆಂಟಾಗಾನ್‌ದ (ಅಮೇರಿಕದ ಸೈನ್ಯ ಕೇಂದ್ರ) ಸುತ್ತಲು ಸಾಮೂಹಿಕ ಕಾವಲು ನಡೆಸಿದ್ದರು. ಅವರ ಸಂದೇಶ ಆಚೆ ಕಡೆ ತಲುಪಿತಾದರೂ ಅವರ ಕಾರ್ಯ ಪರಿಣಾಮಕಾರಿಯಾಗಿದೆಯೆ ಇಲ್ಲವೆ ಎಂದು ತಿಳಿಯುವಂತಿರಲಿಲ್ಲ. ಪತ್ರಿಕೆಗಳಲ್ಲಿ, ಟೆಲಿವಿಜನ್‌ನಲ್ಲಿ.ಅವರ ಬಗ್ಗೆ ಸಾಕಷ್ಟು ಪ್ರಚಾರವಾಗುತ್ತಿತ್ತು.

"ವಾಶಿಂಗ್ಟನ್ನಿನಲ್ಲಿ ನಾನು ಭೆಟ್ಟಿಯಾದ ಶಾಂತಿವಾದಿಗಳಲ್ಲಿ ಹೆಚ್ಚಿನವರು ಸುಶಿಕ್ಷಿತರೂ ನಿಷ್ಠಾವಂತರೂ, ಬುದ್ಧಿವಂತರೂ ಆಗಿದ್ದರು. ಜೀವಮಾನವೆಲ್ಲ ಶಾಂತಿಗಾಗಿ ದುಡಿದ ರೆವರೆಂಡ್ ಎ ಜೆ. ಮಸ್ತೆ, ಹಿಂದೆ ಸಿನೇಟ್ ಸದಸ್ಯರಾಗಿದ್ದ ವಿಲಿಯಂ ಮೇಯರರ ಮಗ ಕಾರ್ಲ್ ಮೇಯರ್, ಮೆಡಿಕಲ್ ರಿಸರ್ಚ್ ಇಂಜನಿಯರರಾದ ಬ್ರಾಡ್‌ಫೋರ್ಡ್ ಲಿಟ್ಲ್ ಮುಂತಾದವರು ಈ ಶಾಂತಿವಾದಿಗಳಲ್ಲಿದ್ದರು.

"ಈ ಮತಪ್ರದರ್ಶನ ಮುಗಿದ ಮೇಲೆ ನಾನು ಬ್ರಾಡ್‌ಫೋರ್ಡ್ ಲಿಟ್ಲ್‌ನನ್ನು ಭೆಟ್ಟಿಯಾಗಿ 'ನಿಮ್ಮ ಭೆಟ್ಟಿಯಾದದ್ದು ಸಂತೋಷ. ಆದರೆ ನಿಮ್ಮ ಮತಪ್ರದರ್ಶನ ನನಗೇನನ್ನೂ ನಂಬಿಕೆ ಮಾಡಿಕೊಡಲಿಲ್ಲ' ಎಂದೆ. ಅವನು ಮುಗುಳ್ನಕ್ಕು 'ನಾನು ಅಂಥ ಪ್ರಯತ್ನವನ್ನೆ ಮಾಡಲಿಲ್ಲ. ನೀವು ಕಾರ್ಯ ಮಾಡಬೇಕಾದ ಸಮಯ ಬಂದಾಗ ಯಾವುದೂ ನಿಮ್ಮನ್ನು ತಡೆಯದು, ಹೆದರಿಕೆಯಿಂದ ಜೀವ ಹೋಗುವ, ಬೇನೆಯಿಂದ ಏಳಲಾರದ ಪ್ರಸಂಗವಿದ್ದರೂ ನೀವು ಅಲ್ಲಿ ಶಾಂತಿವಾದಿಗಳ ರಣರಂಗದಲ್ಲಿ (ಈ ಶಬ್ದಪ್ರಯೋಗಕ್ಕಾಗಿ ಕ್ಷಮೆಯಿರಲಿ) ಧುಮುಕುವಿರಿ' ಎಂದನು.

"ನಾವು ಪರಸ್ಪರರನ್ನು ಬೀಳ್ಕೊಂಡೆವು. ಮತ್ತೆ ಅವನನ್ನು ಭೆಟ್ಟಿಯಾಗುವೆನೆಂಬ ಕಲ್ಪನೆ ಕೂಡ ನನಗಿರಲಿಲ್ಲ. ನಾನು ಮರಳಿ ನ್ಯೂಯಾರ್ಕಿಗೆ ಬಂದಾಗ ವಿಮಾನ ದಾಳಿ ಸಾಧನೆ ನಡೆಯಲಿದೆಯೆಂದು ತಿಳಿಯಿತು. ನನಗದರಲ್ಲಿ ಮಹತ್ವ ಕಾಣಿಸಲಿಲ್ಲ. ನಾನು ಅದನ್ನು ಮರೆತೇಬಿಟ್ಟೆ ಎನ್ನಬಹುದು. ವಿಮಾನ ದಾಳಿಯ ಕಹಳೆ

## ಸರ್ವತ್ರ ಸುಂದರ ಸ್ತ್ರೀಯರ ಪರಂಪರಾಗತ

## ಸೌಂದರ್ಯ-ಸಾಧನ...

# ಪಿಯರ್ಸ್

## ಅನುಪಮ ಶುದ್ಧತೆ ಹಾಗೂ ಸೌಮ್ಯತೆ!

**ಪ್ರಾ**ತಃಕಾಲದಲ್ಲಿ—ಹಿಮಕಣ ತೊಳೆದ ಕುಸುಮದಳದಂತೆ ಶುದ್ಧ ಹಾಗೂ ಸೌಮ್ಯವಾದ, ಸರ್ವತ್ರ ಸುಂದರಿಯರ ಪರಂಪರಾಗತ ಸೌಂದರ್ಯ ಸಾಧನವಾದ, ಪಿಯರ್ಸ್‌ನ ಸಮಾಗಮ. ಮೊದಲು ಸೌಮ್ಯ ಪಿಯರ್ಸ್ ಸೋಪಿನಿಂದ,— ಗ್ಲಿಸರಿನ್ ಇರುವ, ಪಾರದರ್ಶಕವಾದ, ಮಕ್ಕಳ ಕೋಮಲ ಚರ್ಮಕ್ಕೂ ಒಳ್ಳೆಯದಾದ ಸೋಪಿನಿಂದ—ಸ್ನಾನ! ಸ್ನಾನಾನಂತರ ಸುಗಂಧಮಯವಾದ, ಕೋಮಲವಾದ ಪಿಯರ್ಸ್ ಟಾಲ್ಕಮ್ ಪೌಡರಿನ ಮೃದು ಸ್ಪರ್ಶ...ಇದರಿಂದ ನಿಮ್ಮಲ್ಲಿ ಮುಂಜಾನೆಯ ನವೋಲ್ಲಾಸ ದಿನವಿಡೀ ಉಳಿಯುತ್ತದೆ.




PTP. 5-50 KN [illegible]

ಊದಿದಾಗ ನಾನು ಹೊರಗಡೆಯಲ್ಲಿದ್ದೆ. ಸುತ್ತ ಮುತ್ತಲಿನ ಎಲ್ಲರೂ ರಕ್ಷಣೆಯ ಸ್ಥಾನಗಳತ್ತ ಓಡಿದರು. ಏಕೊ ಏನೊ ನನ್ನ ಕಾಲುಗಳು ಚಲಿಸಲೇ ಇಲ್ಲ. ಪೋಲೀಸನೊಬ್ಬ ಮೆಲ್ಲಗೆ ನನ್ನನ್ನು ನೂಕಿ 'ಇದು ವಿಮಾನ ದಾಳಿ ಸಾಧನೆ. ಅಲ್ಲಿ ಕೆಳಗಡೆ ಓಡು' ಎಂದ.

"ಈ ಕಾರ್ಯದ ಮೂರ್ಖತನ ಮತ್ತು ಅಮಾನುಷತನ ತಟ್ಟನೆ ನನಗರಿವಾಯಿತು. ನಾನಂದೆ: 'ಹೆಗ್ಗಣದಂತೆ ನಾನು ಆ ತಗ್ಗಿನಲ್ಲಿ ಅಡಗುವುದಿಲ್ಲ. ಶಾಂತಿ ಬೇಕು ಎನ್ನುತ್ತ ಈ ರೀತಿ ನಾವು ಯುದ್ಧಸಿದ್ಧತೆ ಮಾಡುತ್ತಿರುವಾಗ ನಮ್ಮಲ್ಲಿ ರಶಿಯನ್ನರು ಹೇಗೆ ವಿಶ್ವಾಸವಿಡಬೇಕು? ರಶಿಯನ್ನರು ಹೀಗೆಯೆ ಮಾಡುವುದನ್ನು ಕಂಡರೆ ನಿಮ್ಮ ಮೈ ನಡುಗದೆ? ನಾವೀಗ ಮಾಡುತ್ತಿರುವುದೇನು-ತಾವೇ ನಮ್ಮ ಮೇಲೆ ಮೊದಲು ಗುಂಡು ಹಾರಿಸುವುದು ಒಳ್ಳೆಯದು ಎಂದು ಅವರು ಯೋಚಿಸುವಂತೆ ಮಾಡುತ್ತಿಲ್ಲವೆ?

"ಆದರೆ ಅದರಿಂದ ಪ್ರಯೋಜನವೇನೂ ಆಗಲಿಲ್ಲ. ಕಾಯದೆ ಮುರಿದದ್ದಕ್ಕಾಗಿ ನನಗೆ ಐದು ದಿನಗಳ ಶಿಕ್ಷೆಯಾಯಿತು. ಜೇಲಿನಲ್ಲಿ ನಾನು ಥೋರೂನ ಪುಸ್ತಕಗಳನ್ನೋದಿದೆ. ಗುಲಾಮು ವ್ಯಾಪಾರಕ್ಕೆ ಆಶ್ರಯವಿತ್ತಿದ್ದ ಸರಕಾರಕ್ಕೆ ಕರ ಕೊಡಲು ನಿರಾಕರಿಸಿ ಆತ ೧೮೪೬ ರಲ್ಲಿ ಜೇಲು ಕಂಡಿದ್ದ. ಆಗ ಅವನ ಮಿತ್ರ ರಾಲ್ಫ್ ವಾಲ್ಡೊ ಎಮರ್ಸನ್ ಅವನ ಭೆಟ್ಟಿಗೆ ಬಂದು 'ಹೆನ್ರಿ, ನಿನ್ನಂಥ ಸಂಭಾವಿತ ಗೃಹಸ್ಥ ಇಲ್ಲಿ ಜೇಲಿನಲ್ಲಿ ಏನು ಮಾಡುತ್ತಿರುವೆ?' ಎಂದು ಕೇಳಿದ. ಆದರೆ ಥೊರೊ 'ನಿಜವಾಗಿ ಈ ಪ್ರಶ್ನೆ ನಾನು ಇಲ್ಲಿ ಏನು ಮಾಡುತ್ತಿದ್ದೇನೆ ಎಂಬುದಾಗಿರದೆ ನೀನು ಹೊರಗೆ ಏನು ಮಾಡುತ್ತಿರುವೆ ಎಂದು ಇರಬೇಕು' ಎಂದ. ಇದನ್ನೋದುತ್ತಿದ್ದಂತೆ ನನಗೆ ನಗೆ ಬಂತು."

ಜೇಲಿನಿಂದ ಬಿಡುಗಡೆ ಹೊಂದಿದ ಮೇಲೆ ಸ್ಕಾಟ್ ಒಂದು ದೋಣಿಯನ್ನು ಕೊಂಡು ಸಮುದ್ರ ತೀರ ಪ್ರದೇಶಗಳಲ್ಲಿದ್ದ ತನ್ನ ನೆಂಟರಿಷ್ಟರನ್ನು ಭೆಟ್ಟಿಯಾಗುತ್ತ, ಮನದಲ್ಲಿ ವಿಚಾರ ಮಾಡುತ್ತ ಕಾಲ ಕಳೆದ.

ಅಮೇರಿಕದ ನೌಕಾಪಡೆ ಅತ್ಯಾಧುನಿಕ ಅಸ್ತ್ರಗಳುಳ್ಳ ಒಂದು ಸಬ್‌ಮರೀನನ್ನು ತಯಾರಿಸಿತ್ತು. ಅದರ ಪರ್ಯಟನ ಪ್ರಾರಂಭೋತ್ಸವ ನ್ಯೂ-ಲಂಡನ್ನಿನಲ್ಲಿ ಜರುಗಲಿತ್ತು. ಅಹಿಂಸಾತ್ಮಕ ಕಾರ್ಯಾಚರಣೆಯ ಸಮಿತಿ ಆ ಸಂದರ್ಭದಲ್ಲಿ ಮತ ಪ್ರದರ್ಶನಗಳನ್ನಾರಂಭಿಸಿ ದೋಣಿಗಳುಳ್ಳ ಸ್ವಯಂಸೇವಕರಿಗಾಗಿ ಕರೆ ಇತ್ತಿತು. ಸ್ಕಾಟ್ ತನ್ನ ದೋಣಿಗೆ 'ಸತ್ಯಾಗ್ರಹ' ಎಂದು ಹೆಸರಿಟ್ಟ. ತನ್ನ ದೋಣಿಯ ಮುಖ್ಯ ಹಾಯಿಯ ಮೇಲೆ 'ಶಸ್ತ್ರಾಸ್ತ್ರ ಸ್ಪರ್ಧೆಯನ್ನು ನಿಲ್ಲಿಸಿರಿ' ಎಂಬ ಅಕ್ಷರಗಳನ್ನು ಬರೆಯಿಸಿ ತನ್ನ ದೋಣಿಯನ್ನು ನ್ಯೂ ಲಂಡನ್ ಬಂದರದಲ್ಲಿ ಸುತ್ತಾಡಿಸಿದ.

ಈ ಹೊತ್ತಿಗೆ ಬ್ರಾಡ್‌ಫೋರ್ಡ್ ಲಿಟ್ಲ್ ಅಹಿಂಸಾತ್ಮಕ ಕ್ರಿಯಾ ಸಮಿತಿಯ ರಾಷ್ಟ್ರೀಯ ಕಾರ್ಯದರ್ಶಿಯಾಗಿದ್ದನು. ಚಿಕಾಗೊ ವಿಶ್ವವಿದ್ಯಾಲಯ ಮತ್ತು ಅರ್ಲ್‌ಹ್ಯಾಮ್ ಕಾಲೇಜಿನ ಪದವೀಧರನಾಗಿದ್ದ ಈತ ಮಾಸ್ಕೋದವರೆಗೆ ಶಾಂತಿ ಪ್ರಚಾರದ ಪಾದಯಾತ್ರೆಯ ಹಂಚಿಕೆ ಹಾಕಿದ್ದನು.

ನಾಲ್ಕಾರು ಸಲ ಚರ್ಚೆ ಮಾಡಿದ ನಂತರ ಆತ ಈ ಪಾದಯಾತ್ರೆಯ ಮಹತ್ವವನ್ನೂ ಉಪಯುಕ್ತತೆಯನ್ನೂ ಸ್ಕಾಟ್‌ನಿಗೆ ಬಿಂಬಿಸಿದ. ಅವರಿಬ್ಬರೂ ಸಾನ್-ಫ್ರಾನ್ಸಿಸ್ಕೋಗೆ ತೆರಳಿ ಈ ಯಾತ್ರೆಯನ್ನು ಸಂಘಟಿಸತೊಡಗಿದರು. ಆರೆ ಆರು ವಾರಗಳೊಳಗಾಗಿ ೬೦೦ ಕ್ಕಿಂತ ಹೆಚ್ಚು ಸ್ವಯಂಸೇವಕರಿಂದ ಅರ್ಜಿಗಳು ಬಂದವು. ಆದರೆ ೬,೫೦೦ ಮೈಲುಗಳ ಈ ಪ್ರವಾಸವನ್ನು ಕಾಲ್ನಡಿಗೆಯಲ್ಲೇ ಮಾಡುವ ವಿಚಾರ ತಿಳಿದಾಗ ಇವರಲ್ಲಿ ಬಹಳಷ್ಟು ಜನ ಹಿಂದೆ ಸರಿದರು. ಕೆಲವರನ್ನು ತೀರ ಚಿಕ್ಕವರೆಂದು, ಕೆಲವರನ್ನು ತೀರ ವೃದ್ಧರೆಂದು ಬಿಡಲಾಯಿತು.

ಒಂದು ಮೋಟಾರ್ ಪ್ರಚಾರಕ ತಂಡದಲ್ಲಿ ಮಾಡೆಲ್ ಎಂದು ಕೆಲಸ ಮಾಡುತ್ತ ತಿಂಗಳಿಗೆ

೧,೫೦೦ ಡಾಲರುಗಳನ್ನು ಗಳಿಸುತ್ತಿದ್ದ ೨೫ ವರ್ಷ ಪ್ರಾಯದ ಬೀ ಬರ್ನೆಟ್‌ಳ ಅರ್ಜಿ ಸ್ವೀಕೃತವಾಯಿತು.

ಈ ಪಾದಯಾತ್ರೆಯ ಬಗ್ಗೆ ಬೀ ಗಿದ್ದ ಕಲ್ಪನೆಯೇ ಬೇರೆಯಾಗಿತ್ತು. "ನಾನು ಅರ್ಜಿ ಮಾಡಿಕೊಂಡಾಗ ನಾವೆಷ್ಟು ದೂರ ನಡೆಯಲಿದ್ದೇವೆ ಎಂಬುದು ನನಗೆ ತಿಳಿದಿರಲಿಲ್ಲ. ಕೆಲವು ವಾರಗಳ ವರೆಗೆ ಮಾತ್ರ ಈ ಯಾತ್ರೆಯೊಡನಿರಬೇಕು ಎಂದು ಯೋಚಿಸಿದ್ದೆ. ಚಿಕಾಗೋನಲ್ಲಿ ಒಂದು ಕೆಲಸದ ಕರಾರಿಗೂ ಸಹಿ ಹಾಕಿದ್ದೆ. ಆದರೆ ಸ್ಕಾಟ್‌ನ ಭೆಟ್ಟಿಯಾದಾಗ ನನ್ನ ಮನಸ್ಸು ಬದಲಾಗಿಬಿಟ್ಟಿತು.

"ನಾನವನನ್ನು ಮೊದಲ ಬಾರಿ ಕಂಡಾಗ ಆತ ಒಂದು ಪೆಟ್ಟಿಗೆಯ ಮೇಲೆ ನಿಂತುಕೊಂಡು ಭಾಷಣ ಮಾಡುತ್ತಿದ್ದ. ಪ್ರಥಮ ನೋಟಕ್ಕೇ ನಾನವನ ಪ್ರೇಮದಲ್ಲಿ ಸಿಲುಕಿದೆ. ಆತನ ಸೌಂದರ್ಯಕ್ಕೇನೂ ನಾನು ಮುಗ್ಧಳಾಗಲಿಲ್ಲ. ಅವನು ಶ್ರೀಮಂತ ಎಂದೂ ನನಗೆ ಯಾರೂ ಹೇಳಿರಲಿಲ್ಲ. ಆದರೆ ಅದೇಕೊ ಈತನೇ ನನ್ನ ಜೀವನ ಸಂಗಾತಿ ಎಂದು ನನಗೆ ಅವನನ್ನು ಕಂಡ ಕೂಡಲೇ ನಂಬಿಕೆಯಾಗಿ ಹೋಯಿತು."

ಬೀ ಪ್ರಯತ್ನಪಟ್ಟು ಸಾಧ್ಯವಾದಾಗಲೆಲ್ಲ ಸ್ಕಾಟ್‌ನ ಬಳಿಯೇ ಇದ್ದುಕೊಂಡು ನಡೆಯತೊಡಗಿದಳು. ತನ್ನ ವೃತ್ತಾಂತ ಹೇಳಿದಳು. ಹಿಂದೆ ಯುದ್ಧದಲ್ಲಿ ಸೆರೆಸಿಕ್ಕ ಜರ್ಮನ್ ಸೈನಿಕರು ತಮ್ಮ ಹೊಲದಲ್ಲಿ ಕೆಲಸ ಮಾಡಲು ಬರುತ್ತಾರೆ ಎಂದು ತಂದೆ ಹೇಳುತ್ತಿದ್ದಾಗ ತನಗೆಷ್ಟು ಭಯವಾಗುತ್ತಿತ್ತೆಂದು ಅವಳು ಸ್ಕಾಟ್‌ನಿಗೆ ಹೇಳಿದಳು.

"ನಮಗೆ ಹೊಲದ ಕೆಲಸಕ್ಕೆ ಜನ ಬೇಕಾಗಿದ್ದರು. ಆದರೆ ಕೆಲಸಕ್ಕೆ ಬಂದಿದ್ದ ಈ ಜನ ನಾಝಿಗಳು, ರೊಮೆಲ್ಲನ ಆಫ್ರಿಕಾ ಕಾರ್ಪ್ಸ್‌ನ ಕರ ಯೋಧರು ಎಂದು ಕೇಳಿದ್ದೆ. ಈ ಜನ ಷ್ಟೋ ನಿರಪರಾಧಿಗಳನ್ನು ಹಿಂಸಿಸಿರಬೇಕು. ನನ್ನ ಅಪ್ಪನ ಬಳಿ ಬಂದೂಕಿದೆ ಎಂಬ ಮಾತು ನನಗೆ ಈ ಪರಿಸ್ಥಿತಿಯಲ್ಲಿ ಸಂತೋಷಕರವಾಗಿತ್ತು.

"ಆದರೆ ಈ ಜನರನ್ನು ದ್ವೇಷಿಸುವುದು ನನ್ನಿಂದಾಗಲಿಲ್ಲ. ಅವರು ಕಷ್ಟಪಟ್ಟು ದುಡಿಯುವವರು, ಉಲ್ಲಾಸಚಿತ್ತರು ಮತ್ತು ದಯಾಸ್ವಭಾವದವರಾಗಿದ್ದರು. ಯುದ್ಧದಿಂದ ದೂರ, ಇಲ್ಲಿ ಈ ಹೊಲಕೆಲಸದಲ್ಲಿ ತೊಡಗಿರುವುದು ಅವರಿಗೆ ಹಿತಕರವೆನಿಸಿದಂತಿತ್ತು. ಕೆಲಸ ಮಾಡುತ್ತಿರುವಾಗ ಅವರು ಹಾಡುತ್ತಿದ್ದರು. ಹಿಟ್ಲರನ ವರ್ಣಭೇದ ನೀತಿಯ ಗಂಧಗಾಳಿಯೂ ಇಲ್ಲದವರಂತೆ ನೆರೆಹೊರೆಯ ನಿಗ್ರೋಗಳೊಂದಿಗೆ ವರ್ತಿಸುತ್ತಿದ್ದರು.

"ಯುದ್ಧ ಮುಗಿದ ಬಳಿಕ ನನಗೆ ಆಶ್ಚರ್ಯಾಘಾತವಾಗಿಹೋಯಿತು. ಜರ್ಮನರೇನೂ ಕೆಟ್ಟವರಲ್ಲ, ನಿಜವಾದ ಕೆಟ್ಟವರೆಂದರೆ ರಶಿಯನ್ನರು, ಅವರನ್ನು ದ್ವೇಷಿಸಬೇಕು ಎಂದು ನಮ್ಮ ಜನ ಅನ್ನತೊಡಗಿದ್ದರು. ನಾನೆಂದೂ ರಶಿಯನ್ನರನ್ನು ಕಂಡಿರಲಿಲ್ಲ. ಈ ಮಾತು, ಈ ದ್ವೇಷಭಾವನೆ ನನ್ನಂಥ ಬಾಲಿಕೆಗೆ ಮಹಾ ಒಗಟಾಗಿಬಿಟ್ಟಿತ್ತು" ಎಂದು ಬೀ ಸ್ಕಾಟನಿಗೆ ತನ್ನ ಬಗ್ಗೆ ಹೇಳುತ್ತ ತಿಳಿಸಿದಳು.

ಈ ಶಾಂತಿವಾದಿಗಳು ಲಾಸ್ ಏಂಜಲ್ಸ್ ನಗರದ ಹದ್ದನ್ನು ತಲುಪಿದಾಗ ನೂರಾರು ಜನರು ಅವರನ್ನು ಸ್ವಾಗತಿಸಿ ಹಾಡುತ್ತ ಜಯಘೋಷ ಮಾಡುತ್ತ ಅವರನ್ನು ಒಂದು ಸಭಾಮಂದಿರಕ್ಕೆ ಕರೆದೊಯ್ದರು. ಶಾಂತಿವಾದಿಗಳು ಅಲ್ಲಿ ೨,೦೦೦ ಜನರ ಸಭೆಯಲ್ಲಿ ಮಾತಾಡಿದರು. ಸಭೆ ಮುಗಿದ ಮೇಲೆ ಜನರ ಇನ್ನೊಂದು ಗುಂಪು ಅವರೊಂದಿಗೆ ೧೫ ಮೈಲುಗಳ ವರೆಗೆ ನಡೆಯುತ್ತ ಹೋಗಿ ಸಾನ್ ಬರ್ನಾರ್ಡಿನೊದ ರಸ್ತೆಯ ವರೆಗೆ ಅವರನ್ನು ಮುಟ್ಟಿಸಿ ಬಂದಿತು.

ಆದರೆ ಈಶಾನ್ಯದಿಕ್ಕಿನ ಪ್ರದೇಶದಲ್ಲಿ ಶಾಂತಿವಾದಿಗಳು ಕಾಲಿಟ್ಟೊಡನೆ ಜನರ ವಿರೋಧ ಹೆಚ್ಚೆಚ್ಚಾಗಿ ಕಂಡುಬರತೊಡಗಿತು. "ಅದರಲ್ಲಿ ಅವರ ತಪ್ಪೇನಿರಲಿಲ್ಲ. ಅವರೆಲ್ಲ ತಮ್ಮ ಜೀವನ

ಕ್ಕಾಗಿ ಶಸ್ತ್ರಾಸ್ತ್ರ ತಯಾರಿಕೆ ಕಾರಖಾನೆಗಳಲ್ಲಿ ದುಡಿಯುವವರಾಗಿದ್ದರು" ಎಂದು ಬ್ರಾಡ್ ಫೋರ್ಡ್ ಲಿಟ್ಲ್ ಈ ಸಂಬಂಧದಲ್ಲಿ ಹೇಳುತ್ತಾನೆ.

ಒಂದು ಊರಿನಲ್ಲಿ ಚರ್ಚಿನವರು ಮೊದಲು ಕೊಡಮಾಡಿದ ಆತಿಥ್ಯವನ್ನು ಆ ಮೇಲೆ ನಿರಾಕರಿಸಿದ್ದರಿಂದ ಈ ಶಾಂತಿವಾದಿ ಪಾದಯಾತ್ರಿಕರು ಮರುಭೂಮಿಯಲ್ಲಿ ರಾತ್ರಿಯನ್ನು ಕಳೆಯಬೇಕಾಗಿ ಬಂತು. ಆ ರಾತ್ರಿಯನ್ನು ಬೀ ಮತ್ತು ಸ್ಕಾಟ್ ಅನೇಕಾನೇಕ ವಿಷಯಗಳ ಬಗ್ಗೆ ಮಾತಾಡುತ್ತ ಕಳೆದರು.

ಪಾದಯಾತ್ರಾ ಪಥಕ ಅರಿಝೋನಾದ ಫಿನಿಕ್ಸ್‌ನ್ನು ಸಮೀಪಿಸುತ್ತಿದ್ದಂತೆ ಸಂಕಟದ ಲಕ್ಷಣಗಳು ಕಾಣಿಸಿದವು. ಅರಿಝೋನಾ ಯುನಿವರ್ಸಿಟಿಯ ಕ್ಯಾಂಪಸ್‌ನಲ್ಲಿ ನಡೆಯಲಿದ್ದ ಇವರ ಸಭೆಯನ್ನು ನಡೆಯಗೊಡದಂತೆ ಮಾಡಲು ಕೆಲ ಜನ ಪ್ರತಿಜ್ಞೆ ಮಾಡಿದ್ದಾರೆಂದು ಕೇಳಿ ಬಂತು.

ಆಗ ಲಿಟ್ಲ್ ತಮ್ಮವರ ಒಂದು ಸಭೆ ಸೇರಿಸಿ ಈ ಮಾತನ್ನು ತಿಳಿಸಿ "ಏನು ಮಾಡೋಣ? ಊರನ್ನು ಸುತ್ತು ಹಾಕಿ ಹೊರಗಿಂದ ಹೊರಗೇ ಹೋಗೋಣವೆ?" ಎಂದು ಕೇಳಿದ. ಪಥಕದ ಜನ "ಊಂಹುಂ. ಊರೊಳಗಿಂದಲೇ ಹೋಗೋಣ" ಎಂದರು. "ಎಂಥ ಕಠಿನ ಪ್ರಸಂಗವೇ ಬರಲಿ, ಪ್ರಚೋದನೆಯೇ ಬರಲಿ, ಗಾಯವಾಗಲಿ, ಮರಣವೇ ಬರಲಿ, ಯಾವಾಗಲೂ ಅಹಿಂಸಾವಾದಿಯಾಗಿಯೆ ಇರುತ್ತೇನೆ" ಎಂದು ಅವರೆಲ್ಲ ಪ್ರತಿಜ್ಞಾಪತ್ರಕ್ಕೆ ಅಂಕಿತ ಹಾಕಿದ್ದರು. ಆದರೆ ಅವರಲ್ಲಿ ಹೆಚ್ಚಿನವರಿಗೆ ಬಲಪ್ರಯೋಗವನ್ನು ಶಾಂತವಾಗಿ ವಿರೋಧಿಸಿ ಅನುಭವವಿರಲಿಲ್ಲ.

ಇಲ್ಲಿಯ ಅನುಭವವನ್ನು ಕುರಿತು ಬೀ ಬರ್ನೆಟ್ ಹೇಳುತ್ತಾಳೆ: "ನಾವು ವಿಶ್ವವಿದ್ಯಾಲಯ ಕ್ಯಾಂಪಸ್ಸನ್ನು ಸಮೀಪಿಸುತ್ತಿದ್ದಂತೆ ಅಲ್ಲೊಂದು ಮೂಲೆಯಲ್ಲಿ ೧೦೦-೧೫೦ ಜನ ನಿಂತಿದ್ದನ್ನು ಕಂಡೆ. ಅವರಲ್ಲಿ ಹೆಚ್ಚಿನವರು ಕಾಲೇಜು ವಿದ್ಯಾರ್ಥಿಗಳಂತೆ ಕಂಡರೂ ಕೆಲವರು ಪುಂಡರಂತೆ ತೋರುತ್ತಿದ್ದರು. ನಮ್ಮನ್ನೂ ನಮ್ಮ ಘೋಷಣಾ ಪತ್ರಿಕೆಗಳನ್ನೂ ಕಂಡೊಡನೆ ಅವರು 'ಹೋ' ಎಂದು ಕೂಗಿದರು. ಅವರ ಬಳಿಯೂ ಘೋಷಣಾಪತ್ರಿಕೆಗಳಿದ್ದವು. ಅವುಗಳಲ್ಲಿ 'ಯುದ್ಧ! ಶತ್ರುವನ್ನು ನಿರ್ನಾಮ ಮಾಡಿರಿ', 'ಕ್ರುಶ್ಚೆ— ನಿನ್ನ ಮೇಲೊಂದು ಬಾಂಬೆಸೆಯುವ ಕಾಲ ಬಂದಿದೆ!' 'ಮೊದಲಿನ ಏಟು ನಮ್ಮದೇ ಆಗಲಿ' ಎಂದು ಮುಂತಾಗಿ ಬರೆದಿತ್ತು.

"ನಾವು ಪೋಲೀಸರ ಸಹಾಯ ಯಾಚಿಸಬಾರದೆಂದು ನಿರ್ಧರಿಸಿದೆವು. ರಸ್ತೆಯಲ್ಲೆಲ್ಲ ಈ ವಿರೋಧಿ ಜನ ತುಂಬಿ ಹೋಗಿದ್ದರು. ನಮಗೆ ರಸ್ತೆ ಬಿಟ್ಟುಕೊಡಬಾರದೆಂದು ಅವರು ನಿರ್ಧರಿಸಿರುವುದು ಸ್ಪಷ್ಟವಾಗಿತ್ತು. ಬ್ರಾಡ್ ಮತ್ತು ಸ್ಕಾಟ್ ನಮ್ಮೆಲ್ಲರ ಮುಂದೆ ಇದ್ದುಕೊಂಡು ಆ ಜನರತ್ತವೇ ನಡೆದರು. ನಾನು ಅಂಜಿಕೆಯಿಂದ ತತ್ತರಿಸಿ ಹೋಗಿದ್ದರೂ ಅವರನ್ನು ಕೂಡಿಕೊಳ್ಳಲು ಓಡಿದೆ. ಸ್ಕಾಟನಿಗೆ ಏನಾದರೂ ಆದಲ್ಲಿ ನಾನವನ ಬಳಿ ಇರಬೇಕೆಂಬುದೇ ನನ್ನ ಬಯಕೆಯಾಗಿತ್ತು.

"ಒಬ್ಬಾತ ಅವರಿಬ್ಬರ ಹಾದಿಯನ್ನು ಅಡ್ಡಗಟ್ಟಿ 'ಎಲ್ಲಿಗೆ ಹೋಗುತ್ತಿದ್ದೀರಿ?' ಎಂದು ಕೇಳಿದ. ಬ್ರಾಡ್ ಲಿಟ್ಲ್ ಮಧುರ ಸ್ವರದಲ್ಲಿ 'ನಾವು ಅರಿಝೋನಾ ವಿಶ್ವವಿದ್ಯಾಲಯದ ಬಿನ್ನಹದ ಮೇರೆಗೆ ವಿದ್ಯಾರ್ಥಿಗಳೆದುರು ಭಾಷಣ ಮಾಡಲು ಹೋಗುತ್ತಿದ್ದೇವೆ.' ಎಂದು ತಮಗೆ ಬಂದಿದ್ದ ಆಮಂತ್ರಣ ಪತ್ರಿಕೆಯನ್ನು ತೋರಿಸಿದ. ಆ ಮನುಷ್ಯ ಅದನ್ನು ಕಂಡು ತುಸು ಅನುಮಾನಕ್ಕೆ ಬಿದ್ದ. 'ನಾವು ಬರುವುದೇ ತಡವಾಗಿ ಹೋಗಿದೆ. ಬೇಗ ಹೋಗಬೇಕು' ಎಂದು ಬ್ರಾಡ್ ಮೆಲ್ಲಗೆ ಆ ಮನುಷ್ಯನನ್ನು ಬದಿಗೆ ಸರಿಸಿ ತನ್ನ ಪಥಕವನ್ನು ಆ ವಿರೋಧಕರ ಗುಂಪಿನ ನಡುವೆ ಕರೆದೊಯ್ದ.

"ಕ್ಯಾಂಪಸ್‌ನಲ್ಲಿ ನಡೆದ ನಾಲ್ಕು ತಾಸಿನ ಸಭೆಯಲ್ಲಿ ಗದ್ದಲವೊ ಗದ್ದಲವಾಯಿತು. ವಿದ್ಯಾರ್ಥಿಗಳು ಕೂಗಿದರು: 'ದ್ರೋಹಿಗಳು', 'ಹೇಡಿಗಳು' 'ಮಾಸ್ಕೋಕ್ಕೆ ಹೋದವರು ಅಲ್ಲಿಯೆ ಇದ್ದು ಬಿಡಿ!'

"ಆದರೆ ಸಭೆ ಮುಗಿದ ಮೇಲೆ ನಾನು ಮತ್ತು ಸ್ಕಾಟ್ ನೆಲ ಉಡುಗತೊಡಗಿದಾಗ ನೆಲದ ಮೇಲೆ ಬಿದ್ದ ಹಸ್ತಪತ್ರಿಕೆಗಳ ಸಂಖ್ಯೆ ತೀರ ಕಡಿಮೆಯಿರುವುದು ಕಾಣಿಸಿತು. ಇದೊಂದು ಒಳ್ಳೆಯ ಲಕ್ಷಣವಾಗಿತ್ತು. ನೀವು ಹೇಳಿದ್ದು ಮನಸ್ಸಿಗೆ ಬಾರದೆ ಹೋದಲ್ಲಿ ನಿಮ್ಮ ಹಸ್ತಪತ್ರಿಕೆಗಳನ್ನು ಜನ ನಿಷ್ಪ್ರಯೋಜಕವೆಂದು ಕಾಲ ಕೆಳಗೆಸೆದುಬಿಡುತ್ತಾರೆ."

ಫಿನಿಕ್ಸ್‌ನಲ್ಲಿ ವಿಶ್ವವಿದ್ಯಾಲಯದ ಇಂಗ್ಲಿಷ್ ಪ್ರೊಫೆಸರ ಜಾನ್ ಮತ್ತು ಅವರ ಪತ್ನಿ ಬಾರ್ಬರಾ ಬೀಚರ್ ಈ ಪಾದಯಾತ್ರಾ ಪಥಕವನ್ನು ಕೂಡಿಕೊಂಡರು. ನ್ಯೂ-ಮೆಕ್ಸಿಕೊದ ರೋಸೆಲ್‌ನಲ್ಲಿ ಈ ಪಥಕ ವಾಕರ್ ವಿಮಾನಪಡೆಯ ಠಾಣ್ಯದ ಎದುರು ಪಿಕೆಟಿಂಗ್ ಮಾಡಿದ್ದರಿಂದ ಮಿಲಿಟರಿ ಅಧಿಕಾರಿಗಳು ಅವರಿಗೆ ಆಶ್ರಯವೀಯದಿರಲು ಜನರನ್ನು ಕೇಳಿಕೊಂಡಿದ್ದರು. ಚರ್ಚುಗಳಲ್ಲಿ ಸಹ ಈ ಯಾತ್ರಿಕರಿಗೆ ಆಶ್ರಯ ಸಿಗಲಿಲ್ಲ. ಸಾಲ್ವೇಶನ್ ಆರ್ಮಿಯವರು ಮಾತ್ರ ಆ ಧೈರ್ಯ ತೋರಿಸಿದ್ದರು. ಒಂದು ಊರಲ್ಲಿ ಅಲ್ಲಿಯ ಜೇಲಿನಲ್ಲಿ ಪಾದಯಾತ್ರಿಕರು ರಾತ್ರಿಯನ್ನು ಕಳೆಯಬೇಕಾಯಿತು.

"ಎಂಥ ಹುಚ್ಚುತನ ಇದು ಎಂದು ನನಗನಿಸಿತು. ರಟ್ಟುಗಳ ಮೇಲೆ ಶಾಂತಿಗಾಗಿ ನಾಲ್ಕು ವಾಕ್ಯಗಳನ್ನು ಬರೆದುಕೊಂಡು ಅಡ್ಡಾಡುವ ನಮ್ಮಲ್ಲಿ ಇವರೇನು ಅಪಾಯ ಕಂಡುಕೊಂಡರೊ ತಿಳಿಯದು" ಎಂದು ಬೀ ಬರ್ನೆಟ್ ಹೇಳಿದ್ದಾಳೆ.

ಟೆಕ್ಸಾಸ್‌ನಲ್ಲಿ ಈ ಶಾಂತಿವಾದಿ ಪಾದಯಾತ್ರಾ ಪಥಕಕ್ಕೆ ಸ್ವಾಗತವೂ ಸಿಕ್ಕಿತು; ವಿರೋಧವೂ ಎದುರಾಯಿತು. ಎಲ್‌ಪಾಸೋದಲ್ಲಿ ಸೈನಿಕರ ಭರತಿ ಕೇಂದ್ರದ ಎದುರು ಇವರು ಪಿಕೆಟಿಂಗ್ ನಡೆಸಿದಾಗ ನೌಕಾದಲದಿಂದ ನಿವೃತ್ತನಾದವನೊಬ್ಬ ಇವರಲ್ಲಿಬ್ಬರನ್ನು ಹಿಡಿದೆಳೆದು ನೆಲಕ್ಕೆ ಕೆಡವಿದನು. ಅವರು ಎದ್ದು ನಿಂತು ಮತ್ತೆ ಪಿಕೆಟಿಂಗ್ ಆರಂಭಿಸಿದಾಗ ಮತ್ತೊಮ್ಮೆ ಆತ ಅವರನ್ನು ನೆಲಕ್ಕೆ ಕೆಡವಿ ಒದ್ದನು.

ಟೆಲಿವಿಜನ್ ಸುದ್ದಿಗಾರರು ಈ ದೃಶ್ಯವನ್ನು ಚಿತ್ರಿಸಿಕೊಂಡರು. ಅಂದು ರಾತ್ರಿ ಸಾಮಾನ್ಯವಾಗಿ ಇಂಥ ಸಭೆಗೆ ಎಂದೂ ಬಾರದ ಜನರು ಬಂದು ಇವರಿಗೆ ಬೆಂಬಲವಿತ್ತರು.

ಬ್ಯಾಪ್ಟಿಸ್ಟ್ ಚರ್ಚೊಂದು ಇವರಿಗೆ ಆತಿಥ್ಯ ನೀಡಿತು. ಅಂದು ರಾತ್ರಿ ಸ್ಕಾಟ್ ಮತ್ತು ಬೀ ಅಡಿಗೆ ಮನೆಯಲ್ಲಿ ಕಾಫಿ ಕುಡಿಯುತ್ತ ಕುಳಿತಿದ್ದರು. ಯಾರೋ ಒಬ್ಬರು ಅವರಿಗೆ ಒಂದು ಸಂಗೀತ ಕಚೇರಿಯ ತಿಕೀಟುಗಳನ್ನು ಕೊಟ್ಟಿದ್ದರು. ಆದರೆ ಸ್ಕಾಟ್ "ನನ್ನ ಬಳಿಯಲ್ಲಿ ಸರಿಯಾದ ಉಡುಪಿಲ್ಲ" ಎಂದು ಹೋಗಲೊಪ್ಪಲಿಲ್ಲ.

"ಏನು? ಇಸ್ತ್ರಿ ಶರ್ಟ್ ತೊಟ್ಟಾಗ ಸಂಗೀತ ಹೆಚ್ಚು ಮಧುರವಾಗುವುದೇನು?" ಬೀ ಮೂದಲಿಸಿದಳು.

"ನಾನು ಪರಂಪರಾಪ್ರಿಯ. ನಾನು ಬೆಳೆದದ್ದೇ ಅಂಥ ವಾತಾವರಣದಲ್ಲಿ. ನೀನು ಇದನ್ನೆಲ್ಲ ರೂಢಿಸಿಕೊಳ್ಳುವುದುತ್ತಮ."

"ನಾನು ನಿನ್ನನ್ನು ತುಂಬಾ ಪ್ರೀತಿಸುತ್ತೇನೆ, ನಿನಗೆ ಗೊತ್ತಿದೆಯೆ?"

ಮುಂದೆ ಕೆಲ ನಿಮಿಷ ಇಬ್ಬರೂ ಮೌನವಾಗಿದ್ದರು. ಬಳಿಕ ಬೀ ಎದ್ದುನಿಂತು "ನಾನು ಈ ಪಥಕವನ್ನು ಬಿಟ್ಟು ಹೋಗುವುದೇ ಒಳಿತು. ನನ್ನಿಂದೇನೂ ಅಂಥ ವಿಶೇಷ ಪ್ರಯೋಜನವಿಲ್ಲ. ಮೊದಲೇ ಇತರ ಸಮಸ್ಯೆಗಳು ಸಾಕಷ್ಟಿರುವ ಬ್ರಾಡ್‌ನ ಮೇಲೆ ಈ ಸಮಸ್ಯೆಯನ್ನೂ ಹೇರುವುದು ಬೇಡ," ಎಂದಳು.

"ಇನ್ನೂ ಸ್ವಲ್ಪ ತಡೆಯಲ್ಲ. ಇನ್ನು ಐದಾರು

K 6-16

ತಿಂಗಳಲ್ಲಿ ನಾವು ಪ್ಯಾರಿಸ್ ತಲುಪುವೆವು. ಅಷ್ಟರಲ್ಲಿ ನಮ್ಮಿಬ್ಬರ ನಿಶ್ಚಿತಾಭಿಪ್ರಾಯ ತಿಳಿದೀತಲ್ಲ," ಸ್ಕಾಟ್ ಹೇಳಿದ.

ಆದರೆ ಪಥಕ ಕನ್ಸಾಸನ್ನು ಮುಟ್ಟಿದಾಗ ಬೀ ಅದರಿಂದ ಹೊರಬಿದ್ದಳು. ಚಿಕಾಗೊದಲ್ಲಿ ಕೆಲಸ ಮಾಡಲು ಮಾಡಿಕೊಂಡ ಕರಾರಿನಿಂದ ಅವಳಿಗೆ ಬಿಡುಗಡೆ ಸಿಕ್ಕಿರಲಿಲ್ಲ. ಅವಳು ವಿಚಿಟಾದಲ್ಲಿ ಸ್ಕಾಟನನ್ನು ಬೀಳ್ಕೊಂಡಳು.

"ಮುಂದೆ ಅವನನ್ನೆಂದೂ ಕಾಣುವ ನಿರೀಕ್ಷೆಯನ್ನು ನಾನಿಟ್ಟುಕೊಂಡಿರಲಿಲ್ಲ. ನಮ್ಮನ್ನು ಪ್ರೀತಿಸದವರಲ್ಲಿ ಮೋಹಗೊಳ್ಳುವುದೆಂದರೆ ತುಂಬಾ ತಾಪದಾಯಕವಾದದ್ದು. ನನ್ನಲ್ಲಿ ಸ್ಕಾಟನಿಗೆ ಆಕರ್ಷಣೆ ಇದ್ದಿತಾದರೂ ಅದು ಸಾಕಷ್ಟು ಬಲಯುತವಾಗಿಲ್ಲವೆಂದು ನನಗೆ ತಿಳಿದಿತ್ತು." ಬೀ ತನ್ನ ಆಗಿನ ಮನದಳಲನ್ನು ತೋಡಿಕೊಳ್ಳುವಾಗ ಹೇಳುತ್ತಾಳೆ.

ಆದರೆ ಮುಂದೆ ಮೂರು ವಾರಗಳ ನಂತರ ಪಥಕ ಚಿಕಾಗೋಕ್ಕೆ ಬಂದಾಗ ಸ್ಕಾಟ್ ಅವಳನ್ನು ಹುಡುಕಿಕೊಂಡು ಬಂದ. "ಬೀ, ನೀನಿಲ್ಲದಿದ್ದರೆ ನನ್ನ ಜೀವನ ಇಷ್ಟು ನಿಸ್ಸಾರವಾಗುತ್ತದೆಂಬ ಕಲ್ಪನೆ ನನಗಿರಲಿಲ್ಲ. ನಾನು ನಿನ್ನನ್ನು ಪ್ರೀತಿಸುತ್ತೇನೆ. ನನ್ನನ್ನು ಲಗ್ನವಾಗು," ಎಂದನಾತ.

ತಾನು ಅವಸರದಿಂದಲೇ 'ಹೂಂ' ಎಂದೆ ಎನ್ನುತ್ತಾಳೆ ಬೀ.

ಅವರ ಮದುವೆಯ ನಿರ್ಧಾರದಿಂದ ಪಾದಯಾತ್ರಾ ಪಥಕದವರಲ್ಲಿ ಒಂದಿಷ್ಟು ಗಡಿಬಿಡಿ ಎದ್ದಿತು. ಇದರಿಂದ ಈ ಯಾತ್ರೆ ಒಂದು ಪ್ರಣಯದಾಟದ ಕೂಟ ಎಂಬ ಭಾವನೆ ಜನರಲ್ಲಿ ಉಂಟಾದೀತೆಂದು ಅವರಲ್ಲೆಷ್ಟೋ ಜನ ಭಾವಿಸಿದರು.

"ಅಲ್ಲಾ, ಜಗತ್ತಿಗೆ ಶಾಂತಿ, ಪ್ರೇಮ, ನಂಬಿಕೆಗಳನ್ನು ಬಿಂಬಿಸಹೊರಟ ಜನರಿಗೆ ನಮ್ಮಿಬ್ಬರ ಪ್ರೇಮದ ವಿಚಾರ ಇಷ್ಟು ತಲೆ ಕೆಡಿಸಬೇಕೆ? ಪ್ರೇಮವು ಜಗತ್ತಿಗೆ ಒಳ್ಳೆಯದಾದರೆ, ಶಾಂತಿವಾದಿ ಪಾದಯಾತ್ರಿಕರಿಗೆ ಮಾತ್ರ ಹೇಗೆ ಕೆಡುಕಾದೀತು?" ಬೀ ಯೋಚಿಸಿದಳು.

ಬ್ರಾಡ್ ಲಿಟ್ಲ್ ಪಾದಯಾತ್ರಿಕರ ಮನವನ್ನು ಒಲಿಸಿದನು. ಅವನಿಗೂ ತಮ್ಮ ಯಾತ್ರೆಯ ಕಾಲದಲ್ಲಿ ಪ್ರೇಮ ಪ್ರಕರಣ ನಡೆಯುವುದು ಬೇಕಾಗಿರಲಿಲ್ಲ, ನಿಜ. "ಈ ಪಾದಯಾತ್ರೆಯ ವಿಚಾರ ಮನದಲ್ಲಿ ಮೂಡಿದಾಗಲೇ ಯಾತ್ರಿಕರೆಲ್ಲರೂ ಗಂಡಸರೇ ಆಗಿರಬೇಕು ಎಂದು ನಿಶ್ಚಯಿಸಿದ್ದೆ. ಸ್ತ್ರೀಪುರುಷರಿಗೆ ಬೇರೆ ಬೇರೆ ಮಲಗುವ ವ್ಯವಸ್ಥೆ ಮಾಡುವುದೇ ಮುಂತಾದ ಕಾರ್ಯಗಳು ಯಾತ್ರೆಯ ಕಾಲದಲ್ಲಿ ಸುಗಮವಾಗಿರಲಿಲ್ಲ. ಯಾತ್ರೆಯ ಕಾಲದಲ್ಲಿ ದೈಹಿಕ ಕಷ್ಟವಂತೂ ಸರಿಯೇ. ಜೊತೆಗೆ ನಾವು ಹಿಂಸಾಚಾರಕೂ ಒಳಗಾಗುವ ಸಂಭವವಿತ್ತು.

"ಆದರೆ ಯಾತ್ರೆಯಲ್ಲಿ ಸೇರಿಕೊಳ್ಳಲಿಚ್ಛಿಸಿದ ಸ್ತ್ರೀಯರ ಸಂಖ್ಯೆ ಬಹಳವಿತ್ತು. ನಿರುಪಾಯನಾಗಿ ನಾನು ಕೆಲವರನ್ನು ಸೇರಿಸಿಕೊಳ್ಳಲೇ ಬೇಕಾಯಿತು. ಹಾಗೆ ನೋಡಿದರೆ ಶಾಂತಿಯ ಮಾತುಗಳನ್ನು ಗಂಡಸರಿಗಿಂತಲೂ ಎಷ್ಟೋ ಮೊದಲು ಆಡಿದವರು ಸ್ತ್ರೀಯರೇ ಅಲ್ಲವೆ? ಯಾತ್ರೆಯ ಕಾಲದಲ್ಲಿ ಖಂಡಿತ ಪ್ರೇಮ ಪ್ರಣಯಾದಿಗಳಿಗೆ ಅವಕಾಶವಿರಬಾರದು ಎಂದು ಯೋಚಿಸಿದ್ದೆನಾದರೂ ಬೀ ಮತ್ತು ಸ್ಕಾಟರ ಪ್ರೇಮವು ನಿಜವಾದದ್ದು, ಪವಿತ್ರವಾದದ್ದು ಎಂದು ಕಂಡುಕೊಂಡೆನಾದ್ದರಿಂದ ಚಿಕಾಗೋನಲ್ಲಿ ನನ್ನ ತಂದೆ ಅವರ ಲಗ್ನ ನೆರವೇರಿಸುವರು ಎಂದು ಅವರಿಗೆ ತಿಳಿಸಿದೆ. ನನ್ನ ತಂದೆ ಪಾದ್ರಿ" ಎಂದು ಬ್ರಾಡ್ ಲಿಟ್ಲ್ ಹೇಳುತ್ತಾನೆ.

ಯಾತ್ರಿಕರು ವಾಶಿಂಗ್ಟನ್ನಿಗೆ ಪ್ರಯಾಣ ಬೆಳೆಸಿದರು. ಹಾದಿಯಲ್ಲಿ ವಿಶೇಷವೇನೂ ಘಟಿಸಲಿಲ್ಲ. ಈಗ ಅಧ್ಯಕ್ಷ ಕೆನೆಡಿಯವರ ಶ್ವೇತಭವನದ ಸಹಾಯಕರಲ್ಲೊಬ್ಬರೂ ಹಾರ್ವರ್ಡ್ ಇತಿಹಾಸಕಾರರೂ ಆದ ಆರ್ಥರ್ ಸ್ಕೆಸ್ಲಿಂಗರ್ ಜ್ಯೂನಿ

ಯರ್‌ರೊಂದಿಗೆ ಈ ಶಾಂತಿವಾದಿಗಳು ತಮ್ಮ ವಿಷಯವನ್ನು ಚರ್ಚಿಸಿದರು. ಈ ಯಾತ್ರೆಯ ಸಾರ್ಥಕತೆಯನ್ನೆ ಪ್ರೊಫೆಸರ್ ಸ್ಕೆಸ್ಲಿಂಗರರು ಪ್ರಶ್ನಿಸಿದಾಗ ಬ್ರಾಡ್ ಲಿಟ್ಲ್ ಹೇಳಿದ: "ಏಕಪಕ್ಷೀಯ ನಿಶ್ಶಸ್ತ್ರೀಕರಣವೆಂಬುದು ಗಂಡಾಂತಕಾರಿ ಎಂದು ನಮಗೆ ಗೊತ್ತಿದೆ. ಆದರೆ ಯಾವನೊಬ್ಬ ಅಂಜುಬುರುಕನಾಗಲಿ ಶಸ್ತ್ರಪ್ರಯೋಗದ ಲವಲವಿಕೆಯುಳ್ಳ ಸೈನಿಕನಾಗಲಿ ಇಲ್ಲವೆ ಮುತ್ಸದ್ದಿಯೊಬ್ಬನಾಗಲಿ ಒಂದೇ ಒಂದು ಗುಂಡಿಯನ್ನೊತ್ತಿ ಇಡೀ ಜಗತ್ತನ್ನೇ ನಾಶ ಮಾಡಬಲ್ಲ ಎಂಬುದು ಸ್ಪಷ್ಟವಿರುವಾಗ ಇದಕ್ಕೊಂದು ಮೂಲಭೂತ ಉತ್ತರವೇ ಬೇಕಲ್ಲವೆ? ಸಂಧಾನಕ್ಕಾಗಿ ಕಾಯ್ದೆ, ಕರಾರುಗಳನ್ನು ಹಾಕದೇನೇ ಶಸ್ತ್ರಾಸ್ತ್ರಗಳ ತ್ಯಾಗದ ವಿಚಾರವನ್ನು ಮಾಡುವಂತೆ ಜನರನ್ನು ಪ್ರೇರೇಪಿಸಲು ಪ್ರಯತ್ನ ಮಾಡಲೆಂದು ನಾವು ಮಾಸ್ಕೊದ ವರೆಗೆ ಪಾದಯಾತ್ರೆ ಕೈಕೊಂಡಿದ್ದೇವೆ. ನಾವೆಲ್ಲ ಒಂದು ಸ್ಫೋಟದಿಂದ ಛಿನ್ನವಿಚ್ಛಿನ್ನರಾಗಿ ಆಕಾಶದಲ್ಲಿ ತೂರಲ್ಪಡುವ ಮೊದಲೇ ಶಸ್ತ್ರಾಸ್ತ್ರ ಸ್ಪರ್ಧೆ ನಿಲ್ಲಬೇಕು."

ಶಾಂತಿಪಥಕ ನ್ಯೂಯಾರ್ಕಿಗೆ ನಡೆದುಹೋಗಿ ಅಲ್ಲಿ ಸಂಯುಕ್ತ ರಾಷ್ಟ್ರ ಸಂಘದೆದುರು ಚಿಕ್ಕ ಮತ ಪ್ರದರ್ಶನವನ್ನು ನಡೆಸಿ ಅಲ್ಲಿಂದ ಲಂಡನ್ನಿಗೆ ವಿಮಾನದಲ್ಲಿ ಪ್ರಯಾಣ ಮಾಡಿತು.

"ಶಾಂತಿವಾದಿಗಳು ಮೋಸ ಹೋಗುವಂಥ ದೇಶ ಇಂಗ್ಲಂಡ್. ಅಲ್ಲಿ ಶಾಂತಿ ಚಳವಳಿ ಬಲವಾಗಿದೆ. ನಿಶ್ಶಸ್ತ್ರೀಕರಣದಲ್ಲೂ ಅಲ್ಲಿ ಆಸ್ಥೆಯಿದೆ. ಅಲ್ಲಿ ಸಿಗುವ ಪ್ರೋತ್ಸಾಹದಿಂದ ಗಗನಕ್ಕೇರಿದಂತಾಗುತ್ತದೆ. ನಾವೆಂದರೆ ಬಹಳ ದೊಡ್ಡವರು ಎಂಬ ಭಾವನೆ ಬರುತ್ತದೆ" ಸ್ಕಾಟ್ ಇಂಗ್ಲಂಡಿನ ಬಗ್ಗೆ ನುಡಿಯುತ್ತ ಹೇಳುತ್ತಾನೆ.

ಲಂಡನ್ ವಿಮಾನ ನಿಲ್ದಾಣದಲ್ಲಿ ಈ ಶಾಂತಿ ಪಾದಯಾತ್ರಿಕರನ್ನು ೪,೦೦೦ ಜನ ಎದುರ್ಗೊಂಡರು. ಮಳೆ ಜೋರಾಗಿ ಬೀಳುತ್ತಿದ್ದರೂ ಲೆಕ್ಕಿಸದೆ ಅವರ ಜೊತೆಯಲ್ಲಿ ಟ್ರಾಫಲ್ಗರ್ ಚೌಕಿನ ವರೆಗೆ ನಡೆದರು. ನಾಲ್ಕು ದಿನಗಳ ವರೆಗೆ ಸಭೆಗಳನ್ನು ಸೇರಿಸಿ ಭಾಷಣಗಳನ್ನು ಮಾಡಿದ ಈ ಶಾಂತಿವಾದಿಗಳು ಇಂಗ್ಲೀಷ್ ಕಡಲ್ಗಾಲುವೆ ದಾಟಿ ಫ್ರಾನ್ಸಿನ ದಂಡೆಯತ್ತ ನಡೆದರು.

ಫ್ರೆಂಚ್ ಸರಕಾರ ಇವರಿಗೆ ಪ್ರವೇಶ ಪತ್ರವನ್ನು ಕೊಡಲು ನಿರಾಕರಿಸಿತ್ತು. ಇವರ ಪಾದಯಾತ್ರೆಯ ಮಾರ್ಗದಲ್ಲಿದ್ದ ದೇಶಗಳಲ್ಲಿ ಫ್ರಾನ್ಸ್ ಒಂದೇ ಇವರಿಗೆ 'ನ'ಕಾರವಿತ್ತ ದೇಶವಾಗಿತ್ತು.

ಆದರೆ ಶಾಂತಿವಾದಿಗಳು ಕೈಚೆಲ್ಲಿ ಕೂಡ್ರಲಿಲ್ಲ. "ನಿರಾಕರಣೆಗೆ ಯಾವ ಕಾರಣವನ್ನೂ ಫ್ರೆಂಚ್ ಸರಕಾರ ಕೊಡಲಿಲ್ಲ. ಆದರೆ ಫ್ರೆಂಚ್ ಜನರೆದುರು ನಾವು ಮಾತನಾಡುವುದು ನಮ್ಮ ಕರ್ತವ್ಯವೆಂದು ಭಾವಿಸಿದೆವು. ಲೆ ಹಾವ್ರೆಗೆ ಹೊರಟ ದೋಣಿಯೊಂದನ್ನು ಏರಿದೆವು. ನಾವು ತೀರವನ್ನು ತಲುಪಿದಾಗ ಫ್ರೆಂಚ್ ಪೋಲೀಸರು ನಮ್ಮನ್ನು ಇಳಿಯಗೊಡಲಿಲ್ಲ. ಹೀಗಾದೀತೆಂಬ ಕಲ್ಪನೆ ನಮಗಿತ್ತು. ಅಲ್ಲಿ ದಂಡೆಯ ಮೇಲೆ ನೆರೆದಿದ್ದ ಫ್ರೆಂಚ್ ಶಾಂತಿವಾದಿಗಳತ್ತ ನಾವು ಕೈ ಬೀಸಿದೆವು. ಅವರ ಕೈಯಲ್ಲಿ 'ಬಾಂಬನ್ನು ಪ್ರತಿಬಂಧಿಸಿರಿ' ಎಂಬ ಘೋಷಣೆಯನ್ನು ಬರೆದ ಫಲಕಗಳಿದ್ದುವು. ಪೋಲೀಸರು ಅವನ್ನು ಕಸಿದುಕೊಂಡು ಸಮುದ್ರಕ್ಕೆಸೆದರು.

"ನಾವು ದೋಣಿಯಲ್ಲಿ ಆಪ್ತಾಲೋಚನೆ ಮಾಡಿ ಯಾವುದೊಂದು ಬಗೆಯ ಸತ್ಯಾಗ್ರಹದಿಂದ ಪ್ರತಿಭಟನೆ ಸಲ್ಲಿಸಬೇಕೆಂದು ನಿರ್ಧರಿಸಿದೆವು. ಆದರೆ ಹೇಗೆ? ಸತ್ಯಾಗ್ರಹ ಅಹಿಂಸಾತ್ಮಕವೂ ಆಕರ್ಷಕವೂ ಭವ್ಯವೂ ನಮ್ಮ ಕಾರ್ಯಕ್ಕೆ ನೇರವಾಗಿ ಸಂಬಂಧಪಟ್ಟದ್ದೂ ಆಗಿರಬೇಕು. 'ದೋಣಿಯಿಂದ ನೀರಿನಲ್ಲಿ ಧುಮುಕೋಣ' ಎಂದೊಬ್ಬ ಕೂಗಲು ಉಳಿದವರೆಲ್ಲ 'ಭೇಷ್' ಎಂದರು."

ಸ್ಕಾಟ್ ಮತ್ತು ಇನ್ನಿತರ ೧೫ ಜನ ಶಾಂತಿ ಯಾತ್ರಿಕರು ನಿಶ್ಶಸ್ತ್ರೀಕರಣದ ಹಸ್ತಪತ್ರಿಕೆಗಳು ತುಂಬಿದ್ದ ವಾಟರ್‌ಪ್ರೂಫ್ ಪ್ಲಾಸ್ಟಿಕ್ ಚೀಲಗಳನ್ನು ಹೆಗಲಿಗೆ ಹಾಕಿಕೊಂಡು ನೀರಿನಲ್ಲಿ






ಚಮಚತುಂಬ
'ಆರೋಗ್ಯ'ದಿಂದ
ಈ ದಿನವನ್ನು
ಪ್ರಾರಂಭಿಸಿರಿ

## ಕ್ರುಶನ್ ಸಾಲ್ಟ್ಸ್ ಸೇವಿಸಿರಿ

ಅದರಲ್ಲಿ ಶರೀರಕ್ಕೆ ಅತ್ಯಾವಶ್ಯಕವಾದ ಖನಿಜ ವಸ್ತುಗಳು
ಮತ್ತು ಲವಣಗಳು ಸರಿಯಾದ ಪ್ರಮಾಣದಲ್ಲಿ ಇವೆ

KS.G 20 KAN

ನಿಕೊಲಸ್‌ರವರ N ತಯಾರಿಕೆ
ಉತ್ಕೃಷ್ಟತೆ ಮತ್ತು ಶುದ್ಧತೆಗೆ ಗ್ಯಾರಂಟಿ

ಧುಮುಕಿದರು.

ಸ್ಕಾಟ್ ಒಳ್ಳೆಯ ಈಜುಗಾರ ಎಂದು ಗೊತ್ತಿದ್ದರೂ ಬೀಯ ಹೃದಯ ಹೊಡೆದುಕೊಳ್ಳತೊಡಗಿತು. ಈ ದೃಶ್ಯದ ಫೋಟೊ ತೆಗೆಯಲು ಅವಳಿಗೆ ಹೇಳಿದ್ದರು. ಆದರೆ ಅವಳ ಕೈಗಳು ನಡುಗುತ್ತಿದ್ದುದರಿಂದ ಒಂದು ಫೋಟೋ ಕೂಡ ಸರಿಯಾಗಿ ಬರಲಿಲ್ಲ.

ಶಾಂತಿಯಾತ್ರಿಕರು ನೀರಿನಲ್ಲಿ ಹಾರಿಕೊಂಡ ಕೆಲವೇ ನಿಮಿಷಗಳಲ್ಲಿ ಫ್ರೆಂಚ್ ಪೋಲೀಸರ ಮೂರು ವ್ಯಾನುಗಳು, ಒಂದು ಅಂಬ್ಯುಲೆನ್ಸ್ ವ್ಯಾನು, ಸುದ್ದಿಗಾರರಿಂದ ತುಂಬಿದ ಮೂರು ಕಾರುಗಳು ಬಂದರದ ಧಕ್ಕೆಯ ಬಳಿ ನೆರೆದವು. ಫ್ರೆಂಚ್ ಪೋಲೀಸನೊಬ್ಬ ಶಾಂತಿಯಾತ್ರಿಕರನ್ನುದ್ದೇಶಿಸಿ 'ಫ್ರೆಂಚ್ ಸರಕಾರಕ್ಕೆ ಶರಣಾಗತರಾಗಿರಿ' ಎಂದು ಕೂಗಿದ.

ಶಾಂತಿಯಾತ್ರಿಕರು ಕೈಬೀಸುತ್ತ ದಂಡೆಯತ್ತ ಈಜ ಬರತೊಡಗಿದರು. ಫ್ರೆಂಚ್ ಪೋಲೀಸನೊಬ್ಬ ದೋಣಿಯೊಂದರಲ್ಲಿ ಜಿಗಿದು ಅದರ ಯಂತ್ರವನ್ನು ಆರಂಭಿಸಲು ಯತ್ನಿಸಿದ. ಯಂತ್ರ ಚಾಲೂ ಆಗಲಿಲ್ಲ. ಸ್ಕಾಟ್ ಅಲ್ಲಿಗೆ ಈಸಿ ಹೋಗಿ ಅವನಿಗೊಂದು ಹಸ್ತಪತ್ರಿಕೆ ಕೊಡ ಮಾಡಿದ. ಆ ಪೋಲೀಸ ಹಸ್ತಪತ್ರಿಕೆಯ ಬದಲು ಸ್ಕಾಟನ ಕೈಯನ್ನೇ ಹಿಡಿಯಲೆತ್ನಿಸಿದ. ಸ್ಕಾಟ್ ದೋಣಿಯ ಅಡಿಯಲ್ಲಿ ಈಸಿ ಹೋಗಿ ಒಂದು ಹಸ್ತಪತ್ರಿಕೆಯನ್ನು ದೋಣಿಯಲ್ಲಿ ಚೆಲ್ಲಿದ. ಇಷ್ಟರಲ್ಲಿ ದಂಡೆಯಲ್ಲಿ ನೂರಾರು ಜನ ಸೇರಿದ್ದರು. ನೀರಿನಲ್ಲಿ ಈಸುತ್ತಿದ್ದ ಶಾಂತಿಯಾತ್ರಿಕರೆಲ್ಲ ಬಂದರದಲ್ಲಿ ತಂಗಿದ್ದ ಅನೇಕ ಹಡಗುಗಳ ಮೇಲೆ ಹಸ್ತಪತ್ರಿಕೆಗಳನ್ನು ತೂರತೊಡಗಿದರು. "ನಾವು ಶಾಂತಿಗಾಗಿ ಈಸುತ್ತಿದ್ದೇವೆ! ಪರಮಾಣು ಶಸ್ತ್ರಗಳನ್ನು ತ್ಯಜಿಸಿರಿ! ಯುದ್ಧದ ಕಾಲ ಮುಗಿದುಹೋಯಿತು!"

ಜನ ಹರ್ಷಚಿತ್ತರಾಗಿ ಕೂಗಿದರು. ಕೈಬೀಸಿದರು. ಆದರೆ ಸ್ಕಾಟನಿಗೆ ಅದರ ಅರ್ಥ ಸರಿಯಾಗಿ ಆಗಲಿಲ್ಲ. ಜನ ಅವನ ಹರಮುರುಕು ಫ್ರೆಂಚ್ ಭಾಷೆಯ ಮಾತುಗಳನ್ನು ಅರ್ಥ ಮಾಡಿಕೊಂಡಿದ್ದರೊ ಅಥವಾ ಆಗಿನ ಉತ್ಸಾಹ-ಉದ್ವೇಗಪೂರ್ಣ ವಾತಾವರಣದ ಪ್ರಭಾವದಿಂದ ಕೂಗುತ್ತಿದ್ದರೋ ಅವನಿಗೆ ತಿಳಿಯಲಿಲ್ಲ. ಮುಂದೆ ಕೆಲ ಸೆಕೆಂದುಗಳಲ್ಲಿ ಮೂವರು ಪೋಲೀಸರಿದ್ದ ಲಾಂಚ್ ಒಂದು ಬಂದು ಸ್ಕಾಟ್ ನಿಂತಿದ್ದ ಕಟ್ಟೆಗೆ ಡಿಕ್ಕಿ ಹೊಡೆಯಿತು. ಸ್ಕಾಟ್ ನೀರಿನಲ್ಲಿ ಬಿದ್ದ. ಪೋಲೀಸರು ಅವನನ್ನು ಲಾಂಚಿನೊಳಕ್ಕೆ ಜಗ್ಗಿಕೊಂಡರು. ದಂಡೆಗೊಯ್ದು ಪೋಲೀಸ್ ವ್ಯಾನಿನಲ್ಲಿ ಕೂಡಿಸಿದರು. "ನನ್ನ ಕೈತಿರುವಿ ಒದ್ದ ಪೋಲೀಸನ ಕೆನ್ನೆಗೊಂದು ಬಿಗಿಯಬೇಕು ಎಂದು ನನಗನಿಸಿತು. ಆದರೆ ನಾನು ಅಹಿಂಸಾಪ್ರಚಾರಕನಾದ್ದರಿಂದ ಅದು ತರವಲ್ಲ ಎಂದುಕೊಳ್ಳುತ್ತ ಸುಮ್ಮನಾದೆ" ಎನ್ನುತ್ತಾನೆ ಸ್ಕಾಟ್.

ಪೋಲೀಸ್ ಠಾಣೆಯಲ್ಲಿ ಸ್ಕಾಟನನ್ನು ಒಂದು ಚಿಕ್ಕ ಕೋಣೆಗೆ ನೂಕಿದರು. ಆಗಲೇ ಆ ಕೋಣೆ ಶಾಂತಿ ಯಾತ್ರಿಕ ಈಜುಗಾರರಿಂದ ತುಂಬಿಹೋಗಿತ್ತು. ಎಲ್ಲರೂ ತೊಯ್ದು ಹೋಗಿದ್ದರು. ದಣಿದಿದ್ದರು. ಪಥಕದಲ್ಲಿಯ ಒಬ್ಬಳಂತೂ ನೀರಿನಲ್ಲಿ ಒಂದು ತಾಸಿಗಿಂತ ಹೆಚ್ಚು ಹೊತ್ತು ಈಸುತ್ತಿದ್ದಳು. ಅವಳು ಧಕ್ಕೆಗೆ ಬರಲೆತ್ನಿಸಿದಾಗಲೆಲ್ಲ ಪೋಲೀಸರು ಅವಳ ಕೈಗಳ ಮೇಲೆ ಹೊಡೆದು ಹಿಂದಕ್ಕಟ್ಟಿದ್ದರು. ಕೊನೆಗೆ ಪೋಲೀಸ್ ಲಾಂಚ್ ಅವಳಿದ್ದಲ್ಲಿಗೆ ಹೋಗಿತ್ತು. ಅಧಿಕಾರಿಯೊಬ್ಬ ಅವಳ ಕೂದಲನ್ನು ಹಿಡಿದು ಅವಳನ್ನು ಲಾಂಚಿನೊಳಕ್ಕೆ ಎಳೆದುಕೊಂಡಿದ್ದ.

ಆದರೆ ಅವರಾರೂ ಪೋಲೀಸರ ಬಗ್ಗೆ ದ್ವೇಷ ಭಾವನೆ ತಾಳಲಿಲ್ಲ. ತಿಳಿದೂ ತಿಳಿದೂ ಅವರು ಕಾಯದೆಭಂಗ ಮಾಡಿದ್ದರು. ಅದರ ಪ್ರಾಯಶ್ಚಿತ್ತ ಭೋಗಿಸಲು ಸಿದ್ಧರಾಗಿದ್ದರು.

ಶಾಂತಿಯಾತ್ರಿಕರು ನೀರಿನಲ್ಲಿ ಹಾರಿಕೊಂಡ ಏಳು ತಾಸುಗಳ ನಂತರ ಅವರನ್ನು ಮತ್ತೆ ಬಂದರಕ್ಕೆ ಕರೆದೊಯ್ದರು. ಅಲ್ಲಿ ದೊಡ್ಡದೊಂದು ಜನರ ಗುಂಪು ಇನ್ನೂ ಇತ್ತು. ಅವರೆಲ್ಲ ದೋಣಿ

ಯಲ್ಲಿದ್ದ ಶಾಂತಿ ಯಾತ್ರಿಕರತ್ತ ಕೈಬೀಸುತ್ತ ಕೂಗುತ್ತ ನಿಂತಿದ್ದರು. ಪೋಲೀಸ್ ವ್ಯಾನ್ ಆ ಜನರ ನಡುವೆ ಹಾದಿ ಮಾಡಿಕೊಂಡು ಹೋ-ಯಿತು. ಶಾಂತಿಯಾತ್ರಿಕರನ್ನಿಳಿಸಿ ಸ್ಟ್ರೆಚರುಗಳ ಮೇಲೆ ಹಾಕಿ ಧಕ್ಕೆಗೆ ಸಾಗಿಸಿದರು.

ಶಾಂತಿಯಾತ್ರಿಕರು ಇಂಗ್ಲಂಡಿನ ಸೌಥಂಪ್ಟನ್ ಬಂದರಕ್ಕೆ ಮರಳಿ ಬಂದಾಗ ಪತ್ರಿಕೆಗಳಲ್ಲಿ ಅವರ ಸಾಹಸಕಾರ್ಯದ ವರ್ಣನೆ ಪ್ರಾಮುಖ್ಯ ವಾಗಿ ಬಂದಿತ್ತು. ಪ್ಯಾರಿಸಿನಿಂದ ಫ್ರೆಂಚ್ ಶಾಂತಿ ಪಥಕವೊಂದು ಹೊರಟು ಈ ಅಮೇರಿ ಕನ್ ಶಾಂತಿ ಪಾದಯಾತ್ರಿಕರನ್ನು ಬೆಲ್ಜಿಯಂ ಗಡಿಯಲ್ಲಿ ಕೂಡಿಕೊಳ್ಳುವುದು ಎಂಬ ಸುದ್ದಿ ಯೂ ಪ್ರಕಟವಾಗಿತ್ತು.

ಬೆಲ್ಜಿಯಂ ಗಡಿಗೆ ಅವರು ಮಾರನೆಯ ದಿನ ಬಂದಾಗ ಬೆಲ್ಜಿಯನ್ ಗುಪ್ತ ಪೋಲೀಸರು ಅವರ ಮಾರ್ಗದಲ್ಲೆಲ್ಲ ಅವರನ್ನನುಸರಿಸಿ ಅವ ರಿಗೆ ಸಕಲ ಸೌಕರ್ಯಗಳು ಲಭ್ಯವಾಗುವಂತೆ ಏರ್ಪಾಡು ಮಾಡಿದರು ಎಂಬುದು ತಿಳಿದು ಅವ ರಿಗೆ ಆಶ್ಚರ್ಯವಾಯಿತು. ಶಾಂತಿಯಾತ್ರಿಕರಿಗೆ ಕೆಥೊಲಿಕ್ ಕಾನ್ವೆಂಟ್‌ಗಳು ಹಾದಿಯಲ್ಲಿ ಆತಿಥ್ಯ ನೀಡಿದ್ದವು. ಉತ್ತಮ ಊಟವನ್ನು ಬಡಿಸಿದ್ದವು. ಅದಕ್ಕಾಗಿ ಹಣ ಕೇಳಿದ ಸಂದರ್ಭ ಗಳೂ ಕಡಿಮೆಯಾಗಿದ್ದವು. ಹಾಲಂಡ್‌ನಲ್ಲಿ ಸುಸಂಘಟಿತವಾದ ಶಾಂತಿವಾದಿ ಸಂಘಗಳು ಅವರಿಗೆ ಸ್ವಾಗತಾತಿಥ್ಯಗಳನ್ನು ನೀಡಿದವು.

ಆದರೆ ಮುಂದೆ ಕೆಲ ದಿನಗಳ ನಂತರ ಪಶ್ಚಿಮ ಜರ್ಮನಿಯಲ್ಲಿ ಈ ತಂಡ ತೊಂದರೆಗೊಳಗಾ ಯಿತು. ಬೀದಿಯ ಮೂಲೆಗಳಲ್ಲಿ ಅಪ್ಪಣೆ ಪಡೆ ಯದೆ ನಿಂತರೆಂದು ಅವರಲ್ಲನೇಕರನ್ನು ಬಾನ್ ನಲ್ಲಿ ಬಂಧಿಸಿದರು. ಅನಧಿಕೃತ ಸ್ಥಳದಲ್ಲಿ ನಿಂತಿ ದ್ದಕ್ಕಾಗಿ ಡಾರ್ಟ್‌ಮಂಡ್‌ನಲ್ಲಿ ಇಡೀ ಪಥಕದ ವರನ್ನೇ ಪೋಲೀಸರು ಬಂಧಿಸಿದರು.

"ಪಶ್ಚಿಮ ಜರ್ಮನಿಯಲ್ಲಿ ನಮಗೆ ನಿರಾಶೆ ಯಾಯಿತು. ಕೆಲವರು ನಮಗೆ ವಿರೋಧ ಮಾಡಿದರೆಂದಲ್ಲ, ಆದರೆ ಅವರೆಲ್ಲ ಭಾವನಾಹೀನ ರಂತೆ ಕಂಡುಬಂದಿದ್ದಕ್ಕಾಗಿ. ಈಶಾನ್ಯ ಅಮೇರಿ ಕದಲ್ಲಿ ಬಹಳ ಜನ ನಮ್ಮನ್ನು ವಿರೋಧಿಸಿದರೂ ನಮ್ಮೊಂದಿಗೆ ಶಾಂತಿಯ ಮಾತನ್ನು ಚರ್ಚಿಸಲು ಅವರು ಸಿದ್ಧರಿದ್ದರು. ಆದರೆ ಜರ್ಮನಿಯ ಜನರು 'ನಾವು ಚೆನ್ನಾಗಿಯೆ ಇದ್ದೇವೆ. ಇದ್ದುದನ್ನು ಹದ ಗೆಡಿಸಬೇಡಿ. ಈಗ ಹದಿನೈದು ವರ್ಷಗಳ ಹಿಂದೆ ಧೂಳಿನಲ್ಲಿ ಹೊರಳಾಡುತ್ತಿದ್ದ ನಾವು ಈಗ ಅಭಿ ವೃದ್ಧಿಯನ್ನು ಸಾಧಿಸಿಕೊಂಡಿದ್ದೇವೆ. ನಮ್ಮ ಅಂಗಡಿಗಳನ್ನು ನೋಡಿ, ಬೇಕಾದ ಸಾಮಾನು ಗಳು ಸಿಗುತ್ತವೆ. ಬೀದಿಗಳಲ್ಲಿ ಮೋಟಾರುಗಳು ತುಂಬಿಹೋಗಿವೆ' ಎನ್ನುವಂತಿತ್ತು" ಎಂದು ಸ್ಕಾಟ್ ಪಶ್ಚಿಮ ಜರ್ಮನಿಯಲ್ಲಿ ದೊರೆತ ಅನುಭವವನ್ನು ವಿವರಿಸಿದ್ದಾನೆ.

ಶಾಂತಿ ಪಾದಯಾತ್ರಿಕರು ಪೂರ್ವ ಜರ್ಮನಿಗೆ ಹೊರಡುವುದಕ್ಕೆ ಕೆಲ ನಿಮಿಷಗಳ ಮೊದಲು ಅಮೇರಿಕನ್ ಉದ್ದಿಮೆದಾರನೊಬ್ಬ ಹೇಳಿದ: "ಮಿತ್ರರೆ, ಇದು ಖಾಸಗಿ ಮಾತು. ಆದರೆ ಕಮ್ಯುನಿಸ್ಟ್ ಜಗತ್ತಿನ ಬಗ್ಗೆ ನಿಮಗೆ ಒಂದಿಷ್ಟು ಜ್ಞಾನವಿರಬೇಕು. ಪಶ್ಚಿಮ ಜಗತ್ತಿನಲ್ಲಿ ನಿಮಗೆ ಸಾಕಷ್ಟು ವಿರೋಧ ಕಂಡುಬಂದಿರಬೇಕು. ಆದರೆ ಅಲ್ಲಿ ನಿಮ್ಮ ನಿಜಸ್ಥಿತಿಯ ಕಲ್ಪನೆ ನಿಮಗಿ ದ್ದಿತ್ತು. ನಿಮ್ಮನ್ನು ಬಯ್ದು, ಹೊಡೆದ ಜನ ನಿಮ್ಮನ್ನು ದ್ವೇಷಿಸುತ್ತಿರಬಹುದು, ಆದರೆ ಕಮ್ಯು ನಿಸ್ಟ್ ಜಗತ್ತಿನಲ್ಲಿ ಹಾಗಲ್ಲ. ಅವರು ಕೂದಲಿ ನಿಂದ ಕುತ್ತಿಗೆ ಕೊಯ್ಯುವವರು. ಅವರು ನಿಮ್ಮ ಬುದ್ಧಿಭ್ರಂಶಕ್ಕಾಗಿ ಯತ್ನಿಸುವರು. ಜಾಗ್ರತೆ ಯಿರಲಿ."

'ಕಬ್ಬಿಣದ ಪರದೆ' ದಾಟಿ ಕಮ್ಯುನಿಸ್ಟ್ ಜಗ ತ್ತಿನಲ್ಲಿ ಈ ಪಾದಯಾತ್ರಿಕರು ಕಾಲಿಟ್ಟೊಡನೆ ತಾವು ಪೂರ್ವ ಜರ್ಮನಿಯ ಶಾಂತಿ ಸಮಿತಿ ಯವರು ಎಂದುಕೊಂಡು ಸುಮಾರು ೫೦ ಜನ ಅವರನ್ನು ಭೆಟ್ಟಿಯಾದರು. ಅವರು ಅತಿಥಿಗಳ ಕೈಕುಲುಕಿ, ಬೆನ್ನು ಚಪ್ಪರಿಸಿ ಅವರನ್ನನುಸರಿಸಿ ನಡೆದರು.

"ನಾವೊಂದು ಬೀದಿಯ ಮೂಲೆಯಲ್ಲಿ ನಿಂತು ಭಾಷಣ ಮಾಡಲು ಯತ್ನಿಸಿದೆವು. ನಮ್ಮನ್ನೆದು ರ್ಗೊಂಡ ಶಾಂತಿ ಸಮಿತಿಯ ಜನ ನಮ್ಮನ್ನು ಸುತ್ತುಗಟ್ಟಿ ನಿಂತು ಕಾಲು ಅಪ್ಪಳಿಸಿ, ಚಪ್ಪಾಳೆ ತಟ್ಟಿ, ಕೂಗಿ ಗದ್ದಲ ಮಾಡಿ ನಾವಂದದ್ದೇನೂ ಯಾರಿಗೂ ಕೇಳದಂತೆ ಮಾಡಿದರು. ಪಶ್ಚಿಮ ಜರ್ಮನಿಯನ್ನು ನಿಶ್ಶಸ್ತ್ರಗೊಳಿಸಿರಿ ಎಂಬ ಫಲಕಗಳನ್ನವರು ಹಿಡಿದುಕೊಂಡಿದ್ದರು."

ಶಾಂತಿ ಪಾದಯಾತ್ರಾ ಪಥಕದವರು ಪೂರ್ವ ಜರ್ಮನಿಯ ಹೆದ್ದಾರಿಯ ಮಗ್ಗಲಲ್ಲಿ ಕುಳಿತು ತಮ್ಮ ಜರ್ಮನ್ ಬೆಂಬಲಿಗರಿಗೆ ಖಂಡತುಂಡವಾಗಿ ತಮ್ಮ ಅಭಿಪ್ರಾಯ, ಧ್ಯೇಯ ಇತ್ಯಾದಿಗಳನ್ನು ಹೇಳಿದರು. ಬ್ರಾಡ್ ಲಿಟ್ಲ್ ಹೇಳಿದ: "ನಮ್ಮ ಪಥಕದ ನಿಯಮಗಳಿಗೆ ಸಂಪೂರ್ಣವಾಗಿ ಅಧೀನವಾಗಿ ನಡೆಯದವರಾರೂ ನಮ್ಮ ಪಥಕದಲ್ಲಿ ಸೇರಿಕೊಳ್ಳಲಾರರು. ನಾವು ಒಪ್ಪದ ಘೋಷಣೆಗಳನ್ನು ಬರೆದ ಹಲಗೆಗಳನ್ನು ಯಾರೂ ಹಿಡಿದುಕೊಳ್ಳಲಾರರು. ನಮಗೆ ಬರೀ ಪಶ್ಚಿಮ ಜರ್ಮನಿಯನ್ನು ಮಾತ್ರವಲ್ಲ, ಇಡೀ ಜಗತ್ತನ್ನೇ ನಿಶ್ಶಸ್ತ್ರಗೊಳಿಸಬೇಕಾಗಿದೆ." ಪೂರ್ವ ಜರ್ಮನಿಯ ಶಾಂತಿ ಸಮಿತಿಯ ಜನ ತಟ್ಟನೆ ಈ ಕರಾರುಗಳಿಗೆ ಒಪ್ಪಿದ್ದನ್ನು ಕಂಡು ಬ್ರಾಡ್‌ನಿಗೆ ಆಶ್ಚರ್ಯವಾಯಿತು. ಮುಂದೆ ಅವರಿಂದೇನೂ ಬ್ರಾಡ್‌ನ ಪಥಕಕ್ಕೆ ತೊಂದರೆಯಾಗಲಿಲ್ಲ. ಒಂದೆಡೆ ಮಾತ್ರ ವಿಚಿತ್ರ ಕಟು ಅನುಭವ ಬಂತು. ಅವರ ಭಾಷಣಕ್ಕೆ ೮-೧೦ ಸಾವಿರಕ್ಕಿಂತಲೂ ಹೆಚ್ಚು ಜನ ಸೇರಿದ್ದರು. ಜರ್ಮನ್ ಶಾಂತಿವಾದಿಗಳಿಗೆ 'ಈ ಹಸ್ತಪತ್ರಿಕೆಗಳನ್ನು ಹಂಚಿರಿ' ಎಂದು ಬ್ರಾಡ್‌ನ ಪಥಕದವರು ಸಾವಿರಾರು ಹಸ್ತಪ್ರತಿಗಳನ್ನು ಕೊಟ್ಟರು. ಅದೇ ಅವರ ದೊಡ್ಡ ತಪ್ಪಾಯಿತು. ಮರುದಿನ ಮುಂಜಾನೆ ಈ ಸಹಸ್ರಾರು ಪತ್ರಿಕೆಗಳು ಒಂದು ಹೊಂಡದಲ್ಲಿ ತೇಲುತ್ತಿರುವುದು ಅವರಿಗೆ ಕಾಣಿಸಿತು.

ಅಲ್ಲದೆ ಶಾಂತಿ ಪಾದಯಾತ್ರಿಕರಿಗೆ ತಮ್ಮ ಮೇಲೆ ಸದಾ ರಾಜಕೀಯ ಕಣ್ಣ ಕಾವಲಿರುವುದೂ ತಿಳಿದಿತ್ತು. ಒಬ್ಬಾತ ಕಣ್ಣೀರು ಸುರಿಸುತ್ತ ಅವರ ಬಳಿಗೆ ಬಂದಾಗ ಅವರಿಗೆ ಆಶ್ಚರ್ಯವಾಗಿ ಹೋಯಿತು. ಬಂದಾತ "ನಾನೊಬ್ಬ ಶಾಲೆಯ ಪ್ರಿನ್ಸಿಪಾಲ. ಆದರೆ ಸರಕಾರದ ನಿಯಂತ್ರಣ ಇಷ್ಟೆಲ್ಲ ಇರುವಾಗ ನಾನೇನು ಕಲಿಸಲಿ? ನಾನು ಸತ್ಯವನ್ನು ಕಲಿಸಬಯಸುತ್ತೇನಲ್ಲದೆ ರಾಜಕೀಯವನ್ನಲ್ಲ. ಆದರೆ ಇಲ್ಲಿ ಪ್ರತಿಯೊಂದು ಸತ್ಯಕ್ಕೂ ರಾಜಕೀಯ ಒಪ್ಪ ಕೊಡುತ್ತಿದ್ದಾರೆ" ಎಂದ. ವಿದ್ಯಾರ್ಥಿಯೊಬ್ಬ "ನಾನು ಲಿಪ್‌ಜಿಗ್ ವಿಶ್ವವಿದ್ಯಾಲಯದಲ್ಲಿದ್ದೇನೆ. ನಮ್ಮಲ್ಲಿರುವ ವಿದ್ಯಾರ್ಥಿಗಳಲ್ಲಿ ನೂರಕ್ಕೆ ೭೫ ರಷ್ಟು ಜನ ಪಶ್ಚಿಮ ಜಗತ್ತಿಗೆ ಓಡಿ ಹೋಗಬೇಕೆನ್ನುತ್ತೇವೆ. ದಯವಿಟ್ಟು ನಮಗೆ ಸಹಾಯ ಮಾಡಿ," ಎಂದ.

ಬ್ರಾಡ್ ಲಿಟ್ಲ್ ಅವನಿಗೆ ಹೇಳಿದ: "ನಾವು ಮಹಾತ್ಮಾ ಗಾಂಧಿಯವರ ಅಹಿಂಸಾತ್ಮಕ ಸತ್ಯಾಗ್ರಹದಲ್ಲಿ ನಂಬಿಕೆಯುಳ್ಳವರು. ಅದರಿಂದ ನಾವು ಮಾಡುವುದೆಲ್ಲವೂ ಬಹಿರಂಗವಾಗಿ, ನ್ಯಾಯವಾಗಿ ಇರಬೇಕು. ನಾವು ಒಳಸಂಚುಗಳಲ್ಲಿ ಭಾಗವಹಿಸಲಾರೆವು. ಸುಳ್ಳು ಹೇಳಲಾರೆವು. ನಾವು ನ್ಯಾಯವೆಂದು ನಂಬಿರುವುದನ್ನು ಸಾಧಿಸಲು ಕೂಡ ವಾಮ ಮಾರ್ಗವನ್ನು ಹಿಡಿಯಲಾರೆವು. ನಾವು ನಿಮಗೆ ಹೇಗೆ ಸಹಾಯ ಮಾಡಬಲ್ಲೆವು?"

ಆ ವಿದ್ಯಾರ್ಥಿ ಸಿಟ್ಟಿನಿಂದಲೇ "ಇಲ್ಲ. ನೀವು ಸಹಾಯ ಮಾಡಲಾರಿರಿ" ಎಂದುತ್ತರವಿತ್ತ.

ಅಗಸ್ಟ್ ೧೩ ರಂದು, ಪಶ್ಚಿಮ ಮತ್ತು ಪೂರ್ವ ಜರ್ಮನಿಯನ್ನು ಪ್ರತ್ಯೇಕಿಸುವ ಸಿಮೆಂಟಿನ ಗೋಡೆ ಮತ್ತು ಮುಳ್ಳು ತಂತಿ ಬೇಲಿಯನ್ನು ಪೂರ್ವ ಜರ್ಮನ್ ಸರಕಾರ ಪ್ರಾರಂಭಿಸಿದ ದಿನ ಈ ಪಾದಯಾತ್ರಿಕರು ಪೂರ್ವ ಬರ್ಲಿನನ್ನು ತಲುಪಿದರು.

ಪಶ್ಚಿಮ ಜರ್ಮನ್, ಪೂರ್ವ ಜರ್ಮನ್, ಅಮೇರಿಕನ್ ಅಧಿಕಾರಿಗಳೆಲ್ಲ ಉದ್ವಿಗ್ನರಾಗಿ ಬಂದೂಕಿನ ಕುದುರೆಯ ಮೇಲೆ ಬೆರಳಿಟ್ಟು

ಕೊಂಡೇ ಕುಳಿತಿದ್ದರು. ಅವರಿಗೆ ಈ ವಿಷ ನಿಮಿಷದಲ್ಲಿ ಶಾಂತಿವಾದಿಗಳ ತಂಡವನ್ನು ಕಣ್ಣಿನಿಂದ ನೋಡುವುದೂ ಬೇಡವಾಗಿತ್ತು. ಪೂರ್ವ ಜರ್ಮನ್ನರು ಅವರನ್ನು ಬಲಾತ್ಕಾರವಾಗಿ ಒಂದು ಬಸ್ಸಿನಲ್ಲಿ ತುಂಬಿ ಪಶ್ಚಿಮ ಜರ್ಮನಿಗೆ ಹೊತ್ತುಹಾಕಿದರು. ಅಲ್ಲಿಂದ ಅವರು ಬೇರೊಂದು ಮಾರ್ಗದಿಂದ ಪೋಲಂಡಿಗೆ ತೆರಳಿದರು.

"ನಾವು ಅಗಸ್ಟ್ ಕೊನೆಯಲ್ಲಿ ಹಳ್ಳಿಗಳಲ್ಲೆಲ್ಲ ಸುಗ್ಗಿ ಹಬ್ಬಗಳು ನೆರವೇರುತ್ತಿದ್ದಾಗ ಪೋಲಂಡನ್ನು ಪ್ರವೇಶಿಸಿದೆವು. ಪ್ರತಿಯೊಬ್ಬನೂ ಸಂತಸಚಿತ್ತನಾಗಿದ್ದ. ಚರ್ಚುಗಳು ಜನರಿಂದ ತುಂಬಿರುತ್ತಿದ್ದವು. ನಮ್ಮ ದುರ್ದೈವದಿಂದ ಅವರೆಷ್ಟು ಸಂತೋಷಚಿತ್ತರಾಗಿದ್ದರೆಂದರೆ ಅವರಿಗೆ ಯುದ್ಧ ಮತ್ತು ಶಾಂತಿ ಎರಡರ ಪ್ರಸ್ತಾಪವೂ ಬೇಕಿರಲಿಲ್ಲ. ನಮ್ಮನ್ನಾಲಿಂಗಿಸಿ, ಸ್ವಾಗತಿಸಿ ಮದ್ಯವನ್ನಿತ್ತು 'ಬನ್ನಿ ಕುಣಿಯೋಣ' ಎಂದರವರು. ಬರ್ಲಿನ್-ವಾರ್ಸಾ ಹೆದ್ದಾರಿಯ ನಡುವೆ ನಾವು ನೃತ್ಯ ಮಾಡುವಂತಾಯಿತು" ಸ್ಕಾಟ್ ಜರ್ಮನಿಯ ಪ್ರಯಾಣದ ಮುಕ್ತಾಯವನ್ನು ವಿವರಿಸುತ್ತ ಹೇಳಿದ.

ಪೋಲಂಡಿನ ಶಾಂತಿ ಸಮಿತಿಯ ಆಗ್ರಹದ ಮೇರೆಗೆ ಆಸ್ಕ್ವಿಝ್‌ನಲ್ಲಿದ್ದ ನಾಝಿ ಸ್ಥಾನಬದ್ಧ ಶಿಬಿರವನ್ನು ಸಂದರ್ಶಿಸಲು ಈ ಪಾದಯಾತ್ರಿಕರು ಒಪ್ಪಿಕೊಂಡರು.

ಉಳಿದ ನಾಝಿ ಸ್ಥಾನಬದ್ಧ ಶಿಬಿರಗಳನ್ನೆಲ್ಲ ಅಳಿಸಿ ಅಲ್ಲಿ ತೋಟಪಟ್ಟಿಗಳನ್ನು ಮಾಡಿದ್ದರೂ ಆಸ್ಕ್ವಿಝ್‌ನ್ನು ಇದ್ದಕ್ಕಿದ್ದಂತೆಯೆ ಇಟ್ಟಿದ್ದಾರೆ. ಶತ್ರುಗಳು ಅಸಹಾಯ ಜನತೆಯನ್ನು ಎಂಥ ದುರ್ದೆಸೆಗೀಡುಮಾಡಬಲ್ಲರು ಎಂಬುದನ್ನು ನೋಡದೆ ಯಾರಿಗೂ ಏಕಪಕ್ಷೀಯ ನಿಶ್ಶಸ್ತ್ರೀಕರಣವನ್ನು ಪ್ರಚಾರ ಮಾಡುವ ಅಧಿಕಾರವಿಲ್ಲ ಎಂದು ಪೋಲಂಡಿನ ಶಾಂತಿಸಮಿತಿಯ ಸದಸ್ಯರಲ್ಲೊಬ್ಬ ಹೇಳಿದ.

"ಹ್ಹಾ! ಅದೊಂದು ಭೀಕರ ಅನುಭವವಾಗಿತ್ತು. ನರಕದಲ್ಲಿ ಐದು ತಾಸು ಸಂಚರಿಸಿ ಬಂದಂತಾಯಿತು ನಮಗೆ. ಅಲ್ಲಿ ೪೦ ಲಕ್ಷ ಜನ ಯಹೂದ್ಯರು ಅಸುವನ್ನು ನೀಗಿದ್ದರು. ನಮ್ಮಲ್ಲಿಯ ಅನೇಕ ಸ್ತ್ರೀಯರು ತಿರುಗಿಹೋಗಿ ಬಸ್ಸಿನಲ್ಲಿ ಕುಳಿತುಬಿಟ್ಟರು. ಆ ಶಿಬಿರದಲ್ಲಿ ಎಲ್ಲಿ ಬೇಕಲ್ಲಿ ಬೂಟಿನಿಂದ ನೆಲ ಕೆದರಿದರೂ ಸಾಕು, ಅಲ್ಲಿ ಮಾನವ ಎಲುವುಗಳು ಕಾಣಿಸುತ್ತವೆ. ಆರ್ತರು ಅಲ್ಲಲ್ಲಿ ಗೋಡೆಗಳ ಮೇಲೆ ಗೀಚಿದ ವಾಕ್ಯಗಳು ಇನ್ನೂ ಕಾಣಿಸುತ್ತಿವೆ. ಬಂಧಿತರ ಮೈಮೇಲಿಂದ ಕಿತ್ತುಕೊಂಡಿದ್ದ ಆಭರಣಗಳನ್ನು ಪ್ರದರ್ಶನಕ್ಕಿಟ್ಟಿದ್ದಾರೆ" ಎಂದು ಈ ಶಿಬಿರವನ್ನು ಕಂಡು ಬಂದ ಬೀ ಹೆರಿಕ್ ಹೇಳಿದಳು.

ಆ ಮೇಲೆ ಪೋಲೀಶ್ ಶಾಂತಿಸಮಿತಿಯವರು ಈ ಶಾಂತಿವಾದಿಗಳನ್ನು ಕೇಳಿದರು: "ನಾವು ಜರ್ಮನ್ನರಿಗೆ ಅಂಜಬೇಕು ಎಂಬುದು ನಿಮಗೀಗ ಖಾತ್ರಿಯಾಯಿತೆ? ಇಂಥ ಸಂಗತಿಗಳು ಮತ್ತೆಂದೂ ಜರುಗಬಾರದೆಂದು ನಾವು ಶಸ್ತ್ರಧಾರಿಗಳಾಗಬೇಡವೆ? ನಮಗೆ ಅಮೇರಿಕನ್ನರ ಭಯವಿಲ್ಲ, ಆದರೆ ಜರ್ಮನ್ನರದಿದೆ. ಬಹುಶಃ ಆಸ್ಕ್ವಿಝ್‌ನ್ನು ಕಂಡು ನಿಮ್ಮ ಹೃದಯ ಕರಗಲಿಲ್ಲವೇನು?"

ಅದಕ್ಕೆ ಈ ಶಾಂತಿವಾದಿಗಳೇನು ಹೇಳಬೇಕು? ಬ್ರಾಡ್ ಲಿಟ್ಲ್ ಅನಂತರ ಈ ಪ್ರವಾಸದ ವಿಷಯವನ್ನು ಕುರಿತು ಹೇಳುತ್ತಿದ್ದಾಗ ಹೀಗೆಂದ: "ಆಗ ನನಗೆ ಅಧೈರ್ಯವಾಯಿತು. ನಾವು ಮಾತಾಡಿ ಮುಗಿಸಿದ್ದೆವು. ಆದರೆ ಎಲ್ಲ ಕಡೆಯಲ್ಲಿಯೂ ತಾವು ಶಾಂತಿಪ್ರಿಯರು, ಇತರರ ಆಕ್ರಮಣದ ಭೀತಿಯೇ ಶಸ್ತ್ರಾಸ್ತ್ರಸಂಗ್ರಹ ಅಗತ್ಯವಾಗುವಂತೆ ಮಾಡುತ್ತಿದೆ ಎಂದೇ ಅನ್ನುತ್ತಿದ್ದರು. ಒಬ್ಬ ಪೋಲ್ ಹೇಳಿದ, 'ಅಮೇರಿಕದ ನಿಮಗೆ ಹೈಡ್ರೋಜನ್ ಬಾಂಬಿನ ಅಂಜಿಕೆಯಿದೆ. ಆದರೆ ಅದು ಬಲು ಕ್ಷಿಪ್ರದಲ್ಲಿ ಕೊಲ್ಲುತ್ತದೆ. ಜರ್ಮನ್ನರು ನಮ್ಮ ಜನಸಂಖ್ಯೆಯಲ್ಲಿ ಕಾಲು ಭಾಗವನ್ನು ಐದು ವರ್ಷಗಳ ದೀರ್ಘ ಅವಧಿಯಲ್ಲಿ ಚಿತ್ರಹಿಂಸೆಗೊಳಪಡಿಸಿ ಕೊಂದರು. ನಿಮ್ಮ ಯಾತ್ರೆ-ಸಂದೇಶಗಳು ನಿಷ್ಫಲವಾದವುಗಳು. ನಾವು ಖಂಡಿತ ಶಸ್ತ್ರಸಂನ್ಯಾಸ ಮಾಡುವುದಿಲ್ಲ."

ಮಳೆ ಜೋರಾಗಿ ಬೀಳುತ್ತಿರುವಾಗಲೇ ಶಾಂತಿ ಪಾದಯಾತ್ರಿಕರು ಪೋಲಂಡ್–ರಶಿಯಾ ಗಡಿಯನ್ನು ದಾಟಿದರು. ಸೋವಿಯೆಟ್ ಶಾಂತಿ ಸಮಿತಿಯ ಸದಸ್ಯರು ಮುಗುಳ್ನಗೆಯಿಂದ ಅವರನ್ನು ಸ್ವಾಗತಿಸಿ ದೊಡ್ಡದಾದ ಹೂಗುಚ್ಛಗಳನ್ನು ಅರ್ಪಿಸಿದರು. ಅವರನ್ನೆಲ್ಲ ಒಂದು ಉಸಿರುಗಟ್ಟಿಸುವಂತಿದ್ದ ದೊಡ್ಡ ಸ್ವಾಗತ ಭವನಕ್ಕೆ ಕರೆದೊಯ್ದರು. ಅಲ್ಲಿ ಮೇಜಿನ ಮೇಲೆ ಸೋಡಾಪಾಪ್ ಮತ್ತು ವೋಡ್ಕಾ ಬಾಟ್ಲಿಗಳು ತುಂಬಿದ್ದವು. "ಸ್ವೀಕರಿಸಿ ಪಾನೀಯಗಳನ್ನು" ಎಂದರು ಸೋವಿಯೆಟ್ ಶಾಂತಿಸಮಿತಿಯವರು.

ನ್ಯೂಯಾರ್ಕಿನಲ್ಲಿ ಸೋವಿಯೆಟ್ ಅಧಿಕಾರಿಗಳೊಂದಿಗೆ ಚರ್ಚಿಸಿ ಗೊತ್ತುಪಡಿಸಿದ ಅಧಿಕೃತ ಕಾರ್ಯಕ್ರಮಗಳೆಲ್ಲ ಅವರು ರಶಿಯಕ್ಕೆ ಹೋದೊಡನೆಯೇ "ಅಸಾಧ್ಯ", "ಅವ್ಯಾವಹಾರಿಕ", ಅಥವಾ "ಕಾಯದೆಗೆ ಅಸಂಗತವಾದವು" ಎಂದಾದವು. ರಶಿಯದ ಗಡಿಯಲ್ಲಿ ತಿರುಗಿ ಕೊಡಲಾಗುವುದು ಎಂದು ಈ ಶಾಂತಿ ಪಾದಯಾತ್ರಿಕರಿಂದ ಪೂರ್ವ ಜರ್ಮನಿಯಲ್ಲಿ ಜಪ್ತು ಮಾಡಲ್ಪಟ್ಟಿದ್ದ ಮಿಮಿಯೊಗ್ರಾಫ್ ಮಶಿನ್ ಒಂದು ನಾಪತ್ತೆಯಾಗಿ ಹೋಗಿತ್ತು. ಇವನ್ನೆಲ್ಲ ಓದಿ ನೋಡಬೇಕು ಎಂಬ ನೆಪ ಹೇಳಿ ಅವರ ಬಳಿ ಇದ್ದ ಹಸ್ತಪತ್ರಿಕೆಗಳ ಗಂಟುಗಳು ಜಪ್ತ ಮಾಡಲ್ಪಟ್ಟವು.

"ಆದರೆ ಇವನ್ನೆಲ್ಲ ನಿಮ್ಮ ಅಧಿಕಾರಿಗಳು ಮೊದಲೇ ನೋಡಿ ಒಪ್ಪಿದ್ದಾರಲ್ಲ!" ಬ್ರಾಡ್ ಲಿಟ್ ಹೇಳಿದ.

"ಆದರೆ ಅವರು ನೋಡಿದ್ದೇ ಇವು ಎಂದು ನಮಗೆ ಹೇಗೆ ಗೊತ್ತಾಗಬೇಕು ?" ರಶಿಯನ್ ಅಧಿಕಾರಿಗಳು ಸವಾಲು ಹಾಕಿದರು.

ಲಿಟ್ಲ್ ತಾಳ್ಮೆಯಿಂದಲೇ ಉತ್ತರಿಸಿದ: "ನಮಗೆ ನಮ್ಮ ಹಸ್ತ ಪತ್ರಿಕೆಗಳು ಬೇಕು. ನ್ಯೂಯಾರ್ಕಿನಲ್ಲಿರುವ ನಿಮ್ಮ ಅಧಿಕಾರಿಗಳು ಅವನ್ನು ನೋಡಿ ಅಡ್ಡಿಯಿಲ್ಲವೆಂದಿದ್ದಾರೆ. ಅವು ಸಿಗದೆ ನಾವಿಲ್ಲಿಂದ ಮುಂದೆ ಹೋಗುವುದಿಲ್ಲ. ಧರಣಿ ಸತ್ಯಾಗ್ರಹ ಎಂಬ ಶಬ್ದವನ್ನು ನೀವು ಕೇಳಿದ್ದೀರಿ ತಾನೆ ?"

ಪಾದಯಾತ್ರಿಕರು ಹಸ್ತಪತ್ರಿಕೆಗಳ ಗಂಟುಗಳ ಮೇಲೆ ಕುಳಿತುಕೊಂಡರು. ಸೋವಿಯೆಟ್ ಅಧಿಕಾರಿಗಳು ಅವಸರದಿಂದ ವಿಚಾರ ವಿನಿಮಯ ಮಾಡಿಕೊಂಡು, "ಸರಿ. ಹಸ್ತಪತ್ರಿಕೆಗಳನ್ನು ಒಯ್ಯಲಡ್ಡಿಯಿಲ್ಲ" ಎಂದು ತಿಳಿಸಿದರು.

"ಇಲ್ಲಿಗೆ ನಮ್ಮೆಲ್ಲ ತೊಂದರೆಗಳು ಮುಗಿದವು ಎಂದು ನಾವು ಭಾವಿಸಿದೆವು. ನಾವೆಲ್ಲ ಕಾಫಿ-ತಿಂಡಿಗಳನ್ನು ಸೇವಿಸುತ್ತಿದ್ದಾಗ ನಾನು ಮತ್ತು ಬೀ ಕಿಡಕಿಯಾಚೆ ನೋಡಿದೆವು. ಹೊರಗಡೆ ಒಂದು ದೊಡ್ಡ ಹಳದಿ ಬಸ್ ನಿಂತಿತ್ತು.

"ಸೋವಿಯೆಟ್ ಶಾಂತಿ ಸಮಿತಿಯ ಸದಸ್ಯನೊಬ್ಬ ಬಂದು 'ಇಂದು ರಾತ್ರಿ ನೀವು ಮಿನ್ಸ್ಕ ನಲ್ಲಿರುವಿರಿ' ಎಂದ. ನಾವು ನಕ್ಕು 'ಎರಡು ನೂರು ಮೈಲು ದೂರವಿರುವ ಅಲ್ಲಿಗೆ ನಾವು ಕಾಲ್ನಡಿಗೆಯಿಂದ ರಾತ್ರಿಯೊಳಗಾಗಿ ಹೇಗೆ ಹೋದೇವು' ಎಂದು ಕೇಳಿದೆವು. ಆತ ಆಘಾತವಾದವನಂತೆ 'ನಡೆಯುತ್ತೀರಾ? ಹುಚ್ಚರಂತಾಡಬೇಡಿ. ವಾಹನ ಸೌಕರ್ಯವಿರುವಾಗ ಯಾರು ನಡೆಯುತ್ತಾರೆ?' ಎಂದ.

"ಎಷ್ಟೋ ಜನ ಅಮೇರಿಕನ್ನರಂತೆ ಸೋವಿಯಟ್ ಅಧಿಕಾರಿಗಳೂ ನಮ್ಮ ಈ ಪಾದಯಾತ್ರೆ ಅಷ್ಟಕ್ಕಷ್ಟರದ್ದೇ ಎಂದು ಭಾವಿಸಿದ್ದಾರೆಂದು ನಮಗೆ ಈಗ ತಿಳಿಯಿತು. ಪ್ರತಿಯೊಂದು ಹೆಜ್ಜೆಯನ್ನೂ ನಡೆದೇ ಹೋಗಬೇಕೆಂಬ ನಮ್ಮ ಪ್ರತಿಜ್ಞೆಯೊಂದು ಹುಚ್ಚುತನ ಎಂದು ರಶಿಯನ್ನರು ತಿಳಿದಿದ್ದರು. ಅಂತೇ ಅವರು ನಮಗಾಗಿ ಒಂದು ವಿಲಾಸಿ ಸಂಚಾರ ಕಾರ್ಯಕ್ರಮವನ್ನು ಯೋಜಿಸಿದ್ದರು.

"ನಾವು ಸ್ಥಳ ಸಂದರ್ಶನಕ್ಕಾಗಿ ಬಂದಿಲ್ಲ ಎಂದು ಅವರಿಗೆ ಹೇಳಿದೆವು. ನಾವು ಶಾಂತಿ ಯಾತ್ರಿಕರು, ಬ್ರೆಸ್ಟ್ ಲಿಟೊವಸ್ಕಾನಿಂದ ಮಾಸ್ಕೊದವರೆಗೆ ನಡೆದುಕೊಂಡೇ ಹೋಗುವುದು ನಮ್ಮ ಪ್ರತಿಜ್ಞೆ. ಹಾಗೆ ಮಾಡಲು ನಮಗೆ

ಸೋವಿಯೆಟ್ ವಿಸಾ ಸಿಕ್ಕಿದೆ ಎಂದು ತಿಳಿಸಿದೆವು.

"ಸೋವಿಯೆಟ್ ಅಧಿಕಾರಿಗಳು ಕಂಗಾಲಾದಂತಾದರು. ಅವರೆಂದರು: 'ಆದರೆ ನಿಮ್ಮ ವಿಸಾಗಳು ಮೂರು ವಾರಗಳ ವರೆಗೆ ಮಾತ್ರ ಅಧಿಕೃತವಾಗಿರುವವು. ಅಷ್ಟರಲ್ಲಿ ನೀವಿಲ್ಲಿಂದ ಮಾಸ್ಕೊದ ವರೆಗೆ ನಡೆದು ಹೋಗಲಾರಿರಿ. ನೀವು ಪ್ರತಿನಿತ್ಯ ೫೦ ಮೈಲು ಕ್ರಮಿಸಬೇಕಾದೀತು'."

ರಶಿಯನ್ ಅಧಿಕಾರಿಗಳ ಈ ಮಾತು ಕೇಳಿ ಪಾದಯಾತ್ರಿಕರು ಗೊಂದಲಕ್ಕೆ ಬಿದ್ದರು. "ಇಂದಿಗೂ ನನಗೆ ನಮ್ಮನ್ನು ಬೇಕೆಂದೇ ಮೋಸಗೊಳಿಸಿದರೊ ಅಥವಾ ನಾವೇ ಮೂರ್ಖರಾಗಿದ್ದೆವೊ ಎಂದು ಸ್ಪಷ್ಟವಾಗಿಲ್ಲ. ಸಾಮಾನ್ಯವಾಗಿ ಆರು ವಾರಗಳು ಬೇಕಾಗುವ ಪಯಣಕ್ಕಾಗಿ ನಮಗೆ ಕೇವಲ ಮೂರೇ ವಾರಗಳನ್ನು ಕೊಡಲಾಗಿತ್ತೆಂಬುದು ಸತ್ಯ. ನಮ್ಮ ಪಥಕದಲ್ಲಿ ಮಧ್ಯವಯಸ್ಸಿನ ಗಂಡಸರು ಮತ್ತು ಹೆಂಗಸರು ಇದ್ದರು. ನಾವೇನು ಮಾಡಬಹುದಾಗಿತ್ತು ಈ ಸಂದರ್ಭದಲ್ಲಿ?" ಆಗಿನ ಮನಃಸ್ಥಿತಿಯನ್ನು ಕುರಿತು ಬ್ರಾಡ್ ಲಿಟ್ಲ್ ಹೇಳುತ್ತಾನೆ.

ವಿಸಾದ ಅವಧಿ ಹೆಚ್ಚಿಸಿ ಕೊಡಿರಿ ಎಂದು ಕೇಳಿದಾಗ "ಅದನ್ನು ಕೊಡುವುದು ನ್ಯೂಯಾರ್ಕಿನಲ್ಲಿ. ಅಲ್ಲಿಗೆ ಹೋಗಿ ಅವಧಿ ಬೆಳೆಸಿಕೊಂಡು ಬನ್ನಿರಿ" ಎಂಬ ಉತ್ತರ ಸಿಕ್ಕಿತು.

ಪಾದಯಾತ್ರಿಕರಲ್ಲಿ ಕೆಲವರು ತಮ್ಮ ಹಾಸಿಗೆ ಗಂಟನ್ನೆತ್ತಿಕೊಂಡು ತಾವು ತಿರುಗಿ ಮನೆಗೆ ಹೋಗುತ್ತೇವೆಂದರು. ಕೆಲವರು ಮುಂದೆ ಸಾಗೋಣ, ಮೂರು ವಾರದಲ್ಲಿ ಮಾಸ್ಕೊದಿಂದ ೧೫೦ ಮೈಲು ದೂರದ ವರೆಗಾದರೂ ತಲುಪುತ್ತೇವಲ್ಲ. ಅಷ್ಟರಿಂದಲೇ ತುಸುವಾದರೂ ಕಾರ್ಯವಾದೀತು ಎಂದರು.

ಇನ್ನು ಕೆಲವರು ಬಸ್ಸಿನಿಂದ ನೇರವಾಗಿ ಮಾಸ್ಕೊಕ್ಕೆ ಹೋಗೋಣ, ಇಡೀ ಮೂರು ವಾರಗಳನ್ನು ಅಲ್ಲಿಯೇ ಕಳೆಯೋಣ, ಜಗತ್ತಿನ ಕಣ್ಣಿಗಾದರೂ ನಾವು ಬಿದ್ದೇವು ಎಂದರು.

ಸ್ಕಾಟ್ ಹೆರಿಕ್ ಹೇಳಿದ: "ಇಷ್ಟು ದೂರ ಬಂದಿರುವ ನಾವು ಹಿಡಿದ ಕಾರ್ಯ ಕೈಬಿಡಬಾರದು. ಹಗಲು-ರಾತ್ರಿ ನಡೆದರೆ ನಾವು ನಿರ್ದಿಷ್ಟ ಅವಧಿಯಲ್ಲಿ ಮಾಸ್ಕೊ ತಲುಪಬಹುದು. ಪ್ರಯಾಣ ಬಲವಂತವಾಗಬೇಕು. ಬಸ್ಸಿನಲ್ಲಿ ನಿದ್ರಿಸೋಣ. ಹೇಳಿ, ಯಾರು ಸಿದ್ಧರಿದ್ದೀರಿ?"

ಒಂದಿಷ್ಟು ಚರ್ಚೆಯ ನಂತರ ಎಲ್ಲರೂ ಈ ಯೋಜನೆಯನ್ನು ಒಪ್ಪಿದರು. "ನೀವು ರಾಜಕೀಯ ಕಾರ್ಯಕರ್ತರು, ಜಟ್ಟಿಗಳಲ್ಲ" ಎಂದು ರಶಿಯನ್ ಶಾಂತಿ ಸಮಿತಿಯವರು ಪ್ರತಿಭಟಿಸಿದರು. ಹಳ್ಳಿಗಾಡಿನ ಮಾರ್ಗದಲ್ಲೆಲ್ಲ ಹಿಂಸ್ರ ಪಶುಗಳಿವೆ ಎಂದು ಎಚ್ಚರಿಸಿದರು.

"ಎಂಥ ಹಿಂಸ್ರ ಪ್ರಾಣಿಗಳು?" ಬೀ ಕೇಳಿದಳು.

"ಬಹು ದೊಡ್ಡ ಮೊಲಗಳು" ರಶಿಯನ್ನರು ಗಂಭೀರವಾಗಿ ಹೇಳಿದರು.

ಗಟ್ಟಿಯಾಗಿ ನಗುತ್ತ ಶಾಂತಿ ಯಾತ್ರಿಕರು ತಮ್ಮ ಗಂಟುಗಳನ್ನೆತ್ತಿಕೊಂಡು ನಡೆಯತೊಡಗಿದರು. ಅವರ ಘೋಷಣಾ ಪತ್ರಿಕೆಗಳ ಮೇಲೆ "ಯುದ್ಧ ಕೆಟ್ಟದ್ದು." "ಪರಮಾಣು ಯುದ್ಧದಲ್ಲಿ ಯಾರೂ ಗೆಲ್ಲುವುದಿಲ್ಲ." "ಬಾಂಬು ಬೇಡ, ರೊಟ್ಟಿ ಬೇಕು." "ನಿಶ್ಶಸ್ತ್ರೀಕರಣಕ್ಕಾಗಿ ಈಗಲೇ ಕಾರ್ಯ ಮಾಡಿ." ಎಂದು ಬರೆದಿತ್ತು.

ಸ್ಕಾಟ್ ರಶಿಯದಲ್ಲಿನ ಪ್ರವಾಸದ ವಿಚಾರವಾಗಿ ಮಾತಾಡುತ್ತಿದ್ದಾಗ ಹೇಳಿದ: "ರಶಿಯದಲ್ಲಿ ಕಾಲಿಟ್ಟೊಡನೆ ನಮಗೆ ಒಂದು ಮಾತು ತಿಳಿಯಿತು. ಆ ಮಾತು ಭಯಕಾರಕವಾಗಿತ್ತು. ಸೋವಿಯಟ್ ಜನರಿಗೆ ಪರಮಾಣು ಯುದ್ಧದ ಬಗ್ಗೆ ಏನೂ ಮಾಹಿತಿ ಇರಲಿಲ್ಲ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಪರಮಾಣುಬಾಂಬಿನ ಹಾವಳಿಯ ಬಗ್ಗೆ ಇರುವ ಮಾಹಿತಿಯನ್ನು ಕೇಳಿ ಅವರು ದಂಗಾದರು.

"ಭಾಷೆಯ ಪ್ರಶ್ನೆ ಬಲು ಜಟಿಲವಾಗಿತ್ತು. ನಮ್ಮಲ್ಲಿ ಒಬ್ಬಳಿಗೆ ಮಾತ್ರ ರಶಿಯನ್ ಭಾಷೆ ಬರುತ್ತಿತ್ತು. ರಶಿಯನ್ ಶಾಂತಿ ಸಮಿತಿಯ

ದುಭಾಷಿಗಳು ಚೆನ್ನಾಗಿಯೆ ಭಾಷಾಂತರಮಾಡುತ್ತಿದ್ದಾರೆ ಎಂದಾಕೆ ನಮಗೆ ಹೇಳಿದಳು. ಆದರೆ ನಾವು ಯಾರನ್ನುದ್ದೇಶಿಸಿ ಮಾತಾಡುತ್ತಿದ್ದೆವೊ ಅವರ ಪ್ರತಿಕ್ರಿಯೆ ಎಂತಾದೀತೆಂದು ನಮಗೆಂದೂ ತಿಳಿಯುತ್ತಿರಲಿಲ್ಲ. ಒಂದು ಕಾರಖಾನೆಯಲ್ಲಿ ಕೆಲ ಕೆಲಸಗಾರರು ವೇದಿಕೆಯ ಮೇಲೆ ದಾಳಿ ಮಾಡಿ ನಮ್ಮ ಹಸ್ತಪತ್ರಿಕೆಗಳನ್ನೆಲ್ಲ ಕಸಿದುಕೊಂಡು ಹರಿದುಹಾಕಿದರು. ಇನ್ನೊಂದು ಕಾರಖಾನೆಯಲ್ಲಿ ನಮ್ಮವರಲ್ಲೊಬ್ಬ ವೇದಿಕೆಯನ್ನೇರಿ ಪರಮಾಣು ಶಸ್ತ್ರಗಳಲ್ಲಿ ನಂಬಿಕೆಯಿಡುವ ಸರಕಾರ ಹುಚ್ಚ ಸರಕಾರ ಎಂದಾಗ ರಶಿಯನ್ನರು ಇದೊಂದು ವಿನೋದವೆಂದು ಭಾವಿಸಿ ವಿಕಟ ಹಾಸ್ಯಗೈದರು.

“ಆಗ ಬ್ರಾಡ್ ಲಿಟ್ಲ್ ಎದ್ದು ನಿಂತು, ನಿಮ್ಮ ನಗರಗಳು ಮತ್ತು ಕುಟುಂಬಗಳ ಮೇಲೆ ಗುರಿಯಿಡುವ ಬಂದೂಕುಗಳು ಮತ್ತು ರಾಕೆಟ್ಟುಗಳ ವಿರುದ್ಧ ನಾನು ಅಮೇರಿಕದಲ್ಲಿ ಪ್ರತಿಭಟಿಸಿ ಜೇಲುವಾಸವನ್ನನುಭವಿಸಿದ್ದೇನೆ. ಅವರಂತೆ ನನ್ನ ಕುಟುಂಬ ಮತ್ತು ನಗರದ ಮೇಲೆ ರಶಿಯನ್ ಬಂದೂಕುಗಳು ಗುರಿ ಹಿಡಿದಿವೆ ಎಂದೂ ನಾನು ಬಲ್ಲೆ. ಇದನ್ನು ಪ್ರತಿಭಟಿಸಲು ನೀವೇನಾದರೂ ಮಾಡಿರುವಿರಾ?

“ಜನ ಬಹಳ ಹೊತ್ತಿನ ವರೆಗೂ ಓಟ್ಟೆನ್ನಲಿಲ್ಲ. ಬ್ರಾಡ್ ಮುಂದುವರಿಸಿದ: ನಾವು ಅಮೇರಿಕದಲ್ಲಿದ್ದಾಗ ಹೋಗಿ ಈ ಮಾತನ್ನು ರಶಿಯನ್ನರಿಗೆ ಹೇಳಿರಿ ಎಂದರು. ನಾವು ಈಗ ಇಲ್ಲಿ ಬಂದಿದ್ದೇವೆ. ಆ ಮಾತನ್ನು ನಾನೀಗ ಹೇಳುತ್ತಿದ್ದೇನೆ. ರಶಿಯವು ಅಣ್ವಸ್ತ್ರ ಪ್ರಯೋಗಗಳನ್ನು ಮುಂದುವರಿಸಿದ್ದು ನಿಜವಾಗಿಯೂ ನಾಚಿಕೆಗೇಡೆಂದು ನನಗೆ...”

“ಆಗ ಇಡೀ ಸಭೆ ‘ಫ್ರಾನ್ಸ್’, ಫ್ರಾನ್ಸ್’ ಎಂದು ಕೂಗಿತು. ಬಾಂಬ್ ಪ್ರಯೋಗಗಳ ಅಂತಾರಾಷ್ಟ್ರೀಯ ನಿಯಮವನ್ನುಲ್ಲಂಘಿಸಲು ಅಮೇರಿಕ, ಫ್ರಾನ್ಸಿಗೇಕೆ ಅನುಮತಿ ನೀಡಿತೆಂದು ಅವರು ಕೇಳುತ್ತಿದ್ದಾರೆಂದು ದುಭಾಷಿಗಳು ನಮಗೆ ಹೇಳಿದರು. ಫ್ರಾನ್ಸ್ ಸ್ವತಂತ್ರ ದೇಶ, ಸಹಾರಾ ಪ್ರದೇಶದಲ್ಲಿ ಬಾಂಬ್ ಪ್ರಯೋಗ ನಡೆಸದಿರಲು ಫ್ರಾನ್ಸಿನ ಮನವೊಲಿಸಲು ನಮ್ಮ ಅಧ್ಯಕ್ಷರು ತುಂಬ ಪ್ರಯತ್ನ ಮಾಡಿದರು, ಆದರೆ ಫ್ರಾನ್ಸ್ ಕೇಳಲಿಲ್ಲ ಎಂದು ನಾನಂದೆ.

“ಆದರೆ ಈ ಕೆಲಸಗಾರರು ನಮ್ಮ ಮಾತನ್ನು ನಂಬಲಿಲ್ಲವೆನ್ನುವುದು ಸ್ಪಷ್ಟವಾಗಿತ್ತು. ಅಮೇರಿಕವು ರಶಿಯದ ಸುತ್ತಲೆಲ್ಲ ಸೈನಿಕ ಠಾಣ್ಯಗಳನ್ನೇಕೆ ಸ್ಥಾಪಿಸಿದೆ ಎಂದು ಅವರು ಪುನಃ ಪುನಃ ನಮ್ಮನ್ನು ಕೇಳಿದರು. ರಶಿಯನ್ ಸರಕಾರ ಗಂಡಾಂತರಕಾರಿ ಆಕ್ರಮಣಕಾರಿ ರಾಷ್ಟ್ರವಾಗಿದೆಯೆಂದು ನಮ್ಮ ಸರಕಾರ ಭಾವಿಸುತ್ತಿದೆಯೆಂದು ನಾವು ಹೇಳಿದೆವು. ಇದಕ್ಕೆ ಅವರ ಉತ್ತರ ಯಾವಾಗಲೂ ತಿರಸ್ಕಾರಯುಕ್ತ ನಗುವಾಗಿತ್ತು. ‘ನಾವು ಆಕ್ರಮಣಗಾರರೇ! ಭೇಷ್ ನಿಮ್ಮಿಂದ ಈ ಮಾತು ಬರುವುದೆಂದರೆ ಭಲೆ!’ ಎಂದರವರು.

“ಶಾಂತಿಗಾಗಿ ವೈಯಕ್ತಿಕ ಕಾರ್ಯವೆಂಬ ಮಾತಿನ ಮರ್ಮ ಅವರಲ್ಲಿ ಬಹು ಸ್ವಲ್ಪ ಜನರಿಗಷ್ಟೆ ಅರ್ಥವಾಯಿತು. ‘ಅಲ್ಲಾ, ನೀವೆಷ್ಟು ಜನರನ್ನು ಪ್ರತಿನಿಧಿಸುತ್ತಿದ್ದೀರಿ?’ ಎಂದವರು ಮತ್ತೆ ಮತ್ತೆ ಕೇಳುತ್ತಿದ್ದರು. ನಾವು ಪ್ರಾಮಾಣಿಕವಾಗಿ ‘ನಮ್ಮನ್ನಷ್ಟೆ’ ಎಂದುತ್ತರವಿತ್ತೆವು. ಏಕಪಕ್ಷೀಯ ನಿಶ್ಶಸ್ತ್ರೀಕರಣ ವಿಷಯದಲ್ಲಿ ನಮ್ಮಂತೆಯೆ ಆಲೋಚಿಸುವ ಕೆಲ ಜನ ಅಮೇರಿಕದಲ್ಲಿದ್ದಾರೆಂದು ಹೇಳಿದೆವು.

“ರಶಿಯನ್ನರು ತಲೆಯಲ್ಲಾಡಿಸಿದರು. ‘ನಿಮ್ಮದು ವ್ಯಾಪಕವಾದ ಚಳವಳಿಯಲ್ಲವೆಂದ ಮೇಲೆ ಅದರಿಂದ ಪ್ರಯೋಜನವೇನು? ಎಂದವರು ಕೇಳಿದರು. ಕೆಲ ಸಲ ಗಂಡಸರು, ಹೆಂಗಸರು ನಮ್ಮ ಬಳಿ ಬಂದು ಹರಕು ಮುರುಕು ಇಂಗ್ಲೀಷಿನಲ್ಲಿ ‘ಅಮೇರಿಕನ್ನರೆ, ನಾವು ಶಾಂತಿಯನ್ನು ಬಯಸುತ್ತೇವೆ. ನಮಗೆ ಶಾಂತಿ ಬೇಕು. ನೋಡಿ, ನಾವೇನೂ ಬಾಂಬ್ ದಾಳಿಯಿಂದ ರಕ್ಷಣೆಗಾಗಿ ಆಶ್ರಯ ಸ್ಥಾನಗಳನ್ನು ಕಟ್ಟಿಕೊಳ್ಳುತ್ತಿಲ್ಲ. ನಮ್ಮ ಮಕ್ಕಳಿಗೆ ಆಯುಧಾದಿಗಳ

ಆಟಿಗೆಗಳನ್ನೂ ಕೊಡುತ್ತಿಲ್ಲ' ಎಂದು ಹೇಳುತ್ತಿದ್ದರು."

ತಾಸಿಗೆ ನಾಲ್ಕು ಮೈಲುಗಳಂತೆ ನಡೆಯುತ್ತ, ಪಾಳಿಯಂತೆ ಜೊತೆ ಬರುತ್ತಿದ್ದ ಬಸ್ಸಿನಲ್ಲಿ ಮಲಗುತ್ತ ಹೊರಟಿದ್ದ ಈ ಪಾದಯಾತ್ರಿಕರು ಬಲು ಬೇಗನೆ ದಣಿದು ಬಸವಳಿದರು.

ದಿನದಿನಕ್ಕೆ ಈ ಪಾದಯಾತ್ರಿಕರನ್ನು ಕಾಣ ಬರುತ್ತಿದ್ದ ಜನರ ಸಂಖ್ಯೆ ಹೆಚ್ಚಾಗ ಹತ್ತಿತ್ತು. ಕೂಡು ದಾರಿಗಳಲ್ಲಿ ಎಷ್ಟೋ ಸಲ ನೂರಿನ್ನೂರಕ್ಕಿಂತ ಹೆಚ್ಚು ಜನ ಅವರ ಹಾದಿ ಕಾಯುತ್ತ ನಿಂತಿರುತ್ತಿದ್ದರು. ಬೆರೆಝುನಾದಲ್ಲಂತೂ ಎಲ್ಲರೂ ರಸ್ತೆಗಳಲ್ಲಿ ಸೇರಿದಂತಿತ್ತು. ಶಾಂತಿ ಪಾದಯಾತ್ರಿಕರು ಆ ಊರು ಮುಟ್ಟಿದಾಗ ಕತ್ತಲೆಯಾಗತೊಡಗಿತ್ತು. ಇವರು ಒಂದೊಡನೆ ಜನರ ಗದ್ದಲದಿಂದಾಗಿ ವಾಹನ ಸಂಚಾರ ನಿಂತಿತು. ಯಾತ್ರಿಕರೆಲ್ಲ ತೀರ ದಣಿದಿದ್ದರೂ ಆ ಜನಸಮೂಹದ ತೆರೆಯಲ್ಲಿ ಸಿಕ್ಕು ತೇಲಿ ಹೋದರು. ಅವರು ಒಂದೆಡೆ ಭಾಷಣ ಮಾಡಲೆತ್ನಿಸಿದಾಗ ರಶಿಯನ್ ಶಾಂತಿಸಮಿತಿಯ ಸದಸ್ಯರು ಅವರನ್ನು ಒಂದು ಹೊಟೆಲ್ಲಿಗೆ ಎಳೆದೊಯ್ದರು. "ಈಗ ಊಟದ ಹೊತ್ತಾಗಿದೆ ಆಮೇಲೆ ನೋಡೋಣ" ಎಂದರವರು.

ಎಲ್ಲೆಡೆಯಲ್ಲಿಯೂ ಇವರ ಮನೋರಂಜನೆಗಾಗಿ ಸಾಕಷ್ಟು ವ್ಯವಸ್ಥೆ ಮಾಡುತ್ತಿದ್ದರು. ನೃತ್ಯ ಸಂಗೀತ, ಚಲಚ್ಚಿತ್ರ ಮುಂತಾದ ಕಾರ್ಯಕ್ರಮಗಳು ಪ್ರತಿನಿತ್ಯ ಇರುತ್ತಿದ್ದವು. ಆದರೆ ಪಾದಯಾತ್ರಿಕರ ಅವಸ್ಥೆ ಕಠಿನವಾಗಿತ್ತು. ಪ್ರತಿನಿತ ರಾತ್ರಿ ಅವರಿಗೆ ಎರಡು ಮೂರು ತಾಸುಗಳಿಗಿಂತ ಹೆಚ್ಚು ನಿದ್ರೆ ಸಿಗುತ್ತಿರಲಿಲ್ಲ. ಅವರಲ್ಲಿ ಪ್ರತಿಯೊಬ್ಬರೂ ಶೀಘ್ರಕೋಪಿಯಾದರು. ಕೆಲವರಿಗೆ ಬಸ್ಸಿನ ಮೇಲೆ ನಿದ್ದೆ ಬರುತ್ತಲೇ ಇರಲಿಲ್ಲ.

ಈ ಬಲವಂತದ ನಡಿಗೆಯಿಂದ ಅವರಲ್ಲೆಷ್ಟೊ ಜನ ಬೇನೆ ಬಿದ್ದರು. ರಶಿಯನ್ ಭಾಷೆಯನ್ನು ಬಲ್ಲ ರೆಜಿನಾ ಫಿಶರ್ ಕೂಡ ಬೇನೆ ಬಿದ್ದಳು.

"ಇವರಿಗೆಲ್ಲ ವಿಪರೀತ ಜ್ವರ ಬರುತ್ತಿತ್ತು. ಆಸ್ಪತ್ರೆಯಲ್ಲಿ ಚಿಕಿತ್ಸೆ ನಡೆಯಬೇಕಾದ ಅವಶ್ಯಕತೆಯಿತ್ತು. ರಶಿಯನ್ನರು ಯೋಗ್ಯ ಔಷಧೋಪಚಾರವನ್ನೊದಗಿಸಿದರಾದರೂ ಬೇನೆ ಬಿದ್ದವರನ್ನು ಹಿಂದೆ ಬಿಟ್ಟು ನಮ್ಮ ಯಾತ್ರೆ ಮುಂದೆ ಸಾಗಲು ಅವರು ಬಿಡಲಿಲ್ಲ. ನಮ್ಮ ವಿಸಾದಂತೆ ನಾವೊಂದು ಗುಂಪಾಗಿಯೆ ಪ್ರಯಾಣ ಮಾಡಬೇಕಾಗಿತ್ತು. ಕಾಯದೆಯಂತೆ ನಾವೆಲ್ಲ ಒಟ್ಟಾಗಿಯೆ ಇರಬೇಕಾಗಿತ್ತು.

ಆದರೆ ಸಮಯ ಜಾರುತ್ತಲಿತ್ತು. ಅವರಿಗಿದ್ದ ಮಾರ್ಗ ಒಂದೇ ಆಗಿತ್ತು. ಬೇನೆಯವರನ್ನೆಲ್ಲ ಬಸ್ಸಿನಲ್ಲಿ ಮಲಗಿಸಿ ಅದನ್ನೆ ಒಂದು ಆಸ್ಪತ್ರೆಯನ್ನಾಗಿ ಮಾಡಿ ಉಳಿದವರು ನಡೆಯತೊಡಗಿದರು.

ಸ್ಮೊಲೆನ್ಸ್ಕನಲ್ಲಿ ಏನು ನಡೆಯಿತು ಎಂಬುದನ್ನು ಈ ಯಾತ್ರಿಕರಲ್ಲಿ ಒಬ್ಬರ ದಿನಚರಿಯಿಂದ ತಿಳಿಯಬಹುದು.

"ಆದಿತ್ಯವಾರ :— ಆಕಾಶ ಸ್ವಚ್ಛವಾಗಿತ್ತು. ಹವೆ ತಂಪಾಗಿತ್ತು. ಮೊದಲ ಪಾಳಿಯ ಜನ ಬೆಳಗು ಮುಂಜಾನೆ ಎರಡು ಗಂಟೆಗೇ ಎದ್ದು ನಡೆಯತೊಡಗಿದರು. ಹಸ್ತಪತ್ರಿಕೆಗಳ ಚೀಲಗಳನ್ನು ಹೆಗಲ ಮೇಲೆ ಹೊತ್ತುಕೊಂಡಿದ್ದೆವು. ಹುಣ್ಣಿಮೆಯ ಚಂದ್ರಪ್ರಕಾಶವಿದ್ದುದರಿಂದ ಬ್ಯಾಟರಿ ದೀಪ ಬೇಕಾಗಿರಲಿಲ್ಲ. ಕೈಕಾಲುಗಳು ನೋಯುತ್ತಿದ್ದವು. ಹಾದಿಯಲ್ಲಿ ಒಂದು ಪೆಟ್ರೋಲ್ ಪಂಪಿನ ಬಳಿಯಲ್ಲಿದ್ದ ಐವರಿಗೆ, ರಸ್ತೆಯಲ್ಲಿ ಹಾಡುತ್ತ ಹೋಗುತ್ತಿದ್ದ, ಮದ್ಯದ ಅಮಲೇರಿದ ಆರು ಜನರಿಗೆ, ಬಂದೂಕು ಧರಿಸಿ ನಾಯಿಯೊಂದರ ಜೊತೆಯಲ್ಲಿ ಹೋಗುತ್ತಿದ್ದ ಒಬ್ಬನಿಗೆ ಹಸ್ತಪತ್ರಿಕೆ ಕೊಟ್ಟೆವು.

"ಮುಂಜಾನೆ ೧೦ ಗಂಟೆ :— ರಸ್ತೆ ಬಲು ಕೆಟ್ಟದ್ದಿತ್ತು. ಮುಗ್ಗರಿಸಿ ಒಬ್ಬರ ಮೇಲೊಬ್ಬರು ಬೀಳುತ್ತಿದ್ದೆವು. ಬಾತುಕೋಳಿಗಳ ಹಿಂಡೊಂದು ಎದುರಾದಾಗ ಅವುಗಳ ಮೇಲೇ ಕಾಲಿಡುವಂತಾಯಿತು. ಕ್ಯಾಬೀಜಗಳನ್ನು ಕೊಯ್ಯುತ್ತಲಿದ್ದ ಒಕ್ಕಲಿಗರಿಗೆ ಹಸ್ತಪತ್ರಿಕೆ ಹಂಚಿದೆವು.

ಅವರಲ್ಲೊಬ್ಬ ೧೦ ರೂಬಲ್ಸ್‌ಗಳನ್ನು ನಮಗೆ ಕೊಡಮಾಡಿದ. ನಾವು ಫಲಾಹಾರಕ್ಕಾಗಿ ನಿಂತಾಗ ಸಮೀಪದ ಮನೆಯಿಂದ ಒಬ್ಬಾಕೆ ಬಿಸಿ ನೀರು ತಂದು ಕೊಟ್ಟಳು. ನಾವು ಕೈಕಾಲು ತೊಳೆದುಕೊಂಡೆವು. ನಾವು ಹ್ಯಾಟ್ ಧರಿಸದಿದ್ದುದಕ್ಕಾಗಿ ಅವಳು ನಮ್ಮನ್ನು ಛೀಮಾರಿ ಹಾಕಿದಳು. ರಶಿಯನ್ನರಿಗ ಹ್ಯಾಟ್ ಎಂದರೆ ಜೀವ.

"ಸಂಜೆ ಐದು ಗಂಟೆ :— ಸುಮಾರು ೫೦೦ ಜನರ ಎದುರು ಭಾಷಣ ಮಾಡಿದೆವು. ರಶಿಯನ್ ಶಾಂತಿ ಸಮಿತಿಯವರು ನಮ್ಮೊಂದಿಗೆ ಚರ್ಚಿಸುತ್ತಿದ್ದಾಗ ಎಲ್ಲರಿಗೂ ಶಾಂತಿ ಬೇಕು. ಆದರೆ ಎಲ್ಲರೂ ಶಸ್ತ್ರತ್ಯಾಗಮಾಡಲು ಹೆದರುತ್ತಾರೆ. ಇರುವ ಪ್ರಶ್ನೆಯೆಂದರೆ ಸದ್ಭಾವವಿಟ್ಟುಕೊಳ್ಳುವುದಲ್ಲ, ಆದರೆ ಇತರರ ಸದ್ಭಾವವನ್ನು ನಂಬುವುದಾಗಿದೆ ಎಂದು ನಾವಂದೆವು. ರಶಿಯನ್ನರು ಇದಕ್ಕೆ ಉತ್ತರವನ್ನೆ ಕೊಡಲಿಲ್ಲ."

ಅಕ್ಟೋಬರ್ ಒಂದರಂದು ಶಾಂತಿ ಪಾದಯಾತ್ರಿಕರು ಬೆಂದು ಬಸವಳಿದವರಾಗಿ ಮಾಸ್ಕೋದ ಉಪನಗರ ಪ್ರದೇಶದಲ್ಲಿ ಕಾಲಿಟ್ಟರು. ಶಾಂತಿ ಪಾದಯಾತ್ರಿಕರು ಬೀದಿಗಳಲ್ಲಿ ಹೋಗುತ್ತಿದ್ದ ಹಾಗೆ ಇಲ್ಲಿಯ ವರೆಗಿನ ೬,೫೦೦ ಮೈಲಿನ ಪಾದಯಾತ್ರೆಯಲ್ಲಿ ಅವರ ಪ್ರೀತಿಯ ಹಾಡಾಗಿ ಪರಿಣಮಿಸಿದ್ದ,

ನನ್ನ ಬಳಿ ಸುತ್ತಿಗೆಯೊಂದಿದ್ದರೆ
  ನಾನೊಂದು ಸಂದೇಶ ಜಡಿಯುತ್ತಿದ್ದೆ
    ಸ್ವಾತಂತ್ರ್ಯ !
ನನ್ನ ಬಳಿ ಸುತ್ತಿಗೆಯೊಂದಿದ್ದರೆ
  ನಾನೊಂದು ಸಂದೇಶ ಜಡಿಯುತ್ತಿದ್ದೆ
    ಶಾಂತಿ !

ಎಂಬರ್ಥದ ಹಾಡನ್ನು ಹಾಡುತ್ತ ನಡೆದರು. ಅಮೇರಿಕನ್ ಮತ್ತು ಯುರೋಪಿಯನ್ ಸುದ್ದಿಗಾರರು ಅವರನ್ನು ಭೆಟ್ಟಿಯಾದರು.

"ನಾವು ಒಬ್ಬರೊಬ್ಬರ ಬಗಲಲ್ಲಿ ಕೈಹಾಕಿ ನಡೆಯುತ್ತಿದ್ದೆವು. ನಾವು ಅಳುತ್ತ-ನಗುತ್ತ ನಡೆದಿದ್ದೆವು. ನಾವು ಮಾಸ್ಕೋಕ್ಕೆ ಬಂದಿದ್ದೆವು. ನಾವು ಇಷ್ಟು ದೂರ ನಡೆದುಕೊಂಡೇ ಬಂದೆವೆಂಬ ಮಾತಿನಲ್ಲಿ ನಮಗೆ ವಿಶ್ವಾಸವುಂಟಾಗದಂತಿತ್ತು ನಮ್ಮ ಮನಃಸ್ಥಿತಿ. ನಮ್ಮನ್ನಿಳಿಸಿದ ಮನೆಗಳಲ್ಲಿ ಟೆಲಿವಿಜನ್, ಬಿಸಿನೀರಿನ ಸ್ನಾನದ ವ್ಯವಸ್ಥೆ, ಕೊಣೆಗೇ ಊಟ ತಂದುಕೊಡುವ ಏರ್ಪಾಟು ಎಲ್ಲ ಇದ್ದವು" ಎಂದು ಸ್ನಾಟ್ ಹೇಳಿದ್ದಾನೆ.

ಮರುದಿನ ಮುಂಜಾನೆ ಯಾತ್ರಿಕರೆಲ್ಲ ಆರು ಗಂಟೆಗೇ ಎದ್ದು ಏಳು ಗಂಟೆಗೆ ಹೊರ ಹೊರಟರು. ಮಧ್ಯಾಹ್ನ ಎರಡು ಗಂಟೆಯಷ್ಟು ಹೊತ್ತಿಗೆ ಅವರು ೧೨-೧೩ ಮೈಲು ದೂರವಿದ್ದ ರೆಡ್-ಸ್ಕ್ವೇರ್ ತಲುಪಬೇಕಾಗಿತ್ತು. ಆಗ ಏಳು ರಾಷ್ಟ್ರಗಳ ಟೆಲಿವಿಜನ್ ಫೊಟೊಗ್ರಾಫರರು ರಶಿಯದಲ್ಲಿ ಅವರ ಪ್ರವೇಶದ ಅಧಿಕೃತ ಫೊಟೊ ತೆಗೆದುಕೊಳ್ಳಲಿದ್ದರು. ಪಾದಯಾತ್ರಿಕರಲ್ಲಿ ಇನ್ನೊಂದು ಸಮಸ್ಯೆಯೂ ಉದ್ಭವಿಸಿತ್ತು. ಅವರ ಬಳಿ ಕೇವಲ ೨೪,೦೦೦ ಹಸ್ತಪತ್ರಿಕೆಗಳಷ್ಟೇ ಉಳಿದಿದ್ದವು. ಅವರು ಲಂಡನ್ನಿನಿಂದ ತರಿಸಿಕೊಳ್ಳಬಯಸಿದ್ದ ಹಸ್ತಪತ್ರಿಕೆಗಳು ಬರುವುದು ಅದು ಹೇಗೊ ತುಂಬ ವಿಲಂಬವಾಗಿತ್ತು.

ಕೈಕಾಲು ವ್ಯನೋವನ್ನು ಮರೆತು ಪಾದಯಾತ್ರಿಕರು ಹೊರಟರು ಫೆಲ್ಟ್ ಹ್ಯಾಟ್ ಧರಿಸಿ ಗಂಭೀರ ವದನದಿಂದ ಅವರ ಜೊತೆ ಬರತೊಡಗಿದ ಕೆಲವರನ್ನು ಕಂಡ: ಅವರು ಕೈಬೀಸಿ 'ಹಲೊ' ಎಂದರು.

"ನಮ್ಮ ಸಂಗಡ ಬರತೊಡಗಿದ ಈ ಜನರು ಗುಪ್ತ ಪೋಲೀಸರೆಂದು ನಮಗೆ ಅವರನ್ನು ಕಂಡೊಡನೆ ತಿಳಿದ.ಹೋಯಿತು. ಆದರೆ ನಮಗೆ ಅದರಿಂದೇನೂ ಅನಿಸಲಿಲ್ಲ. ನಾವು ತುಸು ದೂರ ನಡೆಯುವಷ್ಟರಲ್ಲಿ ಸಾವಿರಾರು ಸ್ನೇಹಪರ ಜನ ನಮ್ಮನ್ನು ಮುತ್ತಿದರು. ನಮ್ಮ ಕೈಲಿದ್ದ ಹಸ್ತಪತ್ರಿಕೆಗಳನ್ನವರು ಕಸಿದುಕೊಂಡು ಕಿಸೆಗಳಲ್ಲಿ ತುರುಕಿಕೊಂಡರು. ಒಂದೇ ಒಂದನ್ನಾ

ದರೂ ಒಬ್ಬರೂ ಕೆಳಗೆಸೆಯಲಿಲ್ಲ. ಹಾ! ನಾವು ಬಂದದ್ದು ಸಾರ್ಥಕವಾಯಿತು." ಬೀ ಆ ಸಮಯವನ್ನು ನೆನೆಸಿಕೊಂಡಾಗ ಪುಲುಕಿತಳಾಗಿ ಹೇಳುತ್ತಾಳೆ.

ರೆಡ್ ಸ್ಕ್ವೇರಿನಲ್ಲಿ ಅವರು ಎರಡು ತಾಸು ಪ್ರಾರ್ಥನೆ ಮಾಡಿದರು. ಅನೇಕ ಹೆಂಗಸರು ಕೆಲ ಗಂಡಸರು ಅವರ ಜೊತೆ ಮೊಣಕಾಲೂರಿ ಕುಳಿತು ಪ್ರಾರ್ಥನೆ ಮಾಡಿದರು.

ಆ ನಂತರ ಅವರು ನಗರದಲ್ಲಿ ಸಂಚರಿಸುತ್ತಿದ್ದಾಗ ಸೈನ್ಯದ ರೇಡಾರ್ ಸ್ಟೇಶನ್ನೊಂದು ಅವರ ಕಣ್ಣಿಗೆ ಬಿತ್ತು. ಅವರು ಕೂಡಲೆ ಅದರ ಹೆಬ್ಬಾಗಿಲ ಹತ್ತರ ಪಿಕೆಟಿಂಗ್ ಆರಂಭಿಸಿ ನಿಶ್ಶಸ್ತ್ರೀಕರಣದ ಫಲಕಗಳನ್ನೆತ್ತಿ ಹಿಡಿದು ಶತಪಥ ಹಾಕಹತ್ತಿದರು.

ಸ್ಕಾಟ್ ಹೇಳಿದ್ದಾನೆ: "ನಾವು ಕೆಲ ರಶಿಯನ್ ಸೈನಿಕರೊಂದಿಗೆ ಮಾತಾಡಿದೆವು. ಅವರು ವಿವೇಕಿಗಳೂ ಕರುಣೆಯುಳ್ಳವರೂ ಎಂದು ನಮಗೆನಿಸಿತು. ವಿಪರೀತ ಚಳಿಯಿತ್ತು. ಅವರು ಬಿಸಿ ಚಹವನ್ನು ನಮಗಿತ್ತು ಸ್ಟಾಲಿನ್‌ಗ್ರಾಡ್ ಯುದ್ಧದ ಭೀಕರ ಕಥೆಯನ್ನು ಹೇಳಿದರು. ಶತ್ರು ಮಿತ್ರರಿಬ್ಬರನ್ನು ಕೂಡಿಯೆ ಕೊಂದು-ಹಾಕುವ, ಪೃಥ್ವಿಯನ್ನೆ ವಿಷಗಾಳಿಯಿಂದ ಕೆಡಿಸುವ ಪರಮಾಣು ಯುದ್ಧದ ವಿಚಾರವನ್ನು ನಾವವರಿಗೆ ಹೇಳಿದೆವು."

ಮಾಸ್ಕೋಗೆ ಅವರು ಬಂದ ಮೂರನೆ ದಿನ ರಶಿಯನ್ ಶಾಂತಿ ಸಮಿತಿಯ ಸದಸ್ಯರು ಅವರನ್ನು ನಸುಕಿನಲ್ಲಿಯೆ ಎಬ್ಬಿಸಿ ಉತ್ಸಾಹದಿಂದಲೆ "ನೀವಿಂದು ಶ್ರೀಮತಿ ಕುಶ್ಚೇವರನ್ನು ಭೆಟ್ಟಿಯಾಗಲಿದ್ದೀರಿ" ಎಂದು ಹೇಳಿ ಅವರನ್ನೆಲ್ಲ ಮೊದಲು ಝಾರರದಾಗಿದ್ದು ಈಗ ಯುವಕರ ಚಟುವಟಿಕೆಗಳಿಗಾಗಿ ಉಪಯೋಗಿಸುತ್ತಿದ್ದ ಒಂದು ಭವನಕ್ಕೆ ಕರೆದೊಯ್ದರು.

"ಶ್ರೀಮತಿ ಕ್ರುಶ್ಚೇವ್ ದಯಾಳು, ಕೋಮಲ ಹೃದಯದ ಹೆಣ್ಣುಮಗಳಾಗಿ ಕಂಡಳು. ನಾವೊಂದು ದೊಡ್ಡ ಕಪ್ಪು ಮೇಜಿನ ಸುತ್ತ ಕುಳಿತೆವು. ಅವಳು ಒಂದೇ ಸವನೆ ನಮ್ಮ ಕಪ್ಪುಗಳಲ್ಲಿ ಚಹ ಸುರಿಯುತ್ತಿದ್ದಳು. ಗಾಂಧಿ ಮತ್ತು ಅಹಿಂಸೆಯ ವಿಚಾರ ಅವಳಿಗೇನಾದರೂ ತಿಳಿದಿದೆಯೆ ಎಂದರಿಯಲು ನಾವು ಪ್ರಯತ್ನಿಸಿದೆವು. ಅವಳಿಗೆ ಅದು ಚೆನ್ನಾಗಿ ಗೊತ್ತಿತ್ತು. ಗಾಂಧೀಜಿಗೆ ಟಾಲ್‌ಸ್ಟಾಯರಿಂದ ತುಂಬ ಪ್ರೇರಣೆ ದೊರೆತಿತ್ತೆಂಬ ವಿಚಾರ ಅವಳಿಗೆ ತಿಳಿದಿತ್ತು. 'ಎಲ್ಲಿ ಪ್ರೇಮವಿದೆಯೊ ಅಲ್ಲಿ ದೇವರಿದ್ದಾನೆ.' ಎಂಬ ವಾಕ್ಯವನ್ನಾಕೆ ಉಚ್ಚರಿಸಿದಳು. ನಿಟ್ಟುಸಿರೊಂದನ್ನು ಬಿಟ್ಟು ಎಲ್ಲ ಪರಮಾಣು ಬಾಂಬುಗಳನ್ನು ಸಮುದ್ರದಲ್ಲಿ ಚೆಲ್ಲಿದರೆ ಒಳಿತಾಗುತ್ತಿತ್ತು ಎಂದಳಾಕೆ. ನಮ್ಮನ್ನು ಬೀಳ್ಕೊಡುವಾಗ ನಮ್ಮಲ್ಲಿ ಪ್ರತಿಯೊಬ್ಬರ ಕೈಯನ್ನೂ ಕುಲುಕಿದಳು. ನಾನು ಮತ್ತು ಸ್ಕಾಟ್ ನೂತನ 'ದಂಪತಿಗಳು' ಎಂದು ನಾನು ಹೇಳಿದಾಗ ನಕ್ಕು, 'ತುಂಬ ಮಕ್ಕಳಾಗಲಿ' ಎಂದು ಹಾರೈಸಿದಳು!" ಎಂದು ಬೀ ಶ್ರೀಮತಿ ಕುಶ್ಚೇವರೊಡನೆ ನಡೆದ ಭೆಟ್ಟಿಯನ್ನು ವರ್ಣಿಸಿದ್ದಾಳೆ.

ಮೂರನೆಯ ದಿನ ಪಾದಯಾತ್ರಿಕರನ್ನೆಲ್ಲ ಒಂದು ಬಸ್ಸಿನೊಳಗೆ ತುಂಬಿಕೊಂಡು ಮಾಸ್ಕೋ ಯುನಿವರ್ಸಿಟಿಯ ಕ್ಯಾಂಪಸ್‌ಗೆ ಕರೆದೊಯ್ಯಲಾಯಿತು. ಯಾತ್ರಿಕರಲ್ಲಿ ಅರ್ಧಕ್ಕರ್ಧ ಜನ ಅಲ್ಲಿಗೆ ಹೋಗಲಿಲ್ಲ. ಮಾಸ್ಕೋದಲ್ಲಿ ಮಾಡಿದ ಕಾರ್ಯಗಳಲ್ಲೆಲ್ಲ ಈ ಭೆಟ್ಟಿಯೆ ಮಹತ್ವದ್ದಾಗಿತ್ತು. ಎಂದು ಬ್ರಾಡ್ ಲಿಟ್ಲ್ ಹೇಳಿದ್ದಾನೆ.

ಮಾಸ್ಕೋದಲ್ಲಿಯೆ ಅತಿ ಎತ್ತರವಾದ ಗಗನ ಚುಂಬಿ ಕಟ್ಟಡವೊಂದರಲ್ಲಿ ಇಡೀ ವಿಶ್ವವಿದ್ಯಾಲಯವಿದೆ. ಈ ಕಟ್ಟಡದಲ್ಲಿ ವಿದ್ಯಾರ್ಥಿಗಳ ವಸತಿಗೃಹವೂ ಇದ್ದು ಒಟ್ಟು ೨೨,೦೦೦ ಕೋಣೆಗಳಿವೆ ಎಂದು ರಶಿಯನ್ನರು ಹೇಳಿದರು.

೨,೦೦೦ ವಿದ್ಯಾರ್ಥಿಗಳು ನೆರೆದಿದ್ದ ಸಭಾಗೃಹದಲ್ಲಿ ಬ್ರಾಡ್ ಲಿಟ್ಲ್ ಪರಮಾಣು ಶಸ್ತ್ರಗಳ ವಿಷಯವಾಗಿ ಮಾತನಾಡಿ ಅವುಗಳ ವಿನಾಶಕಾರಿ ನಿಷ್ಪ್ರಯೋಜಕತೆಯನ್ನೂ ಮಾನವ ಜಾತಿಯ ಮೂಲಭೂತ ಅವಶ್ಯಕತೆಗಳಾದ

ಆಹಾರ, ಆಶ್ರಯ, ಸ್ವಾತಂತ್ರ್ಯ, ಪ್ರೇಮಗಳನ್ನೂ ಕುರಿತು ಮಾತನಾಡಿದ. ಅಲ್ಲಿಯ ಪ್ರೊಫೆಸರನೊಬ್ಬ ಎದ್ದು ೨೦ ಮಿನಿಟುಗಳ ವರೆಗೆ ಸಿದ್ಧ ಭಾಷಣವೊಂದನ್ನೋದಿ ಪಾಶ್ಚಿಮಾತ್ಯ ರಾಷ್ಟ್ರಗಳೇ ಆಕ್ರಮಣಗಾರರು ಎಂದು ಬಲವಾಗಿ ಪ್ರತಿಪಾದಿಸಿದನು.

ಈ ಭಾಷಣ ನಡೆದಿದ್ದಾಗ 'ಶಿಷ್ಟಮಂಡಲದ ಪ್ರಮುಖರಿಗೆ' ಎಂದು ಬರೆದ ಚೀಟಿಯೊಂದನ್ನು ಬ್ರಾಡ್ ಲಿಟ್ಲ್‌ನ ಕೈಗೆ ಕೊಡಲಾಯಿತು. ಅದರಲ್ಲಿ "ಪ್ರಿಯ ಮಿತ್ರರೆ, ಈ ಪೊಲಸು ಅಧಿಕಾರಿ ಮತ್ತು ಅವನ ಹೇಳಿಕೆಗಳನ್ನೆಲ್ಲ ನಂಬಬೇಡಿ. ನಿಮ್ಮ ಕಾರ್ಯ ಮುಂದುವರಿಸಿ ನಾವೆಲ್ಲ ನಿಮ್ಮ ಬೆಂಬಲಕ್ಕಿದ್ದೇವೆ" ಎಂದು ಬರೆದಿತ್ತು

ಮಧ್ಯಾಹ್ನ ೧ ಗಂಟೆಗೆ ಸಭೆ ಮುಗಿಯುವ ಹೊತ್ತಾದಾಗ ವಿದ್ಯಾರ್ಥಿಗಳು ಬಾಗಿಲಲ್ಲಿ ನೆರೆದು "ನ್ಯೆತ್, ನ್ಯೆತ್" ಎಂದು ಕೂಗಿದರು. ಸಭೆ ಮತ್ತೆರಡು ತಾಸುಗಳ ವರೆಗೆ ನಡೆಯಿತು.

ಆ ವಿಶ್ವವಿದ್ಯಾಲಯದ ಬೃಹದಾಕಾರವೇ ಪಾದ ಯಾತ್ರಿಕರನ್ನು ನಿಯಂತ್ರಣದಲ್ಲಿಡಲು




ಆತಂಕವಾಯಿತು. ಉತ್ಸಾಹಿಗಳಾದ ವಿದ್ಯಾರ್ಥಿಗಳಿಂದ ಸುತ್ತುವರಿಯಲ್ಪಟ್ಟ ಅವರು ಖಾಲಿಯಿದ್ದ ವರ್ಗಕೋಣೆಗಳಿಗೆ ಹೋಗಿ ಅಲ್ಲಿ ಚರ್ಚಾಕೂಟ ಜರುಗಿಸಿದರು. ಅವರು ಭಾರತದಲ್ಲಿ ನಡೆದ ೨೦ ವರ್ಷ ದೀರ್ಘ ಕಾಲದ ಅಹಿಂಸಾತ್ಮಕ ಕ್ರಾಂತಿಯ ಬಗ್ಗೆ ಮಾತನಾಡಿದರು. ಮಾರ್ಟಿನ್ ಲ್ಯೂಥರ್ ಕಿಂಗರ ನೇತೃತ್ವದಲ್ಲಿ ಅಮೇರಿಕದ ದಕ್ಷಿಣ ಪ್ರಾಂತಗಳಲ್ಲಿ ನಡೆದ ಸತ್ಯಾಗ್ರಹದ ಬಗ್ಗೆ ವಿದ್ಯಾರ್ಥಿಗಳು ಕೇಳಿದ ಪ್ರಶ್ನೆಗಳಿಗೆ ಉತ್ತರವಿತ್ತರು.

ಎಲ್ಲ ಶಾಂತಿ ಪಾದಯಾತ್ರಿಕರನ್ನು ವಿಶ್ವವಿದ್ಯಾಲಯದ ನಾನಾ ಭಾಗಗಳಿಂದ ಹೊರಗೆ ಕರತಂದು ಹಳದಿ ಬಸ್ಸಿನಲ್ಲಿ ಕೂಡ್ರಿಸಿದಾಗ ಸಂಜೆ ೫ ಗಂಟೆಯಾಗಿ ಹೋಗಿತ್ತು.

"ನಮ್ಮ ಶಾಂತಿ ಪಾದಯಾತ್ರೆ ಮಾರನೆಯ ದಿನ ಮಧ್ಯಾಹ್ನಕ್ಕೆ ಮುಕ್ತಾಯವಾಯಿತು. ನಮ್ಮ ಹೊಟೆಲ್ಲಿನಿಂದ ರೆಡ್ ಸ್ಕ್ವೇರ್‌ಗೆ ನಡೆದು ಹೋಗಿ ಅಲ್ಲಿ ಸುಮಾರು ಒಂದು ತಾಸಿನ ವರೆಗೆ ಶಿರಬಾಗಿಸಿ ನಿಂತುಕೊಂಡವು. ನಮ್ಮ ಹಸ್ತ ಪತ್ರಿಕೆಗಳು ಎಂದೋ ಮುಗಿದುಹೋಗಿದ್ದವು. ಭಾಷಣ ಮಾಡುವ ಹುಮ್ಮಸು ನಮ್ಮಲ್ಲಾರಿಗೂ ಇರಲಿಲ್ಲ.

"ನಾನು ಕೃತಜ್ಞತಾ ಭಾವದಿಂದ ತುಂಬಿ ಹೋಗಿದ್ದೆ. ಏನೊ ಒಂದು ಪವಾಡದಲ್ಲಿ ನಾನು ಭಾಗಿಯಾಗಿದ್ದೆ ಎಂದು ನನಗನಿಸಿತು. ರಶಿಯದಲ್ಲಿ ಬೋಲ್ಶೆವಿಕ್ ಕ್ರಾಂತಿಯಾದ ಮೇಲೆ ರಶಿಯನ್ ಸರಕಾರವನ್ನು ಟೀಕಿಸುತ್ತ ಅದರ ಧೋರಣಕ್ಕೆ ವಿರುದ್ಧವಾದ ವಿಚಾರಗಳನ್ನು ಪ್ರಚುರಪಡಿಸುತ್ತ ಅಡ್ಡಾಡಿದ ತಂಡ ನಮ್ಮದೊಂದೇ ಆಗಿತ್ತು.

"ನಮ್ಮ ಸರಕಾರವನ್ನು ನಾವು ಟೀಕಿಸುತ್ತಿದ್ದುದೇ ಅದಕ್ಕೆ ಕಾರಣವಾಗಿತ್ತೆ? ಅಥವಾ ನಮ್ಮ ತಂಡವನ್ನು ತಮ್ಮ ಪ್ರಚಾರಕ್ಕೆ ಉಪಯೋಗಿಸಿಕೊಳ್ಳಬಹುದು ಅಥವಾ ನಮ್ಮನ್ನು

ತಮ್ಮ ಅಭಿಪ್ರಾಯಕ್ಕೆ ತಿರುಗಿಸಿಕೊಳ್ಳಬಹುದು ಎಂದು ಅವರಲ್ಲಿದ್ದ ಆಶೆ (ಅದೀಗ ಎಂದೋ ಕರಗಿ ಹೋಗಿತ್ತು) ಕಾರಣವಾಗಿತ್ತೆ? ಇಲ್ಲವೆ ನ್ಯಾಯವೂ ಸತ್ವಯುತವೂ ಆದ ನಮ್ಮ ಧ್ಯೇಯದ ಬಲವೇ ನಮ್ಮ ಕಾರ್ಯದಲ್ಲಿ ಯಶಸ್ಸು ತಂದು ಕೊಟ್ಟಿತ್ತೇ?

"'ಅಧಿಕಾರಕ್ಕೆ ಸತ್ಯದ ಮಾತು ಹೇಳಿರಿ' ಎಂಬ ಹಳೆಯ ಉಕ್ತಿಯೊಂದು ನನ್ನ ನೆನಪಿಗೆ ಬಂತು ನಾನು ಬೀ ಯತ್ತ ನೋಡಿದೆ. ಅವಳು ಮೌನವಾಗಿ ಕಣ್ಣೀರು ಸುರಿಸುತ್ತಿದ್ದಳು. ಆ ಮೇಲೆ ನೂರಾರು ರಶಿಯನ್ ಸ್ತ್ರೀಪುರುಷರು ನಮ್ಮ ಸುತ್ತಮುತ್ತ ತಲೆ ತಗ್ಗಿಸಿ ನಿಂತಿರುವುದು ನನಗೆ ಕಾಣಿಸಿತು. ಅವರಲ್ಲನೇಕ ಸ್ತ್ರೀಯರು ಕಣ್ಣೀರು ಕರೆಯುತ್ತಿದ್ದರು. ಅವರು ನಮ್ಮೊಂದಿಗೆ ಮಾತನಾಡುವಂತಿರಲಿಲ್ಲ. ನಾವು ಅವರೊಂದಿಗೆ ಮಾತಾಡುವಂತಿರಲಿಲ್ಲ. ಆದರೆ ಖಂಡಿತವಾಗಿಯೂ ಅವರು ನಮಗೆ ತಾವೂ ಶಾಂತಿಯುತವಾದ ಜಗತ್ತಿನಲ್ಲಿ ಬಾಳಬೇಕೆನ್ನುತ್ತೇವೆ ಎಂದು ಹೇಳಬಯಸಿದಂತಿತ್ತು" ಪಾದಯಾತ್ರೆಯ ಮುಕ್ತಾಯದ ಸಮಯವನ್ನು ಕುರಿತು ಸ್ಕಾಟ್ ಹೇಳಿದ್ದಾನೆ.

ಅಂದೇ ಸಂಜೆ ಶಾಂತಿ ಪಾದಯಾತ್ರಿಕರು ಮಾಸ್ಕೋದಿಂದ ಟ್ರೇನಿನಲ್ಲಿ ಹೆಲ್ಸಿಂಕಿಗೆ ಹೊರಟರು. ಪೂರ್ವ ಜರ್ಮನಿಯಲ್ಲಿ ಜಪ್ತು ಮಾಡಲ್ಪಟ್ಟ ಮಿಮಿಯೊಗ್ರಾಫ್ ಅವರಿಗೆ ಮರಳಿ ದೊರೆಯದೆ ಹೋದರೂ ಲಂಡನ್ನಿನಿಂದ ಬಂದಿದ್ದ ೨೦೦ ಪೌಂಡು ತೂಕದ ಹಸ್ತಪತ್ರಿಕೆಗಳ ಗಂಟು ಮಾತ್ರ ಸಿಕ್ಕಿತು. ಟ್ರೇನಿನಲ್ಲಿ ಹೋಗುವಾಗ ಅವರು ಅವುಗಳನ್ನು ಹಾದಿಯ ಊರುಗಳಲ್ಲಿ ಚೆಲ್ಲಿದರು.

ಮಾರನೆಯ ದಿನ ಸ್ಕಾಟ್ ಮತ್ತು ಬೀ ಜೆಟ್ ವಿಮಾನದಲ್ಲಿ ನ್ಯೂಯಾರ್ಕಿಗೆ ತೆರಳಿದರು. ಐಡಲ್‌ವೈಲ್ಡ್ ವಿಮಾನ ನಿಲ್ದಾಣದಿಂದ ಟ್ಯಾಕ್ಸಿಯಲ್ಲಿ ಕುಳಿತು ಹೋಗುವಾಗ ಬೀ ಹೇಳಿದಳು: "ನಾನು ಇನ್ನೆಂದೂ ಎಲ್ಲಿಗೂ ನಡೆದು ಹೋಗುವುದಿಲ್ಲ."

"ಛೆ! ನೀನು ನಡೆಯಲೇಬೇಕಾದೀತು. ಏಕೆನ್ನುವಿಯೊ, ನೀನು ನಿರುದ್ಯೋಗಿಯೂ ನಿರ್ಧನನೂ ಆದ ಒಬ್ಬನನ್ನು ಮದುವೆಯಾಗಿರುವಿ. ನನಗೆ ದೊರೆತ ಪಿತ್ರಾರ್ಜಿತ ಧನವನ್ನೆಲ್ಲ ಒಂದು ಧರ್ಮನಿಧಿಯನ್ನಾಗಿ ಮಾಡಲು ನಿರ್ಧರಿಸಿದ್ದೇನೆ. ಅದನ್ನು 'ಮಹಾತ್ಮಾ ಗಾಂಧಿ ನಿಧಿ' ಎಂದು ಕರೆಯುತ್ತೇನೆ. ಅದನ್ನು ಶಾಂತಿ ಪ್ರಚಾರ ಕಾರ್ಯಕ್ಕಾಗಿ ವಿನಿಯೋಗಿಸಲಾಗುವುದು. ಹಣ ಗಳಿಸಲು ನಾನು ನೀನು ಏನು ಮಾಡಬಹುದೊ ನನಗೆ ತಿಳಿಯದು. ಆದರೆ ನೀನು ಟೆಲಿವಿಜನ್‌ನಲ್ಲಿ ಕೆಲಸ ಮಾಡಿರುವಿಯಲ್ಲವೆ?" ಎಂದ ಸ್ಕಾಟ್.

ಆ ಮೇಲೆ ಈ ವಿಷಯ ಬಂದಾಗ ಬೀ ನನ್ನೊಡನೆ ಹೇಳಿದಳು: "ಆಗ ನಾನು ಕಣ್ಣು ರೆಪ್ಪೆ ಕೂಡ ಬಡಿಯಲಿಲ್ಲ. ನಿಜವಾಗಿಯೆಂದರೆ ನನಗಾಗ ಸಮಾಧಾನವೇ ಆಯಿತು. ಸ್ಕಾಟನ ಪಿತ್ರಾರ್ಜಿತ ಸಂಪತ್ತಿನ ವಿಷಯ ನನಗೆ ಸ್ವಲ್ಪ ತಲೆನೋವೇ ಆಗಿತ್ತು. ಶ್ರೀಮಂತ ಗಂಡನನ್ನು ಬುಟ್ಟಿಗೆ ಹಾಕಿಕೊಂಡ ಶಾಂತಿವಾದಿ ಎಂದು ಕರೆಯಿಸಿಕೊಳ್ಳುವುದು ನನಗೆ ಬೇಡವಾಗಿತ್ತು. ಮುಂದೆ ಕೆಲ ತಿಂಗಳುಗಳ ವರೆಗೆ ನಮಗೆ ಭಾಷಣದ ಕರೆಗಳು ಬಂದದ್ದರಿಂದ ನಾವು ನಿರುದ್ಯೋಗಿಗಳಾಗಿದ್ದೆವೆಂದು ಹೇಳಲು ಬಾರದು. ಕೈ ಬಿಗಿಹಿಡಿದು ಖರ್ಚು ಮಾಡುವುದು ನನಗೆ ಅಭ್ಯಾಸವಾದ ಮಾತು.

"ವಿವಾಹಾನಂತರ ಪರಸ್ಪರ ಶೀಘ್ರದಲ್ಲಿ ಒಗ್ಗಿಕೊಳ್ಳಬೇಕಾದರೆ ೬,೫೦೦ ಮೈಲು ಪಾದಯಾತ್ರೆ ಮಾಡಬೇಕು ಎಂದೇ ನಾನು ಶಿಫಾರಸು ಮಾಡುತ್ತೇನೆ. ನಾನು ಮತ್ತು ಸ್ಕಾಟ್ ಲಗ್ನವಾಗಿ ಎಷ್ಟೋ ವರ್ಷಗಳು ಸಂದಂತೆ ನನಗನಿಸುತ್ತಿದೆ."

*

This Magazine owned by the Loka Shikshana Trust, Hubli is printed and published by Shri H. R. Purohit at the Samyukta Karnatak Press, Koppikar Road, Hubli.